### ಪ್ರಕಾಶಕರ ನುಡಿ



ಪ್ರಸ್ತುತ ಜೀವನ ಶೈಲಿಯಾದ ಯಾಂತ್ರೀಕೃತ ಬದುಕಿನಲ್ಲಿ ಜೀವನ ನಡೆಸಲು ಬವಣೆ ಪಡುತ್ತಾ ಸಾಗುತ್ತಿರುವ ಸಮಾಜಕ್ಕೆ ಆಗಾಗ್ಗೆ ಕೆಲವರು ಉತ್ಕೃಷ್ಟವಾದ ಹಿಂದೂ ಸಂಸ್ಕೃತಿಯ ಪ್ರತೀಕಗಳಾದ ವೈದಿಕ, ಆಧ್ಯಾತ್ಮಿಕ ಸಂಪ್ರದಾಯ ಮತ್ತು ವಿಧಿ ವಿಧಾನಗಳ ಪರಂಪರೆಯನ್ನು ನೆನೆಪು ಮಾಡಿ ಜೀವಿಗಳ ಪರಮೋಚ್ಚ ಗುರಿಯಾದ “ನೀನು ಬದುಕು, ಇತರರನ್ನೂ ಬದುಕಲು ಬಿಡು” ಎಂಬ ಸಿದ್ಧಾಂತದೊಡನೆ ಮೋಕ್ಷ ಸಂಪಾದಿಸುವೆಡೆಗೆ ಗಮನ ಸೆಳೆಯಲು ಮಾರ್ಗದರ್ಶನ ತೋರುತ್ತಿರುವುದು ಚೇತೋಹಾರಿಯಾದ ಅಂಶ.

ಅಂತಹ ನಿಟ್ಟಿನಲ್ಲಿ ಶ್ರೀಯುತ ಮೋಹನ್‌ರವರ ದೈವಪ್ರೇರಿತ ಪ್ರಯತ್ನದ ಫಲವೇ ಈ ಸಣ್ಣ ಹೊತ್ತಿಗೆಯ ರೂಪದಲ್ಲಿ ದೇವಾಂಗ ಜನತೆಯು ಪ್ರಾಚೀನ ಕಾಲದಿಂದ ತಮ್ಮ ಜೀವನ ಶೈಲಿಯಲ್ಲಿ ಬದಲಾವಣೆಗಳೊಂದಿಗೆ ಹಾಸುಹೊಕ್ಕಾಗಿಸಿಕೊಂಡಿದ್ದ ಸಂಪ್ರದಾಯ ಮತ್ತು ಸಂಸ್ಕಾರಗಳನ್ನು ಲಭ್ಯತೆಯ ಮೇರೆಗೆ ಸಂಕಲನ ಮಾಡಿ ಮುಂದಿನ ಪೀಳಿಗೆಗೆ ತಲುಪಿಸುತ್ತಿರುವುದು ಹೆಮ್ಮೆಯ ಸಂಗತಿ.

ಈ ಬರವಣಿಗೆಯಲ್ಲಿರುವ ವಿಚಾರಗಳು ಸಹೃದಯ ಓದುಗರಲ್ಲಿ ಸಂಚಲನ ಉಂಟು ಮಾಡಿ ಜೀವನದ ಸಾರ್ಥಕ್ಯದೆಡೆ ಹೊರಳುವಂತಾಗಲಿ ಎಂಬುದೇ ನಮ್ಮ ಆಶಯ.



Agam Arts
Basaveshwaranagara.Bangalore - 560 079.

ಸಂಸ್ಕಾರಗಳು

- ಎಸ್. ಮೋಹನ್

# ಸಂಸ್ಕಾರಗಳು

ಎಸ್. ಮೋಹನ್



**ಸಂಸ್ಕಾರಗಳು** – ಎಸ್.ಮೋಹನ್‌ರವರು ಸಂಗ್ರಹಿಸಿದ ಹಿಂದೂ ಸಂಸ್ಕಾರಗಳ ಸಂಕಲನ

ಪ್ರಕಾಶಕರು: **ಆಗಮ್ ಆರ್ಟ್ಸ್,** ಬಸವೇಶ್ವರ ನಗರ, ಬೆಂಗಳೂರು–79
ಮೊಬೈಲ್ ನಂ.: 9964561994 / 9945706023

ಪ್ರಥಮ ಮುದ್ರಣ : 2017

ಪುಟಗಳು: 252

ಬೆಲೆ: ರೂ 250/–

ಉಪಯೋಗಿಸಿದ ಕಾಗದ: 60 ಜಿ.ಎಸ್.ಎಂ. ವೈಟ್ ಪೇಪರ್

ಪುಸ್ತಕದ ಅಳತೆ: 1/8 ಡೆಮ್ಮಿ

ಮುಖಪುಟ ವಿನ್ಯಾಸ: **ಆಗಮ್ ಆರ್ಟ್ಸ್,**

ಮುದ್ರಕರು : **ಗುಪ್ತ ಆಫ್‌ಸೆಟ್ ಪ್ರಿಂಟರ್ಸ್**
ವಿದ್ಯಾರಣ್ಯಪುರಂ,
ಮೈಸೂರು - 570008



## ಅರ್ಪಣೆ

ಕೆರೆಯ ನೀರನ್ನು ಕೆರೆಗೆ ಚೆಲ್ಲುವಂತೆ, ಮಾನ್ಯ ಸಹೃದಯಿಗಳಾದ
ಸಮಸ್ತ ಕುಲಬಾಂಧವರ ಸನ್ನಿಧಾನಕ್ಕೆ

## ಅರಿಕೆ

ಈ ಹೊತ್ತಿಗೆಯಲ್ಲಿ ನಮೂದಿಸಿರುವ ವಿಚಾರಧಾರೆಗಳು ಕೇವಲ ಕೃತಿ, ಸಾಹಿತ್ಯ ಮತ್ತು ಅಂತರ್ಜಾಲದಲ್ಲಿ ದೊರೆತ ಮಾಹಿತಿಗಳು ಹಾಗೂ ಸಜ್ಜನರ ಮೌಖಿಕ ವಿಷಯಗಳನ್ನು ಕ್ರೋಢೀಕರಿಸಿ ಬರೆಯಲಾಗಿದೆ. ಇದುವೆ ಸಂಸ್ಕೃತಿಯ ಅಂತಿಮ ವ್ಯಾಖ್ಯಾನವಲ್ಲ. ನನ್ನಂತೆ, ವಿಚಾರ ಅರಿಯಲು ಆಸಕ್ತರಾದ ಮಹನೀಯರನ್ನು ಗಮನದಲ್ಲಿರಿಸಿಕೊಂಡು ಅವರ ಹುಡುಕಾಟದ ಪ್ರಕ್ರಿಯೆಯಲ್ಲಿ ಕಿಂಚಿತ್ ಅಳಿಲುಸೇವೆಯನ್ನು ಸಲ್ಲಿಸುವ ಸದುದ್ದೇಶದಿಂದ ಪ್ರಸ್ತುತಪಡಿಸುತ್ತಿದ್ದೇನೆ.

**ಎಸ್. ಮೋಹನ್**



## ಪ್ರಾಸ್ತಾವಿಕ

ಪ್ರಾಕೃತಿಕ ನಿಯಮದಂತೆ, ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಸಂಸ್ಕೃತಿ, ಧಾರ್ಮಿಕ ಸಂಪ್ರದಾಯ, ವೈಯಕ್ತಿಕ ಆಚಾರ ವಿಚಾರಗಳು, ನಂಬಿಕೆ ಹಾಗೂ ಮಾನವೀಯ ಮೌಲ್ಯಗಳು ಕ್ರಮೇಣ ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯನ್ನು ಹಾಗೂ ಸುಧಾರಣೆಗಳನ್ನು ಪಡೆದುಕೊಳ್ಳುತ್ತಾ ಸಾಗುತ್ತಿರುವುದು ವೇದ್ಯ. ಭಾರತೀಯ ಸಂಸ್ಕೃತಿಯ ಮೂಲಾಧಾರಗಳಾದ ಸನಾತನ ಋಷಿ, ಮುನಿಗಳ ಧ್ಯಾನಾವಸ್ಥೆಯಲ್ಲಿ ಗೋಚರವಾದ ದೈವೀಕ ಸತ್ಯಗಳೆಂದು ತಿಳಿದಿರುವ ವೇದಗಳು, ಮಾನವನನ್ನು ಭಗವಂತನ ಬಳಿಗೆ ಕರೆದೊಯ್ಯುವ ಜ್ಞಾನವೆಂದೇ ಪ್ರಚಲಿತವಿರುವ ಉಪನಿಷತ್ತುಗಳು, ಸೃಷ್ಟಿ, ಪ್ರತಿಸೃಷ್ಟಿ ವಂಶ ಹಾಗೂ ವಂಶಾವಳಿಯ ಕಥನ ಮತ್ತು ಆ ಕಥನಗಳಿಗೆ ಪೂರಕವಾದ ಚಾರಿತ್ರ್ಯವನ್ನು ಒದಗಿಸುವಂಥ ಪುರಾಣಗಳು ಮತ್ತು ವೇದಗಳ ಅವಿಭಾಜ್ಯ ಅಂಗವಾಗಿರುವ ಜ್ಯೋತಿಷಗಳೇ ಆಗಿವೆ.

ಸಂಸ್ಕೃತಿ ಎಂಬುದು ಒಂದು ಬೃಹತ್ ಕಟ್ಟಡವಾದರೆ ಸಂಸ್ಕಾರಗಳೆಂಬುದು ಆ ಕಟ್ಟಡದ ಇಟ್ಟಿಗೆಗಳಂತೆ. ಸಂಸ್ಕಾರವೆಂಬ ಶಬ್ದವು ಪಳಗಿಸು ಅಥವಾ ಪರಿಶುದ್ಧಗೊಳಿಸು ಎನ್ನುವ ಮಹಾಧ್ಯೇಯವನ್ನು ಹೊಂದಿದ್ದು ಅಂತಹ ಸಂಸ್ಕಾರಗಳನ್ನು ಆಚರಿಸುವ ವ್ಯಕ್ತಿಯಿಂದ ಆತನಿಗೆ ವೈಯಕ್ತಿಕವಾಗಿ, ಸಾಮಾಜಿಕವಾಗಿ ಹಾಗೂ ಪ್ರಾಕೃತಿಕವಾಗಿಯೂ ಲಾಭವುಂಟಾಗುತ್ತದೆ. ಮಾನವೀಯ ಸದ್ಗುಣಗಳಿಂದ ಸಮಾಜದಲ್ಲಿ ವ್ಯಕ್ತಿಯ ವ್ಯಕ್ತಿತ್ವದ ಸರ್ವತೋಮುಖವಾದ ವಿಕಾಸಕ್ಕೆ ಕಾರಣಗಳಾಗುತ್ತವೆ. ಮುಖ್ಯವಾಗಿ ಆರೋಗ್ಯ, ಆಯುಷ್ಯ, ಐಶ್ವರ್ಯವೃದ್ಧಿ ಮತ್ತು ಮಾನಸಿಕ ನೆಮ್ಮದಿಗಳಲ್ಲದೇ ಯಜ್ಞ ಹೋಮಾದಿಗಳಿಂದ ಉಂಟಾಗುವ ಧೂಮ್ರದಿಂದ ಪ್ರಕೃತಿಯ ಮೇಲೆ ಉತ್ತಮವಾದ ಪರಿಣಾಮ ಹಾಗೂ ಸಭೆ, ಸಮಾರಂಭಗಳ ದೆಸೆಯಿಂದ ಸಮಾಜದಲ್ಲಿ ಸಮುದಾಯದ ಭಾವೈಕ್ಯತೆಯ ಜೊತೆಗೆ ದಾನ ಧರ್ಮಗಳ ಕಾರ್ಯಕ್ಕೂ ನಾಂದಿ ಹಾಡುತ್ತವೆ.

ಜೀವವಿಕಾಸದ ಬಗ್ಗೆ ಕೂಲಂಕಷವಾಗಿ ಅಧ್ಯಯನ ನಡೆಸಿ ಅವುಗಳ ವಿವಿಧ ಹಂತಗಳನ್ನು ಕರಾರುವಾಕ್ಕಾಗಿ ಗುರುತಿಸಿ, ಆಯಾ ಹಂತಗಳಿಗೆ ಅವಶ್ಯಕವಾದ ವಿಧಿ, ವಿಧಾನಗಳನ್ನು ನಿಯೋಜಿಸಿ ಜೀವದ ಸಂಪೂರ್ಣ ವಿಕಾಸವನ್ನು ಸಾಧ್ಯವಾದಷ್ಟರ ಮಟ್ಟಿಗೆ ಎಲ್ಲರೂ ಸಾಧಿಸಬೇಕೆಂಬ ಹಂಬಲದಿಂದ ಪ್ರಾಚೀನರು ಬಹಳ ಕಾಳಜಿಯಿಂದ ರೂಪಿಸಿದವುಗಳೇ ಸಂಸ್ಕೃತಿ. ಅಂತಹ ಸಂಸ್ಕೃತಿಗಳಲ್ಲಿ ಪ್ರತಿಬಿಂಬಿತವಾಗಿರುವ ಸದಾಶಯಗಳು, ಜೀವನದ ಆಸೆ, ಆಕಾಂಕ್ಷೆಗಳು ಕೇವಲ ಧಾರ್ಮಿಕ ಬದುಕನ್ನು ರೂಪಿಸುವುದಕ್ಕಷ್ಟೇ ಅಲ್ಲದೇ ಶೈಕ್ಷಣಿಕ, ಸ್ವಾಸ್ಥ್ಯ, ಜೀವನಾದರ್ಶ, ವ್ಯಾವಹಾರಿಕಾ ಅನುಕೂಲತೆ ಮತ್ತು ಸಾಮಾಜಿಕ ನಂಬಿಕೆಗಳನ್ನೂ ಸಾಧಿಸುವುದು ಆಗಿದೆ. ಪ್ರಮುಖವಾಗಿ ಜೀವನಾದರ್ಶವನ್ನು ಗಮನದಲ್ಲಿಟ್ಟುಕೊಂಡು ಚಿಂತಿಸಿದರೆ, ಜೀವನವೆಂಬುದು ಭಗವಂತನು ಕರುಣಿಸಿದ ಅತ್ಯಮೂಲ್ಯವಾದ ವರದಾನ. ನಂಬಿಕೆಯಂತೆ, ಮಾನವನಾಗಿ ಹುಟ್ಟುವುದೇ ಒಂದು ಸುಯೋಗ. ಹಾಗಾಗಿ ಇದನ್ನು ಸದುಪಯೋಗಪಡಿಸಿಕೊಂಡು ಶಾಂತಿಯಿಂದ ನಳನಳಿಸಿ, ಸುಪ್ತವಾದ ಶಕ್ತಿಯು ಪ್ರಕಟಗೊಳ್ಳಲು ಅನುವು ಮಾಡಿಕೊಂಡು ವ್ಯಕ್ತಿಗತವಾಗಿ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಿ ಸಮಾಜವನ್ನೂ ಸಮೃದ್ಧಗೊಳಿಸುತ್ತಾ, ಜೀವನವನ್ನು ಒಂದು ಸುಂದರ ವನವನ್ನಾಗಿಸಿಕೊಂಡು ಬಾಳಬೇಕೆಂಬ ಗುರಿಯೆಡೆಗೆ ಒಯ್ಯುವ ಮಹತ್ತರವಾದ ಸಾಧನವೇ ಸಂಸ್ಕಾರ.

ಇನ್ನು, ಸಂಸ್ಕಾರಗಳ ಸಂಖ್ಯೆಗಳನ್ನು ಅವಲೋಕಿಸಿದರೆ, ಮನು ಸ್ಮೃತಿಯ ಪ್ರಕಾರ ಹದಿಮೂರು ಸಂಸ್ಕಾರಗಳು, ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಹನ್ನೆರಡು ಸಂಸ್ಕಾರಗಳು, ಆಂಗಿರಸ ಸ್ಮೃತಿಯಲ್ಲಿ ಇಪ್ಪತ್ತೈದು ಸಂಸ್ಕಾರಗಳು, ವ್ಯಾಸ ಸ್ಮೃತಿ ಮತ್ತು ಜಾತುಕರ್ಣ್ಯ ಸ್ಮೃತಿಯಲ್ಲಿ ಹದಿನಾರು ಸಂಸ್ಕಾರಗಳು ಮತ್ತು ಗೌತಮ ಧರ್ಮಸೂತ್ರದ ಅನ್ವಯ ಉಲ್ಲೇಖಿಸಿರುವ ಸಂಸ್ಕಾರಗಳ ಸಂಖ್ಯೆ ನಲವತ್ತೆಂಟು. ಅವುಗಳಲ್ಲಿ ನಲವತ್ತು ಬಾಹ್ಯ ಸಂಸ್ಕಾರಗಳು ಮತ್ತು ಎಂಟು ಆಂತರಿಕ ಸಂಸ್ಕಾರಗಳು. ಹೀಗೆ ಸಂಸ್ಕಾರಗಳ ಸಂಖ್ಯೆಗಳತ್ತ ಚಿತ್ತ ಹರಿಸಿದರೆ ಗೊಂದಲವಾಗುವುದು ಸಹಜ! ಆದರೆ ಜಾಣರಾಗಿ, ಯಾವುದೇ ರೀತಿಯ ಗೊಂದಲಕ್ಕೆ ಎಡೆಗೊಡದೆ, ಆ ಸಮಗ್ರ ಸಂಸ್ಕಾರಗಳಲ್ಲಿ ಅಡಗಿರುವ ಮೂಲೋದ್ದೇಶದ ಕಡೆಗೆ ಮಾತ್ರ ಗಮನ ಹರಿಸಿದಾಗ ಅರಿವಾಗುವುದೇನೆಂದರೆ, ಮಾನವರು ತಾಳ್ಮೆಯಿಂದ ಸಕಲ ಜೀವಿಗಳಲ್ಲಿ ದಯೆ ಹೊಂದಿ ಅಸೂಯೆರಹಿತರಾಗಿ ಅಂತರಂಗ ಮತ್ತು ಬಹಿರಂಗ ಶುದ್ಧಿಯನ್ನು



ಕಾಪಾಡಿಕೊಂಡು ಪ್ರಶಾಂತಚಿತ್ತರಾಗಿ ದಾನ ಮತ್ತು ತ್ಯಾಗಗಳನ್ನು ಪ್ರವೃತ್ತಿಯಾಗಿಸಿಕೊಂಡು ವೈರಾಗ್ಯದೆಡೆಗೆ ಗಮನ ಹರಿಸಿದರೆ ಇಹಪರಗಳೆರಡರಲ್ಲೂ ಸಲ್ಲುವ ದಾರಿಯು ಸುಲಭವಾಗಿ ಗೋಚರವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಇಲ್ಲಿ ವೈರಾಗ್ಯವೆಂದರೆ, ಮನೆ ಮಠಗಳನ್ನು ಬಿಟ್ಟು, ಸಹಜವಾಗಿ ನಮ್ಮೆಲ್ಲರ ಮೇಲಿರುವ ಜವಾಬ್ದಾರಿಯನ್ನು ತೊರೆದು ಯಾವುದೋ ಬೆಟ್ಟದ ತಪ್ಪಲಿನಲ್ಲಿ ಏಕಾಂಗಿಯಾಗಿ ಕುಳಿತು ತಪಸ್ಸು ಮಾಡುವುದಲ್ಲಾ! ಬದಲಿಗೆ, "ಈಸಬೇಕು ಇದ್ದು ಜೈಸಬೇಕು" ಎನ್ನುವ ನಾಣ್ಣುಡಿಯಂತೆ, ಸಂಸಾರದಲ್ಲಿದ್ದುಕೊಂಡು; ನೀರಿನಲ್ಲಿರುವ ತಾವರೆಯ ಎಲೆಯು ನೀರಿನಿಂದಲೇ ಬದುಕಿದರೂ ನೀರನ್ನು ತಾಗಿಸಿಕೊಳ್ಳುವುದಿಲ್ಲವೋ ಹಾಗೆಯೇ, ಈ ಭವ ಸಾಗರದ ಅವಿಭಾಜ್ಯ ಅಂಗಗಳಾದ ಧರ್ಮ–ಅಧರ್ಮ, ಸುಖ–ದುಃಖ, ಹಿಂಸೆ–ಅಹಿಂಸೆ, ಮೃದುತ್ವ–ಕ್ರೌರ್ಯ ಮತ್ತು ಸತ್ಯ–ಅಸತ್ಯಗಳೆಂಬ ಅಸಂಖ್ಯಾತ ದ್ವಂದ್ವಗಳೆಲ್ಲವನ್ನು ಸಮನಾಗಿ ಸ್ವಾಗತಿಸಿ ಅನುಭವಿಸುತ್ತಾ ಅವುಗಳ ಮಿತಿಯನ್ನು ಅರಿತು ಉನ್ನತವಾದ ಏಳ್ಗೆಯೆಡೆಗೆ ಧಾವಿಸಲು ಭಗವಂತನ ಸ್ಮರಣೆಯನ್ನು ನಿಷ್ಕಲ್ಮಷ ಚಿತ್ತದೊಡನೆ ಪಾಲಿಸಿದರೆ ಮಾನವರು ಧನ್ಯರಾದಂತೆಯೇ ಸರಿ.

ಸಮಗ್ರ ಸಂಸ್ಕಾರಗಳನ್ನು ಪ್ರಮುಖವಾಗಿ ಎರಡು ವಿಭಾಗಗಳಾಗಿಸಿದರೆ, ಮೊದಲನೆಯದು ಬ್ರಹ್ಮಸಂಸ್ಕಾರ ಮತ್ತು ಎರಡನೆಯದು ದೈವಸಂಸ್ಕಾರ. ಷೋಡಶ ಸಂಸ್ಕಾರಗಳನ್ನು ಬ್ರಹ್ಮಸಂಸ್ಕಾರವೆಂದೂ ಪಾಕಯಜ್ಞ, ಹವಿಯಜ್ಞ ಮತ್ತು ಸೋಮಯಾಗ ಇತ್ಯಾದಿಗಳನ್ನು ದೈವಸಂಸ್ಕಾರ ಎನ್ನುತ್ತಾರೆ. ಬ್ರಹ್ಮಸಂಸ್ಕಾರದಿಂದ ಮನುಷ್ಯನು ಋಷಿ, ಮುನಿಗಳಲ್ಲಿರುವ ಉತ್ತಮ ಗುಣಗಳನ್ನು ಹೊಂದಿ ಅವರಂತೆ ಸನ್ಮಾನ ಹೊಂದುವ ಅಥವಾ ಅವರ ಸಮೀಪವರ್ತಿಯಾಗಿ ಅವರಲ್ಲಿರುವ ಸಕಲ ಯೋಗ್ಯತೆಗಳನ್ನು ಪಡೆದು ವಿಕಾಸಗೊಳ್ಳುವನು. ದೈವಸಂಸ್ಕಾರದಿಂದ ಭಗವಂತನ ಗುಣ ವಿಶೇಷಗಳು ಮತ್ತು ಯೋಗ್ಯತೆಗಳೊಂದಿಗೆ ಗೌರವಾದರಗಳನ್ನು ಪಡೆಯುವನು. ಧಾರ್ಮಿಕ ಆಚರಣೆಗಳು ಮತ್ತು ಆಧುನಿಕ ವಿಜ್ಞಾನವು ಪರಸ್ಪರ ಪರಾವಲಂಬಿಗಳಾಗಿವೆ ಎಂಬುದು ತೆರೆದಿಟ್ಟ ಪುಸ್ತಕ. ಬಲ್ಲವರ ಪ್ರಕಾರ, ಪ್ರಪಂಚದಲ್ಲಿರುವ ಯಾವೊಂದು ವಸ್ತುವು ಸಂಸ್ಕಾರ ಹೊಂದದಿದ್ದರೆ ಅವುಗಳು ಉಪಯೋಗಕ್ಕೆ ಯೋಗ್ಯವಲ್ಲ ಎಂಬುದು. ವಾಸ್ತವತೆ ಹೀಗಿರುವಾಗ ಮಾನವನೂ ಸಹ ಸಂಸ್ಕಾರಕ್ಕೆ ಒಳಪಟ್ಟು

ತಾನು ಮಾಡುವ ಪ್ರತಿಯೊಂದು ಕ್ರಿಯೆಯನ್ನು ಸ್ವಚೇತನನಾಗಿ ಚಿತ್ತದಲ್ಲಿ ಸ್ಥಿರಪಡಿಸಿಕೊಂಡು ಆಚರಿಸಬೇಕು. ಚೈತನ್ಯವು ಸಕಲ ಜೀವಿಗಳಲ್ಲೂ ಯಾವುದೇ ಭೇದಭಾವವಿಲ್ಲದೇ ಸಮಾನವಾಗಿದ್ದು, ಚಂಚಲ ಚಿತ್ತದಿಂದಾಗಿ ಪ್ರತೀಕ್ಷಣದಲ್ಲಿ ಬದಲಾಗುವ ಮಾನವರ ಭಾವನೆಗಳಿಂದ ಕ್ರಿಯಾಶಕ್ತಿಯು ನಷ್ಟವಾಗದೇ ಚೈತನ್ಯವನ್ನು ಸಮಾನ ರೀತಿಯ ಆಚರಣೆಗಳೊಂದಿಗೆ ಮುಂದುವರಿಸಿ ಕೊಂಡು ಹೋಗಲು ಸದವಕಾಶವನ್ನು ಕಲ್ಪಿಸಿಕೊಡುವಲ್ಲಿ ಸಂಸ್ಕಾರಗಳೆಂಬುದು ಒಂದು ಬಗೆಯ ಸೂತ್ರಬಂಧನ. ಅತಿಶಯವಾದ ಹಾಗೂ ಅತ್ಯಮೂಲ್ಯವಾದ ಈ ಸೂತ್ರಬಂಧನಕ್ಕೆ ಒಮ್ಮೆ ಒಳಗಾದರೆ, ಸಮಾಧಾನ, ಉನ್ನತಿ, ಆತ್ಮತೃಪ್ತಿ ಹಾಗೂ ದಿವ್ಯ ಭಾವನೆಗಳು ತಾನೇ ತಾನಾಗಿ ಲಭ್ಯವಾಗುವುದರಲ್ಲಿ ಎಳ್ಳಷ್ಟು ಸಂಶಯವಿಲ್ಲ.

ಮುಂದುವರೆದು, ಪ್ರಚಲಿತದಲ್ಲಿರುವ ಷೋಡಶ ಸಂಸ್ಕಾರಗಳನ್ನು ಗಮನದಲ್ಲಿರಿಸಿಕೊಂಡು, ಇಲ್ಲಿನ ಬರವಣಿಗೆಯಲ್ಲಿ ಜಗದ ಹುಟ್ಟು, ಮಾನವನ ಜನನದ ಮೊದಲು ಮತ್ತು ನಂತರದ ಆಚರಣೆಗಳನ್ನು ವೃಕ್ಷ–ಬೀಜ ನ್ಯಾಯದಂತೆ ಮೊದಲಿಗೆ ಗರ್ಭಾದಾನದಿಂದ ಆರಂಭಿಸಿ ಕ್ರಮೇಣ ಪುಂಸವನ, ಸೀಮಂತೋತ್ಸವ, ಹುಟ್ಟಿದ ನಂತರದಲ್ಲಿ ಮಗುವಿನ ಸರ್ವತೋಮುಖವಾದ ಬೆಳವಣಿಗೆಗೆ ಪೂರಕವಾದ ನೆಲೆಗೆ ತರುವಲ್ಲಿನ ಜಾತಕರ್ಮ, ನಾಮಕರಣ, ನಿಷ್ಕ್ರಮಣ ಮತ್ತು ಮಗುವಿನ ದೈಹಿಕ ಹಾಗೂ ಆರೋಗ್ಯಪೂರ್ಣತೆಗೆ ಪೂರಕವಾದ ಆಚರಣೆಗಳಾದ ಅನ್ನಪ್ರಾಶನ, ಚೂಡಾಕರ್ಮ, ಕರ್ಣವೇಧ ಸಂಸ್ಕಾರಗಳ ಜೊತೆಗೆ ವ್ಯಕ್ತಿಯೋರ್ವನಿಗೆ ಬೌದ್ಧಿಕ ಹಾಗೂ ಮಾನಸಿಕ ಸಂಪತ್ತನ್ನು ವೃದ್ಧಿಸುವ ನಿಟ್ಟಿನಲ್ಲಿ ಪಾಲಿಸುವ ಸೂಕ್ತ ಆಚರಣೆಗಳಾದ ಅಕ್ಷರಾಭ್ಯಾಸ, ಉಪನಯನ, ವೇದಾರಂಭ, ಕೇಶಾಂತ, ಸಮಾವರ್ತನ ಹಾಗೂ ಜೀವನದ ಪ್ರಮುಖ ಘಟ್ಟವಾದ ವಿವಾಹ ಮತ್ತು ವಿವಾಹದ ನಂತರ ಆಚರಿಸುವ ಆಚರಣೆಗಳ ಬಗ್ಗೆ ತಿಳಿಸುತ್ತಾ ಮುಂದೆ ಮನುಕುಲದ ಜೀವನದ ಮಹತ್ತರ ನಿಲುವು ಹಾಗೂ ಕೊನೆಯ ಸ್ತರಗಳಲ್ಲಿ ಆಚರಿಸುವ ವಿಧಿವಿಧಾನಗಳ ಬಗ್ಗೆ ಸುದೀರ್ಘವಾಗಿ ತಿಳಿಸುವ ಮೂಲಕ ಅಂತ್ಯೇಷ್ಠಿಯನ್ನು ನಿರೂಪಿಸಲಾಗಿದೆ. ಅಲ್ಲದೆ, ಆ ಸಂಸ್ಕಾರಗಳಿಗೆ ಪೂರಕವಾದ ಹಿನ್ನೆಲೆಯೊಂದಿಗೆ ಉಪಯೋಗಿಸುವ ವಸ್ತುಗಳು, ವಿಧಿ ವಿಧಾನಗಳು, ಹಸೆ ಮತ್ತು ಹಾಡುಗಳನ್ನು ನಿವೇದಿಸುವುದರ ಜೊತೆಗೆ ದೇವಾಂಗ ಕುಲದ ಕಿರು ಪರಿಚಯವನ್ನು ಮಾಡಲಾಗಿದೆ.



ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ತಿಳಿಸಿರುವಂತೆ, "ಯಾವುದೇ ಕರ್ಮವನ್ನು ಕಾರ್ಯರೂಪಕ್ಕೆ ತರುವ ಮುನ್ನ ತಿಳಿದುಕೊ, ನಂಬು ನಂತರ ಆಚರಿಸು" ಎಂಬಂತೆ, ಕಾಲಚಕ್ರದ ಜೊತೆಗೆ ಸುತ್ತುತ್ತಾ ಬದಲಾವಣೆಗಳನ್ನು ಸ್ವಾಗತಿಸುವ ಅನಿವಾರ್ಯತೆಯ ಕೂಸಾಗಿಯೂ ಮುಂದೆ ಸಾಗುತ್ತಿರುವ ಜೀವನದ ವಿಧಿ ವಿಧಾನಗಳು ತಮ್ಮ ಮಹತ್ತರವಾದ ಮೂಲೋದ್ದೇಶವನ್ನು ಮಾತ್ರ ಜೋಪಾನವಾಗಿ ಉಳಿಸಿಕೊಂಡು ಮುನ್ನಡೆಯುತ್ತಿರುವುದನ್ನು ಅರಿತು ಯಥಾಶಕ್ತಿ ಅವುಗಳನ್ನು ಅರ್ಥೈಸಿಕೊಂಡು ನಿಷ್ಠೆಯಿಂದ ಪಾಲಿಸುತ್ತಾ ಅವುಗಳಿಂದಾಗುವ ಸಕಲ ಅಭಿವೃದ್ಧಿಯನ್ನು ಅನುಭವಿಸಿ ಮುಂದಿನ ಜನಾಂಗಕ್ಕೆ ತಲುಪಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯ ಎಂಬುವುದಕ್ಕೆ ಸಹೃದಯ ಓದುಗರ ಸಹಮತವಿದೆಯೆಂದು ನನ್ನ ಅಭಿಪ್ರಾಯ.

ಹಾಗೆಯೇ, ಇಲ್ಲಿನ ಬರವಣಿಗೆಯಲ್ಲಿ ಯಾವುದೇ ಬಗೆಯ ತಪ್ಪುಗಳು ನನ್ನ ಅರಿವಿನ ಪರಿಧಿಯನ್ನು ಮೀರಿ ನುಸುಳಿದ್ದ ಪಕ್ಷದಲ್ಲಿ, ಸಹೃದಯ ಓದುಗರು ವಿಶಾಲ ಹೃದಯದಿಂದ ಅದನ್ನು ಮನ್ನಿಸಿ ಸೂಕ್ತವಾಗಿ ಸರಿಪಡಿಸಿಕೊಳ್ಳುವರೆಂಬ ಅಚಲ ನಂಬಿಕೆಯೊಡನೆ ಸಮರ್ಪಿಸುತ್ತಿದ್ದೇನೆ.

**ಎಸ್. ಮೋಹನ್**

## ಕೃತಜ್ಞತೆ

ವಿಧಿ–ವಿಧಾನ ಹಾಗೂ ಅವುಗಳ ಹಿನ್ನೆಲೆಯ ಕುರಿತ ವಿಚಾರ ಸಂಗ್ರಹಣ ಕಾರ್ಯದಲ್ಲಿ ಶ್ರಮವಹಿಸಿ ಗಮನಾರ್ಹ ಮಾಹಿತಿಗಳನ್ನು ಪೂರೈಸಿದ ಶ್ರೀಮತಿ ನಾಮಗೊಂಡ್ಲು ನಾಗರತ್ನಮ್ಮ, ಶ್ರೀಮತಿ ಎಸ್. ದಾಕ್ಷಾಯಿಣಿ ಚಂದ್ರು. ಶ್ರೀಯುತ ಕೆಂಕರೆ ರಮಾಕಾಂತ್, ಶ್ರೀಯುತ ಹುಲ್ಲುಮನೆ ದೇವರಾಜ್ ಶ್ರೀಯುತ ಡಿ.ಕೆ. ಚಂದ್ರಶೇಖರ್ ರವರಿಗೆ ಮತ್ತು ಕೃತಿಯ ಕರಡು ಪ್ರತಿಯನ್ನು ಅವಲೋಕಿಸಿ ಸೂಕ್ತ ಸಲಹೆ ನೀಡಿದ ಶ್ರೀಮತಿ ನಂದಿನಿ ಉಪಾಧ್ಯರವರಿಗೂ ನಾನು ಆಭಾರಿ.

ಮುಂದುವರೆದು ಕೃತಿಯ ಸಂಪೂರ್ಣ ಹಕ್ಕುಗಳನ್ನು ದೇವಾಂಗ ಮಂಡಲಿ (ರಿ.) ದೊಡ್ಡಬಳ್ಳಾಪುರ ವಹಿಸಿಕೊಂಡು ತನ್ಮೂಲಕ ಕೃತಿಯನ್ನು ಸಮಸ್ತ ಕುಲಬಾಂಧವರಿಗೆ ತಲುಪಿಸುವ ನಿಟ್ಟಿನಲ್ಲಿ ಸಹಮತ ನೀಡಿದ ಮಾಜಿ ಅಧ್ಯಕ್ಷರಾದ ಶ್ರೀಯುತ ಎಂ.ಜಿ. ಶ್ರೀನಿವಾಸ್‌ರವರಿಗೆ ಮತ್ತು ಹಾಲಿ ಅಧ್ಯಕ್ಷರಾದ ಶ್ರೀಯುತ ವಿ. ತಿಮ್ಮಶೆಟ್ಟರಿಗೂ ನಾನು ಋಣಿ.

**ಎಸ್. ಮೋಹನ್**





**ಶ್ರೀ ಗಾಯತ್ರಿ ಪೀಠ ಮಹಾ ಸಂಸ್ಥಾನ**
ಹೇಮಕೂಟ, ಹಂಪಿ –583 239
ಕಛೇರಿ: ದೇವಾಂಗ ಹಾಸ್ಟೆಲ್ ಕಟ್ಟಡ, ದೇವಾಂಗ ಸಂಘ ರಸ್ತೆ
ಬೆಂಗಳೂರು – 560 027, 080–2440708
**SRI GAYATHRI PEETHA MAHA SAMSTHANA**
**HEMAKUTA, HAMPI - 583 239**
*Office: Devanga Hostel Building, Devanga Sangha Road*
*Nelamangal, Bangalore - 560027, 080 - 2240708*



## ಮುನ್ನುಡಿ

ಶ್ರೀಯುತ ಮೋಹನ್‌ರವರು ನಮ್ಮ ಜನತೆಯ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಉನ್ನತೀಕರಣಕ್ಕೆ ಸಹಾಯವಾಗಬಹುದು ಎನ್ನುವ ಧ್ಯೇಯದೊಡನೆ ಹಿಂದೂ ಧರ್ಮದ ಸಂಸ್ಕಾರಗಳು ಮತ್ತು ಆಚಾರ–ವಿಚಾರಗಳನ್ನು ಪ್ರಸ್ತುತ ಲಭ್ಯವಿರುವ ಮೂಲಗಳಿಂದ ಸಾಧ್ಯವಾದಷ್ಟು ಮಟ್ಟಿಗೆ ಸಂಗ್ರಹಿಸಿದ್ದಾರೆ. ಸಮುದಾಯದ ಪರವಾಗಿ ಇವರಿಗಿರುವ ಕಾಳಜಿ ಅಭಿನಂದನಾರ್ಹವಾದುದ್ದು. ಹೀಗೆ ಜನಾಂಗದ ಬಗ್ಗೆ ಕಾಳಜಿ ಉಳ್ಳವರ ಸಂಖ್ಯೆ ನೂರ್ಮಡಿಯಾಗಲಿ ಎನ್ನುವ ಹಾರೈಕೆ ನಮ್ಮದು. ಈ ಸಂದರ್ಭದಲ್ಲಿ ಹಂಪಿ ಹೇಮಕೂಟ ಮಹಾಸಂಸ್ಥಾನ ಗಾಯತ್ರಿ ಪೀಠದ ಪರವಾಗಿ ನಾವು ಜನಾಂಗದ ಬಗ್ಗೆ ಕೆಲವು ಮಾತುಗಳನ್ನು ಹೇಳಬೇಕಾಗಿದೆ.

ಹರಪ್ಪಾ–ಮೊಹೆಂಜೊದಾರೋ ಉತ್ಖನನದಲ್ಲಿ ಲಭ್ಯವಾಗಿರುವ ಮಾಹಿತಿಯ ಆಧಾರದ ಮೇಲೆ ಹೇಳುವುದಾದರೆ, ನಮ್ಮದು ಪ್ರಾಚೀನ ಕಸುಬು ಹಾಗೂ ಪ್ರಾಚೀನ ಜನಾಂಗ. ನಮ್ಮ ಈ ಕಸುಬು ನಾಗರೀಕತೆಯ ಜೊತೆಜೊತೆಗೇ ಬೆಳೆದು ಬಂದಿದೆ ಎನ್ನುವುದನ್ನು ನಮ್ಮ ಜನಾಂಗ ಮೊದಲು ಅರ್ಥಮಾಡಿಕೊಳ್ಳಬೇಕಿದೆ. ಮಾನವನ ನಾಗರೀಕತೆ ಮತ್ತು ನೇಕಾರಿಕೆಯ ಕಸುಬನ್ನು ಪ್ರತ್ಯೇಕವಾಗಿ ನೋಡಲು ಸಾಧ್ಯವೇ ಇಲ್ಲ. ಮನುಷ್ಯನ ಮೂಲಭೂತ ಅಗತ್ಯಗಳಲ್ಲಿ ಊಟದ ನಂತರದ ಸ್ಥಾನವನ್ನು ಬಟ್ಟೆಗೆ ನೀಡಲಾಗಿದೆ, ಅಂದರೆ ನೇಕಾರಿಕೆಗೆ ಮನುಷ್ಯನ ಮೂಲಭೂತ ಅಗತ್ಯಗಳ ಸಾಲಿನಲ್ಲಿ ಎರಡನೆಯ ಸ್ಥಾನ. ಇನ್ನು ಹಿಂದು ವರ್ಣಾಶ್ರಮದಲ್ಲಿ ದುಡಿಯುವ ವರ್ಗ ಎಂದು ಕರೆಯಲ್ಪಡುವ ಹದಿನೆಂಟು ಪಣಕಟ್ಟಿನ ಜನಾಂಗಕ್ಕೆ ಸೇರಿದವರು ನಾವು. ಹದಿನೆಂಟು ಪಣಕಟ್ಟು ಎಂದರೇನು? ಅದರ ಬೇರುಗಳು ಎಲ್ಲಿವೆ ಎನ್ನುವುದು ಕೂಡಾ ಒಂದು ಗಹನವಾದ ಪ್ರಶ್ನೆ. ಸಂಸ್ಕೃತಿಯ ಬಗ್ಗೆ ಹೇಳುವುದಾದರೆ ನಮ್ಮ ಹಿರಿಯರು ಬಾಳಿ ಬದುಕಿದ ರೀತಿ, ನೀತಿ, ಅವರು ನಡೆದು ಬಂದ ಹಾದಿ, ನಮ್ಮ ಪೂರ್ವಜರು ಅನುಸರಿಸಿದ ಜೀವನ ವಿಧಾನವೇ ನಮ್ಮ ಸಂಸ್ಕೃತಿ. ಒಟ್ಟಾರೆಯಾಗಿ ಹೇಳುವುದಾದರೆ ನಮ್ಮದು ಕಾಯಕ ಸಂಸ್ಕೃತಿ,

ಶ್ರಮಿಕ ಸಂಸ್ಕೃತಿ, ನೇಕಾರಿಕೆ ಸಂಸ್ಕೃತಿ. ಈ ನೇಕಾರಿಕೆ ಕೇವಲ ಒಂದು ಕಸುಬು ಮಾತ್ರವಲ್ಲ, ದೀಪವು ತಾನು ದಹಿಸಿಕೊಂಡು ಸುತ್ತ-ಮುತ್ತಲು ಬೆಳಕು ನೀಡುವಂತೆ ಜನರಿಗೆ ಒಳಿತನ್ನೇ ಮಾಡುತ್ತಾ ಸಮಾಜಕ್ಕೆ ಒಳ್ಳೆಯದನ್ನೇ ನೀಡುತ್ತಾ ಅದೇ ಮಾರ್ಗದಲ್ಲಿ ಬಾಳಿ ಬದುಕುತ್ತಾ ಬಂದ ಸಂಸ್ಕಾರವಂತ ಜನಾಂಗ ನಮ್ಮದು. ನಮಗೆ ಬಟ್ಟೆ ಇಲ್ಲದಿದ್ದರೂ ಧರ್ಮ ಪಾಲನೆಯ ಹೆಸರಿನಲ್ಲಿ ವಸ್ತ್ರದಾನ ಮಾಡುತ್ತಾ ಬಂದವರು ನಾವು.

ಜಗತ್ತಿನಲ್ಲಿ ಎಷ್ಟೋ ವೃತ್ತಿ ಹಾಗೂ ಜನಾಂಗಗಳು ಇವತ್ತು ಹೇಳ ಹೆಸರಿಲ್ಲದಂತೆ ನಾಮಾವಶೇಷವಾಗಿ ಹೋಗಿವೆ. ಆದರೆ ನಮ್ಮ ನೇಕಾರ ವೃತ್ತಿ ಹಾಗೂ ಜನಾಂಗ ಈಗಲೂ ಅಸ್ತಿತ್ವದಲ್ಲಿ ಇರುವುದು ಈ ಜನಾಂಗದ ಅಂತಃಸತ್ವ ಹಾಗೂ ಗಟ್ಟಿತನಕ್ಕೆ ಒಂದು ಉತ್ತಮ ನಿದರ್ಶನ. ಬಹಳ ಮಂದಿಗೆ ಈ ವಿಚಾರ ತಿಳಿದಿರಲಾರದು, ಹಿಂದೆ ನಮ್ಮವರು ಮಸ್ಲಿನ್ ಎನ್ನುವ ಒಂದು ಬಗೆಯ ನವಿರಾದ ಬಟ್ಟೆಯನ್ನು ತಯಾರಿಸುತ್ತಿದ್ದರು. ಅದು ಎಷ್ಟು ನವಿರು ಎಂದರೆ, ಹದಿನಾರು ಗಜದ ಒಂದು ಸೀರೆಯನ್ನು ಒಂದು ಸಣ್ಣ ಬೆಂಕಿಪೊಟ್ಟಣದಲ್ಲಿ ಮಡಚಿ ಇಡಬಹುದಾದಷ್ಟು ಚಿಕ್ಕದಾಗಿ ಇರುತ್ತಿತ್ತಂತೆ! ಅಂತಹ ಅದ್ಭುತವಾದ ಕಸುಬನ್ನು ಮೈಗೂಡಿಸಿಕೊಂಡಿದ್ದ ಜನಾಂಗ ನಮ್ಮದು. ಅಂತಹ ಬಟ್ಟೆಯನ್ನು ತಯಾರಿಸುತ್ತಿದ್ದರು ಎನ್ನುವ ಒಂದೇ ಕಾರಣಕ್ಕೆ ಬ್ರಿಟಿಷರು ಹಳೆಯ ಬೆಂಗಳೂರು ಒಂದರಲ್ಲೇ ಸುಮಾರು ಇನ್ನೂರು ಜನ ನೇಕಾರರ ಕೈಹೆಬ್ಬೆರಳುಗಳನ್ನು ಕತ್ತರಿಸಿದ್ದರು. ಇಂತಹ ಅನೇಕ ಕಷ್ಟ-ಕಾರ್ಪಣ್ಯಗಳ ನಡುವೆಯೂ ನಮ್ಮ ಜನಾಂಗದವರು ಈ ನೇಕಾರಿಕೆಯ ಕಸುಬಿಗೆ ಬೆನ್ನು ತೋರಿಸಿದವರಲ್ಲ. ಬದಲಿಗೆ ಈ ಉತ್ಕೃಷ್ಟ ಕಸುಬನ್ನು ಜತನದಲ್ಲಿ ಕಾಪಿಟ್ಟು ಉಳಿಸಿ ಬೆಳೆಸಿಕೊಂಡು ಬಂದವರು ನಮ್ಮ ಹಿರಿಯರು.

ಇತ್ತೀಚಿನ ದಿನಗಳಲ್ಲಿ ನೇಕಾರಿಕೆ ಉದ್ಯೋಗಕ್ಕೆ ತೊಡಗಿಕೊಂಡವರಲ್ಲಿ ಕೆಲವರಾದರೂ ಅಲ್ಪ-ಸ್ವಲ್ಪ ಹಣವನ್ನು ಸಂಪಾದಿಸಿದ್ದಾರೆ. ಈ ಉದ್ಯೋಗದಿಂದ ನೆಮ್ಮದಿಯ ಮತ್ತು ಗೌರವದ ಬದುಕನ್ನು ಕಟ್ಟಿಕೊಂಡಿದ್ದಾರೆ. ನಮ್ಮ ಇಂದಿನ ನೆಮ್ಮದಿಯ ಬದುಕಿನ ಹಿಂದೆ ನಮ್ಮ ಪೂರ್ವಿಕರ, ಹಿರಿಯರ ಶ್ರಮ ಹಾಗೂ ತ್ಯಾಗವಿದೆ, ಅವರು ಹರಿಸಿದ ಬೆವರಿನ, ರಕ್ತದ ಕಲೆ ಇದೆ. ಸಮುದಾಯದ ಹಿತಕ್ಕಾಗಿ ಹಂಬಲಿಸಿದ ಗುರು ಹಿರಿಯರ ಆಶೀರ್ವಾದವಿದೆ ಎನ್ನುವುದನ್ನು ನಾವು ಎಂದಿಗೂ ಮರೆಯಬಾರದು.

ನಮ್ಮ ಸಮುದಾಯವು ಕ್ರಮಿಸಿದ ಸಾವಿರಾರು ವರ್ಷಗಳ ಹಾದಿಯಲ್ಲಿ ಕೆಲವನ್ನಾದರೂ ನೆನಪಿನಲ್ಲಿ ಇಟ್ಟುಕೊಳ್ಳಲೇಬೇಕು. ಇವುಗಳಲ್ಲಿ ಪ್ರಪ್ರಥಮವಾಗಿ ಕೈಮಗ್ಗಕ್ಕೆ ವಿದ್ಯುತ್ ಸಂಪರ್ಕ ಕಲ್ಪಿಸಲು ಶ್ರಮಿಸಿದವರು ಯಾರು ? ದೂರದ ಊರುಗಳಿಂದ ಜಾಕಾರ್ಡ್ ಮಗ್ಗಗಳನ್ನು ತಂದು ನೇಕಾರಿಕೆ ಉದ್ಯೋಗಕ್ಕೆ



ಹೊಸ ಆಯಾಮವನ್ನು ನೀಡಿದವರು ಯಾರು? ಮಗ್ಗದ ಕತ್ತಲಲ್ಲೇ ತಮ್ಮ ತಮ್ಮ ಬದುಕನ್ನು ಸವೆಸುತ್ತಿದ್ದ ನೇಕಾರ ಜನಾಂಗದ ಶಿಕ್ಷಣಕ್ಕಾಗಿ ಶ್ರಮಿಸಿದವರು ಯಾರು? ಎನ್ನುವುದನ್ನು ನಾವು ನೆನಪು ಮಾಡಿಕೊಳ್ಳಬೇಕಾಗಿದೆ. ಅಂತಹ ಮಹನೀಯರ ಹಾದಿಯಲ್ಲಿ ನಾವುಗಳು ಹೆಜ್ಜೆ ಹಾಕಿ ಮುಂದೆ ಸಾಗಬೇಕಿದೆ. ಇದರ ಜೊತೆಗೆ ನಮ್ಮ ಜನಾಂಗ ಇನ್ನೂ ಹೆಚ್ಚು ಸದೃಢವಾಗಿ ಬೆಳೆಯಬೇಕಾದರೆ ನಾವುಗಳು ಏನು ಮಾಡಬೇಕು ಎನ್ನುವುದು ನಮ್ಮ ಮುಂದಿರುವ ಬಹುದೊಡ್ಡ ಸವಾಲು.

ಜಾಗತೀಕರಣದ ಹೊಸ-ಹೊಸ ನೀತಿಗಳಿಗೆ ದೇಶ ಮುಖಾ-ಮುಖಿಯಾಗುತ್ತಿರುವ ಈ ಸಂದರ್ಭದಲ್ಲಿ, ನಮ್ಮ ಜನಾಂಗ ಮತ್ತು ಕಸುಬಿಗೆ ಎದುರಾಗಿರುವ ಸವಾಲುಗಳೇನು ಎನ್ನುವ ನಿಟ್ಟಿನಲ್ಲಿ ಚಿಂತಿಸಿ, ನಮ್ಮ ಸಮುದಾಯದ ಹಿತದೃಷ್ಟಿಯಿಂದ ನಾವುಗಳು ಜಾಗತಿಕ ಮಟ್ಟದಲ್ಲಿ ಸ್ಪರ್ಧೆ ಎದುರಿಸಬೇಕಾದ ಅಗತ್ಯವಿದೆ. ಈ ನಿಟ್ಟಿನಲ್ಲಿ ಶ್ರೀಗುರುಪೀಠವು ದೇವಾಂಗ ಸಮುದಾಯದ ಶ್ರೇಯೋಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ನಡೆಸಿಕೊಂಡು ಬರುತ್ತಿದೆ. ಇದರಲ್ಲಿ ಸಮುದಾಯದ ಹೆಚ್ಚು ಹೆಚ್ಚು ಜನರ ಭಾಗವಹಿಸುವಿಕೆಯ ಅಗತ್ಯವಿದೆ.

ಶ್ರೀಯುತ ಮೋಹನ್‌ರವರು ತುಂಬ ಉತ್ಸುಕತೆಯಿಂದ ಹಿಂದೂ ಧರ್ಮದ ಸಂಸ್ಕಾರ ಮತ್ತು ಆಚಾರ-ವಿಚಾರಗಳ ಬಗ್ಗೆ ಸವಿಸ್ತಾರವಾಗಿ ವಿಷಯಗಳನ್ನು ಸಂಗ್ರಹಿಸಿ ಈ ಹೊತ್ತಿಗೆಯನ್ನು ಹೊರತರುತ್ತಿರುವುದು ನಮಗೆ ತುಂಬಾ ಸಂತೋಷವಾಗಿದೆ. ಸಮಸ್ತ ಭಕ್ತಾದಿಗಳಿಗೆ ಈ ಹೊತ್ತಿಗೆಯಲ್ಲಿರುವ ವಿಚಾರಗಳು ತಮ್ಮ ಜ್ಞಾನಾರ್ಜನೆಗೆ ಬಳಸಿಕೊಳ್ಳಲು ಉಪಯುಕ್ತವಾಗಿದೆ. ಇನ್ನೂ ಇಂತಹ ಹಲವು ಧರ್ಮ ಕಾರ್ಯಗಳನ್ನು ಮಾಡಲು ಶ್ರೀಯುತ ಮೋಹನ್‌ರವರಿಗೂ ಮತ್ತು ಅವರ ಕುಟುಂಬದವರಿಗೂ ಶ್ರೀ ಗಾಯತ್ರಿ ಮಾತೆಯು ಆಯುರಾರೋಗ್ಯ ಭಾಗ್ಯವನ್ನು ಕೊಟ್ಟು ಕರುಣಿಸಲಿ ಎಂದು ನಾವು ತುಂಬು ಹೃದಯದಿಂದ ಹಾರೈಸುತ್ತೇವೆ.

ಇಂತಿ ಭಗವತ್ ಸೇವೆಯಲ್ಲಿ

**ಪೂಜ್ಯ ಶ್ರೀ ಶ್ರೀ ಶ್ರೀ ದಯಾನಂದಪುರಿ ಮಹಾಸ್ವಾಮೀಜಿಯವರು**

ಶ್ರೀ ಗಾಯತ್ರಿ ಪೀಠ ಮಹಾಸಂಸ್ಥಾನ, ಶಾಖಾ ಮಠ
ಕೆಂಪಲಿಂಗನ ಹಳ್ಳಿ, ನೆಲಮಂಗಲ
ಬೆಂಗಳೂರು ಮಹಾನಗರ



**ಶ್ರೀಕಂಠ ಗುಂಡಪ್ಪ**
ಸುವರ್ಣ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು
ನಿವೃತ್ತ ಅಧಿಕಾರಿ, ಯುಕೋ ಬ್ಯಾಂಕ್
ವಿಮರ್ಶಕ, ದೂರದರ್ಶನ, ಬಾನುಲಿ ಮತ್ತು ರಂಗಭೂಮಿ ಕಲಾವಿದ

# ಸಸ್ನೇಹದ ನುಡಿಗಳು

ನಂಬಿಕೆಗೊಬ್ಬ ದೇವರು, ವಿಶ್ವಾಸಕ್ಕೊಂದು ಆಚರಣೆ ಎಂಬುದು ಹಿರಿಯರ ನುಡಿ. ಆಚಾರ–ವಿಚಾರ ಸಂಸ್ಕಾರಗಳು ಎಂಬ ಮಾತು ಆಸ್ತಿಕ ಮಹಾಶಯರ ನಾಲಿಗೆಯ ಮೇಲೆ ನಲಿದಾಡುತ್ತಿರುವುದು ನಾಸ್ತಿಕರನ್ನು ಆಗಾಗ್ಗೆ ಕೆರಳಿಸುತ್ತಿರುವುದು ಸುಳ್ಳಲ್ಲ. ವಿಜ್ಞಾನ ಮತ್ತು ತಂತ್ರಜ್ಞಾನ ಬೆಳೆದಿರುವ ಇಂದಿನ ಆಧುನಿಕ ಜಗತ್ತಿನಲ್ಲಿ ಈ ಮಾತುಗಳು ಅವರ ಪಾಲಿಗೆ ಕೇವಲ ಕುರುಡು ನಂಬಿಕೆಗಳು. ಬದುಕಿಗೆ ಕ್ರಿಯಾಶೀಲತೆ, ಬದುಕುವವರಿಗೆ ಚಲನಶೀಲತೆಯನ್ನು ಈ ಸಂಸ್ಕಾರಗಳು ತಂದುಕೊಡಬಲ್ಲವು ಎಂಬ ಕಿಂಚಿತ್ ಪರಿಜ್ಞಾನ ಇದ್ದಿದ್ದರೆ ಅಂತಹ ಉದಾಸೀನದ ಮಾತುಗಳು ನಾಸ್ತಿಕ ಮಹಾಶಯರ ಬಾಯಿಂದ ಬರುತ್ತಿರಲಿಲ್ಲವೇನೋ?

ಹೌದು, ಶ್ರೀಯುತ ಮೋಹನ್‌ರವರ "ಸಂಸ್ಕಾರಗಳು" ಕೃತಿಯನ್ನು ಓದಿದಾಗ ನನ್ನ ಮನಸ್ಸಿನಲ್ಲಿ ಸಹಜವಾಗಿ ಮೂಡಿಬಂದ ಪ್ರತಿಕ್ರಿಯೆ ಇದು. ಶ್ರೀಯುತರ ಆಸಕ್ತಿ, ಬಹುಮುಖ ವ್ಯಕ್ತಿತ್ವವನ್ನು ಗಮನಿಸಿದರೆ ನನಗೆ ದಿಗ್ಭ್ರಮೆ ಜೊತೆಗೆ ಹೆಮ್ಮೆ ಎನಿಸುತ್ತದೆ. ಅನ್ಯಸಂಸ್ಕೃತಿಯ ಪರಿಸರದಲ್ಲಿ ಉದ್ಯೋಗ ನಿರ್ವಹಿಸುತ್ತಿದ್ದರೂ ಭಾರತದ ಸನಾತನ ಸಂಸ್ಕೃತಿ, ಸಂಸ್ಕಾರಗಳ ಬಗ್ಗೆ ಸದಾ ಚಿಂತಿಸುತ್ತಾ ಸಮಾಜದ ಉನ್ನತಿಗಾಗಿ ಕೃತಿಗಳನ್ನು ರಚಿಸುತ್ತ ತಮ್ಮ ಅಮೂಲ್ಯವಾದ ಸಮಯವನ್ನು ಸದ್ವಿನಿಯೋಗ ಪಡಿಸಿಕೊಳ್ಳುತ್ತಿರುವುದು ನಿಜಕ್ಕೂ ಶ್ಲಾಘನೀಯವಷ್ಟೇ ಅಲ್ಲ ಅನುಕರಣೀಯವೂ ಹೌದು.

ತಮಗೆ ಲಭ್ಯವಾಗಬಹುದಾದ "ವರ"ವನ್ನು ತನ್ನ ವ್ಯಕ್ತಿತ್ವ ರೂಪಿಸಿದ ಸಮಾಜಕ್ಕೆ ಋಣಸಂದಾಯ ಮಾಡಲೇಬೇಕೆಂಬ ಬದ್ಧತೆಯಿಂದ ದೇವಾಂಗ ಮಂಡಳಿ (ರಿ.) ಗೆ ಈ ಕೃತಿಯನ್ನು ಅರ್ಪಿಸಿರುವುದು, "ಕೆರೆಯ ನೀರನ್ನು ಕೆರೆಗೆ ಚೆಲ್ಲಿ..." ಎಂದು ಪ್ರಸ್ತಾವನೆಯಲ್ಲಿ ಭಿನ್ನವಿಸಿಕೊಂಡಿರುವ ಮಾತುಗಳಲ್ಲಿನ ಅಂತರಾರ್ಥ.

"ಸಂಸ್ಕಾರಗಳು" ಕಟ್ಟುಪಾಡುಗಳ ಕಿರುಹೊತ್ತಿಗೆ ಎನ್ನಲೇ? ವಿಚಾರಗಳ ವಿಶ್ವಕೋಶ ಎನ್ನಲೇ? ಸಂಸ್ಕಾರಗಳ ಸಂಜೀವಿನಿ ಎನ್ನಲೇ? – ಯಾವ ವಿಶೇಷವಾಚಕಗಳಿಂದ ಕರೆದರೂ ಅದು ಕಡಿಮೆಯೇ! ಇದು ಖಂಡಿತ



ಉತ್ಪ್ರೇಕ್ಷೆಯ ಮಾತಲ್ಲ. ನಂಬಿಕೆಟ್ಟವರಿಲ್ಲ ಎಂಬ ದಾಸವಾಣಿಯಂತೆ ನಂಬಿಕೆಯೇ ದೇವರು ತನಗೂ ಆ ದೇವರಿಗೂ ಇರುವ ಸಂಬಂಧವನ್ನು ಮನಸ್ಸಿನಲ್ಲಿ ಸಂಕಲ್ಪ ಮಾಡಿಕೊಂಡು ನಿತ್ಯ ಬವಣೆಗಳಿಂದ, ಜಡತ್ವದಿಂದ ಹೊರಬರಲು, ಸಂಸಾರದಲ್ಲಿ, ಸಮಾಜದಲ್ಲಿ ಪರಸ್ಪರ ಸಂಬಂಧಗಳನ್ನು, ಸ್ನೇಹವನ್ನು ಗಟ್ಟಿಯಾಗಿ ಬೆಸೆಯುವಂತೆ ಮಾಡುವುದೇ ಸಂಸ್ಕಾರಗಳನ್ನು ಆಚರಿಸುವುದರ ಗುಟ್ಟು. ಈ ನಿಟ್ಟಿನಲ್ಲಿ ನೆರೆದವರ ಮನಸ್ಸುಗಳು ಪ್ರಫುಲ್ಲಗೊಂಡು ಸುಂದರ ಹಾಗೂ ಆರೋಗ್ಯಪೂರ್ಣ ಸಮಾಜದ ಸೃಷ್ಟಿಗೆ ಸಹಕಾರಿಯಾಗುತ್ತದೆ.

ಈ ಕೃತಿಯಲ್ಲಿ ಸೃಷ್ಟಿಯ ಉಗಮ, ವಿಕಾಸ ಮತ್ತು ಮಾನವನ ಹುಟ್ಟು – ಈ ಸ್ಥಿತ್ಯಂತರಗಳಲ್ಲಿ ಕ್ರಮವಾಗಿ ಅಂಕುರಿಸಿದ ಹಲವಾರು ಪದ್ಧತಿಗಳು ಸಂಸ್ಕಾರಗಳಾಗಿ ರೂಪುಗೊಂಡ ಬಗೆ, ಗರ್ಭದಾನದಿಂದ ಹಿಡಿದು ಅಂತ್ಯೇಷ್ಠಿಯವರೆಗೆ ಕೈಗೊಳ್ಳಬೇಕಾದ ಆಚರಣೆಗಳನ್ನು ಸವಿಸ್ತಾರವಾಗಿ ನಿರೂಪಿಸಲಾಗಿದೆ.

ಸೂಕ್ಷ್ಮವಾಗಿ ಅವಲೋಕಿಸಿದಾಗ ಯಾವ ವಿವರಣೆಯು ಅನಗತ್ಯ ಹಾಗೂ ಅನುಚಿತವೆನಿಸುವುದಿಲ್ಲ. "ಅಯ್ಯೋ ಬಿಡಿ ಈ ಕಾಲದಲ್ಲಿ ಆ ಪದ್ಧತಿಯನ್ನೆಲ್ಲ ಯಾರು ಮಾಡ್ತಾ ಕೂರ್ತಾರೆ, ಹೇಗೋ ಅನುಕೂಲಕ್ಕೆ ತಕ್ಕಹಾಗೆ ಸರಳವಾಗಿ ಮಾಡಿ ಮುಗಿಸಿದರೆ ಆಗದೇ?" ಎಂದು ಪ್ರಶ್ನಿಸುವ ಆಧುನಿಕ ನಾಗರೀಕ ಮಹಾಶಯರಿಗೆ ಸಾತ್ವಿಕವಾಗಿ ಎಚ್ಚರಿಸುವ ಕಾಯಕ ಈ ಕೃತಿಯ ಮೂಲಕ ಕೃತಿಕಾರರಾದ ಶ್ರೀಯುತ ಮೋಹನ್‌ರವರು ಮಾಡಿದ್ದಾರೆ. ಯಾವ ಸಂದರ್ಭಕ್ಕೆ ಯಾವ ಪದಾರ್ಥಗಳು ಎಷ್ಟೆಷ್ಟು ಪ್ರಮಾಣದಲ್ಲಿ ಹೇಗೆ ಬಳಸಬೇಕು, ಹೇಗೆ ಸಿದ್ಧತೆ ಮಾಡಿಕೊಳ್ಳಬೇಕೆಂಬ ವಿವರಣೆಯ ಜೊತೆಗೆ ಆಚರಣೆಗಳ ಹಿಂದಿರುವ ವೈಜ್ಞಾನಿಕ ಸತ್ಯಗಳನ್ನು ತಿಳಿಸಿರುವುದು ಈ ಕೃತಿಯ ಹೆಗ್ಗಳಿಕೆ. ಉದಾಹರಣೆಗೆ ಒತ್ತಡದಲ್ಲಿದ್ದ ಮನಸ್ಸಿಗೆ ಹಣೆಯ ಮೇಲೆ ಧರಿಸುವ ತಿಲಕ ಜ್ಞಾನತಂತುಗಳನ್ನು ಉದ್ದೀಪನಗೊಳಿಸಿ ಹೇಗೆ ತಂಪು ನೀಡುತ್ತದೆ ಎಂಬ ಮಾಹಿತಿ ಇರಬಹುದು, ಹೋಮ ಹವನಗಳಿಂದ ಹೊರಹೊಮ್ಮುವ ಹೊಗೆ ಹೇಗೆ ಭೂಮಿಯ ಓಝೋನ್ ಪದರಕ್ಕೆ ರಕ್ಷಣೆ ನೀಡಿ ಪರಿಸರಕ್ಕೆ ಪೂರಕವಾಗಬಲ್ಲದು ಎಂಬ

ಮಹತ್ವಪೂರ್ಣ ಮಾಹಿತಿ ಇರಬಹುದು, ಶ್ರೀಸಾಮಾನ್ಯನಿಗೂ ಆಚರಣೆಗಳ ಬಗ್ಗೆ ಆಸಕ್ತಿ ಮೂಡಿಸುವ ನಿಟ್ಟಿನಲ್ಲಿ ಈ ಕೃತಿಯು ಸಫಲತೆ ಕಾಣಬಹುದೆಂಬ ಅಚಲ ವಿಶ್ವಾಸ ನನ್ನದು. ಅವಿಭಕ್ತ ಕುಟುಂಬವಾಗಲೀ, ಸಣ್ಣ ಕುಟುಂಬವಾಗಲೀ ಹಿರಿಯರ ಮಾರ್ಗದರ್ಶನದಲ್ಲಿ ಸಂಸ್ಕಾರಗಳನ್ನು ಆಚರಿಸಿ ಮುಂದಿನ ಪೀಳಿಗೆಯವರಿಗೆ ಇವುಗಳ ಮಹತ್ವ ತಿಳಿಸುವಂತಾಗಲಿ ಎಂಬುದೇ ನನ್ನ ಆಗ್ರಹಪೂರ್ವಕ ಮನವಿ.

"ಮಾಡಿದ ಕೆಲಸಕ್ಕೆ ಮನವೇ ಸಾಕ್ಷಿ, ತೋಡಿದ ಬಾವಿಗೆ ಜಲವೇ ಸಾಕ್ಷಿ" ಎಂಬಂತೆ ಕಾಲ, ಶ್ರಮ, ಆಸಕ್ತಿ ಮತ್ತು ಬದ್ಧತೆಗಳನ್ನು ಮೈಗೂಡಿಸಿಕೊಂಡು ಇಂತಹ ಮಹತ್ವಪೂರ್ಣ ಕೃತಿಯನ್ನು ಸಮಾಜಕ್ಕೆ ನೀಡಿದ್ದಕ್ಕೆ ಶ್ರೀಯುತ ಮೋಹನ್‌ರವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಸಮಾಜಕ್ಕೆ ಉಪಯುಕ್ತವಾಗುವ ಇನ್ನಷ್ಟು ಕೃತಿಗಳು ಶ್ರೀಯುತರ ಲೇಖನಿಯಿಂದ ಹೊರ ಬಂದು ಕನ್ನಡ ಸಾಹಿತ್ಯ ಕ್ಷೇತ್ರವನ್ನು ಸಮೃದ್ಧಗೊಳಿಸುವಂತಾಗಲಿ ಎಂದು ಶುಭ ಹಾರೈಸುತ್ತೇನೆ.

**ಶ್ರೀಕಂಠ ಗುಂಡಪ್ಪ**
ಸುವರ್ಣ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು



# ಪರಿವಿಡಿ

**ಪುಟ**

**ಜಗದ ಹುಟ್ಟು** ---- 24
u ಕಾಲ:
u ಧರ್ಮ:

**ಹದಿನಾರು ಸಂಸ್ಕಾರಗಳು** ---- 34
u ಸಂಸ್ಕಾರಗಳನ್ನು ಆಚರಿಸುವ ಮುನ್ನ ನಡೆಸುವ ಸಿದ್ಧತೆಗಳು:

**1. ಗರ್ಭಾದಾನ** ---- 39
u ವಧುವರರು ಮಲಗುವ ಮನೆಯ ಶಾಸ್ತ್ರ:

**2. ಪುಂಸವನ** ---- 42

**3. ಸೀಮಂತೋನ್ನಯನ** (ಹೂ ಮುಡಿಸುವ ಶಾಸ್ತ್ರ) -- 43
u ತವರಿನ ಮನೆಯವರು ತರಬೇಕಾದ ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳು.
u ಕಡ್ಲೆಬೆಲ್ಲದ ಗಂಟನ್ನು ಕಟ್ಟುವ ವಿಧಾನ:
u ಗಂಟು ಕಟ್ಟುವಿಕೆಯ ಹಿನ್ನೆಲೆ:

**4. ಜಾತಕರ್ಮ** (ಹುಟ್ಟನ್ನು ಕೊಂಡಾಡುವುದು) ---- 48
u ಪುರುಡು

**5. ನಾಮಕರಣ** ---- 50
u ಹಸುಗೂಸಿನ ತಾಯಿಗೆ ಎಣ್ಣೆ (ಹಾಲು ಮೆಣಸು) ಶಾಸ್ತ್ರ:
u ಮಗುವಿನ ತಂದೆಯ ಜನಿವಾರದ ಬದಲಾವಣೆ:
u ನವಗ್ರಹ ಪೂಜೆ:
u ನಾಂದಿ ಶಾಸ್ತ್ರ (ಪುಣ್ಯಾಃ)ಕ್ಕೆ ಸಿದ್ಧತೆ:

u ನಾಮಕರಣ ಶಾಸ್ತ್ರಕ್ಕೆ ಸಿದ್ಧಪಡಿಸಿಕೊಳ್ಳಬೇಕಾದ ವಸ್ತುಗಳು ಮತ್ತು ವಿಧಾನ

u ಪೂರ್ಣಾಹುತಿಗೆ ಸಿದ್ಧಪಡಿಸಿಕೊಳ್ಳಬೇಕಾದ ವಸ್ತುಗಳು:

u ನಾಮಕರಣ ಶಾಸ್ತ್ರಕ್ಕೆ ಮಗುವಿನ ತಾಯಿಯ ತವರಿನ ಮನೆಯಿಂದ ತರಬೇಕಾದ ಸಾಮಗ್ರಿಗಳು

u ಬಾವಿ ಪೂಜೆ:

u ತೊಟ್ಟಿಲು ಪೂಜೆ:

u ಬಾಣಂತಿ ಮತ್ತು ಮಗುವನ್ನು ತವರಿಗೆ ಕರೆದೊಯ್ಯುವುದು:

u ಬಾಣಂತಿ ಮತ್ತು ಮಗುವನ್ನು ಗಂಡನ ಮನೆಗೆ ಕಳುಹಿಸುವಿಕೆ:

**6. ನಿಷ್ಕ್ರಮಣೆ** (ಮೊದಲ ಬಾರಿಗೆ ಮಗುವನ್ನು ಮನೆಯಿಂದ ಹೊರ ಒಯ್ಯುವುದು) ---- **63**

**7. ಅನ್ನಪ್ರಾಶನ** ---- **64**

u ಮಗುವು ಪ್ರಥಮ ಬಾರಿಗೆ ಹೊಸ್ತಿಲು ದಾಟಿದಾಗ ನೆರವೇರಿಸುವ ಶಾಸ್ತ್ರ

**8. ಚೂಡಾಕರ್ಮ** (ತಲೆಗೂದಲನ್ನು ತೆಗೆಯುವಿಕೆ) -- **68**

u ಮಗುವಿನ ಹುಟ್ಟು ಕೂದಲು ಕೊಡುವ ಶಾಸ್ತ್ರ

**9. ಕರ್ಣವೇಧ (ಕಿವಿ ಚುಚ್ಚುವುದು)** ---- **70**

**10. ಅಕ್ಷರಾಭ್ಯಾಸ (ವಿದ್ಯಾರಂಭ)** ---- **71**

**11. ಉಪನಯನ** ---- **71**

**12. ವೇದಾರಂಭ** ---- **72**



**13. ಕೇಶಾಂತ** ---- **73**

**14. ಸಮಾವರ್ತನ** ---- **73**

**15. ವಿವಾಹ** ---- **73**

u ವಿವಾಹ ಮಹೋತ್ಸವದಲ್ಲಿ ಪಾಲಿಸುವ ವಿಧಿವಿಧಾನಗಳ ಹಿನ್ನೆಲೆ

u ವಿವಾಹ ಸಮಾರಂಭದ ಶಾಸ್ತ್ರಗಳು

u ಅರಿಶಿನ ಎಣ್ಣೆ ಶಾಸ್ತ್ರ (ಪ್ರತ್ಯೇಕವಾಗಿ ವಧು-ವರರ ಮನೆಗಳಲ್ಲಿ ಆಚರಿಸುವುದು)

u ಚಪ್ಪರ ಹಾಕುವ ಶಾಸ್ತ್ರ

u ಅರಿಶಿನ ಕುಂಕುಮ ತರುವುದು – ಹೆಣ್ಣು ಮಗಳು ಮತ್ತು ಅಳಿಯ

u ಮಾಂಗಲ್ಯ, ಕಡಗ ಮತ್ತು ಕಾಲುಸುತ್ತು ತರುವ ಶಾಸ್ತ್ರ:

u ಒರಳುಕಲ್ಲಿನ ಪೂಜೆ:

u ವರನನ್ನು ಛತ್ರಕ್ಕೆ ಕರೆಯುವಿಕೆ:

u ವಧುವನ್ನು ಛತ್ರಕ್ಕೆ ಕರೆಯುವಿಕೆ:

u ಛತ್ರದಲ್ಲಿ ವರನ ಕೊಠಡಿಯ ಸಿದ್ಧತೆ.

u ಕಳಸದ ತಟ್ಟೆಯ ಪಕ್ಕದಲ್ಲಿ ಪಾವಡದ ತಟ್ಟೆಯ ಸಿದ್ಧತೆ:

u ಛತ್ರದಲ್ಲಿ ವಧುವಿನ ಕೊಠಡಿಯ ಸಿದ್ಧತೆ:

u ಐದು ಹರಣೆ ಕುಡಿಕೆಗಳ ಸಿದ್ಧತೆ:

u ಕಳಸದ ತಟ್ಟೆಯ ಪಕ್ಕದಲ್ಲಿ ಪಾವಡದ ತಟ್ಟೆಯ ಸಿದ್ಧತೆ:

u ವಧುವಿನ ಪುಣ್ಯಾಃ:

u ಲಗ್ನ ಕಟ್ಟಿಸುವುದು: (ವರನ ಕಡೆಯವರು ಮಾಡುವ ಶಾಸ್ತ್ರ)

u ನಾಗರ ಪೂಜೆ:

u ವರನನ್ನು ವರ ಪೂಜೆಗೆ ಕರೆಯುವ ಶಾಸ್ತ್ರ:

u ವರ ಪೂಜೆ:

u ಹಸೆ ಹಾಕುವುದು ನಿಶ್ಚಾಂಬೂಲ

u ಕುಲಾಚಾರ:
u ಕುಲಾಚಾರ ಶಾಸ್ತ್ರದ ಸಂಭಾಷಣೆ:
u ವಧುವಿಗೆ ನಿತ್ಸಾಂಬೂಲ ಶಾಸ್ತ್ರ:
u ವಧುವಿನ ತಾಯಿಗೆ ಮರ್ಯಾದೆ ಮಾಡುವ ಕಾರ್ಯ:
u ವಧುವಿನ ಒಸಗೆ ಶಾಸ್ತ್ರ:
u ಅರಿಶಿನದ ಪಂಚೆಗಳ ಸಿದ್ಧತೆ:
u ಲಗ್ನದ ದಿನದ ಅರಿಶಿನ ಮತ್ತು ಎಣ್ಣೆ ಶಾಸ್ತ್ರ:
u ವಧುವಿನ ನಾಂದಿ ಶಾಸ್ತ್ರ ಮತ್ತು ನವಗ್ರಹ ಪೂಜೆ/ವರನ ನಾಂದಿ ಶಾಸ್ತ್ರ, ನವಗ್ರಹ ಪೂಜೆ ಮತ್ತು ಹೋಮ ಪ್ರತ್ಯೇಕವಾಗಿ:
u ಕಾಶೀಯಾತ್ರೆ:
u ಧಾರೆ ಶಾಸ್ತ್ರ:
u ಗೌರೀ ಪೂಜೆ:
u ಹೋಮ ಶಾಸ್ತ್ರ ಮತ್ತು ಸಪ್ತಪದಿ:
u ಫಲತಾಂಬೂಲ ಪೂಜೆ:
u ವಧುವರರು ಹೆಸರು ಹೇಳುವ ಶಾಸ್ತ್ರ:
u ಅರುಂಧತಿ ನಕ್ಷತ್ರ ದರ್ಶನ:
u ಹರಣೆ ಕುಡಿಕೆ ವಿತರಣೆ:
u ವಧುವರರನ್ನು ವಧುವಿನ ಕೋಣೆಗೆ ಕಳುಹಿಸುವ ಶಾಸ್ತ್ರ:
u ವಧುವಿನ ಕೋಣೆಯಲ್ಲಿ ವಧುವರರನ್ನು ಬರಮಾಡಿಕೊಳ್ಳುವಿಕೆ:
u ವಧುವರರನ್ನು ವರನ ಕೋಣೆಗೆ ಕರೆತರುವುದು:
u ವಧುವರರನ್ನು ವರನ ಕೋಣೆಯಲ್ಲಿ ಬರಮಾಡಿಕೊಳ್ಳುವಿಕೆ:
u ಪಂಚಕಲಶ ದರ್ಶನ:
u ಗಂಡಿನ ಮನೆಯವರ ಊಟದ ದಿನ ಅರಿಶಿನ ಮತ್ತು ಎಣ್ಣೆ ಹಚ್ಚುವ ಶಾಸ್ತ್ರ:
u ವಧು ವರರನ್ನು ವರನ ಮನೆಗೆ ಕಳುಹಿಸುವಿಕೆ:



u ವಧು ವರರನ್ನು ವರನ ಮನೆಯಲ್ಲಿ ಬರಮಾಡಿಕೊಳ್ಳುವಿಕೆ:
u ವಧುವು ಸೇರು ತಳ್ಳುವ ಶಾಸ್ತ್ರ:
u ವಿವಾಹಕ್ಕೆ ಸಿದ್ಧಪಡಿಸಿಕೊಳ್ಳಬೇಕಾದ ಸಾಮಗ್ರಿಗಳು:
u ಕರಿಮಣಿ ಶಾಸ್ತ್ರ:
u ಮಗಳು ಮದುವೆಯಾದ ವರ್ಷದೊಳಗೆ ಗರ್ಭಿಣಿಯಾಗದಿದ್ದರೆ ಮಾಡುವ ಶಾಸ್ತ್ರ
u ಮದುವೆಯಾದ ಮಗಳು ಗರ್ಭಿಣಿಯಾದರೆ ಮಾಡುವ ಶಾಸ್ತ್ರ:
u ಬಾಲಕಿಯು ದೊಡ್ಡವಳಾದಾಗ (ಪುಷ್ಪವತಿ) ಮಾಡುವ ಶಾಸ್ತ್ರ:
u ದೊಡ್ಡಒಸಗೆ ಶಾಸ್ತ್ರ:
u ನಿಶ್ಚಿತಾರ್ಥದ ಶಾಸ್ತ್ರ:
u ಆಷಾಡಕ್ಕೆ ಸೊಸೆಯನ್ನು ತವರಿಗೆ ಕಳುಹಿಸುವುದು:
u ನಾಗರಚೌತಿ ಶಾಸ್ತ್ರ:

**16. ಅಂತ್ಯೇಷ್ಟಿ ---- 166**

u ಅಂತ್ಯೇಷ್ಟಿ ವಿಧಿಗಳ ಹಿನ್ನೆಲೆ:
u ಅಂತ್ಯೇಷ್ಟಿ ವಿಧಾನ:
u ಅಂತ್ಯಕ್ರಿಯೆಯನ್ನು ನಡೆಸಲು ಅರ್ಹರಾದ ಕರ್ತೃಗಳು:
u ಅಂತ್ಯಕ್ರಿಯೆಯ ವೆಚ್ಚ ಹಾಗೂ ಜವಾಬ್ದಾರಿ:
u ಮನೆಯಲ್ಲಿ ಶವವಿದ್ದಾಗ ನಡೆಸುವ ಕ್ರಿಯೆ:
u ಸ್ಮಶಾನ ತಲುಪಿದ ಮೇಲೆ ಮಾಡುವ ಕ್ರಿಯೆ:
u ಶವದ ತೆರವು ಆದ ಮೇಲೆ ಮನೆಯಲ್ಲಿ ನಡೆಸುವ ಕೆಲಸ:
u ಹಾಲು ತುಪ್ಪದ ಶಾಸ್ತ್ರ (ಮೂರು ಅಥವಾ ಐದನೇ ದಿನದ ಶಾಸ್ತ್ರ):
u ಶ್ರಾದ್ಧ:
u ಬಟ್ಟೆ ಹಾಕುವ ಶಾಸ್ತ್ರ:
u ಅವಿವಾಹಿತ ಯುವಕ ಅಥವಾ ಯುವತಿಯರು ಮರಣ ಹೊಂದಿದರೆ:
u ಸಣ್ಣ ಮಕ್ಕಳು ಮರಣ ಹೊಂದಿದರೆ :

**ಹಾಡುಗಳು:** ---- **194**

- ಆರತಿ ಹಾಡುಗಳು ವರನಿಗೆ
- ಆರತಿ ಹಾಡುಗಳು ವಧುವಿಗೆ
- ಆರತಿ ಹಾಡುಗಳು ವಧುವರರಿಗೆ
- ವರನ ಪೂಜೆಗೆ ಹಾಡು:
- ಭೂಮದ ಊಟಕ್ಕೆ ಹಾಡು:
- ವಧುವನ್ನು ಅತ್ತೆಯ ಮನೆಗೆ ಒಪ್ಪಿಸುವಾಗ ಹಾಡುವ ಹಾಡು:
- ಲಾಲಿ ಹಾಡು – ಹೆಣ್ಣು ಕೂಸಿಗೆ
- ಲಾಲಿ ಹಾಡು – ಗಂಡು ಕೂಸಿಗೆ
- ಆಶೀರ್ವಾದದ ಹಾಡು – ಗಂಡು ಮಕ್ಕಳಿಗೆ
- ಆಶೀರ್ವಾದದ ಹಾಡು – ಹೆಣ್ಣು ಮಕ್ಕಳಿಗೆ
- ಎಣ್ಣೆ ಶಾಸ್ತ್ರದ ಹಾಡು – ವರನಿಗೆ
- ಶ್ರೀಮಂತದ ಹಾಡು
- ಬಸುರಿ ಹೆಣ್ಣಿಗೆ ಆಶೀರ್ವಾದದ ಹಾಡು
- ಗುಂಡಪ್ಪನ ಲಾಲಿ ಹಾಡು:
- ಸಂಜೆ ದೀಪ ಹಚ್ಚುವಾಗ ಹಾಡುವ ಹಾಡು:
- ಚೌಡೇಶ್ವರಿ ತಾಯಿಗೆ ಮಂಗಳಾರತಿ ಹಾಡು:
- ವಾಸವಿ ಹಾಡು

**ವಾರಕ್ಕನುಸಾರವಾಗಿ ಪೂಜಿಸಲು ಬಳಸಬಹುದಾದ ಶ್ರೇಷ್ಠ ಪುಷ್ಪಗಳು**

**ಪೂಜಾ ಕಾರ್ಯದಲ್ಲಿ ವಿವಿಧ ಬಗೆಯ ಪುಷ್ಪಗಳನ್ನು ಬಳಸುವುದರಿಂದ ಲಭಿಸಬಹುದಾದ ಫಲ:**

**ನಿತ್ಯ ಪೂಜಾ ಸಮಯದಲ್ಲಿ ನೈವೇದ್ಯಕ್ಕೆ ಬಳಸಬಹುದಾದ ವಸ್ತುಗಳು ಮತ್ತು ಅವುಗಳ ಫಲ:**

**ನವರಾತ್ರಿಗಳಿಗೆ ಸಿದ್ಧಪಡಿಸಬಹುದಾದ ನೈವೇದ್ಯ:**

**ದೇವರ ಪೂಜೆಯ ಹಿನ್ನೆಲೆ ಮತ್ತು ವಿಧಾನ:**



**ಗೃಹಪ್ರವೇಶ** ---- **225**

- ಅಪೂರ್ವ ಗೃಹಪ್ರವೇಶಕ್ಕೆ ಅನುಸರಿಸುವ ವಿಧಿಗಳು:
- ಸಪೂರ್ವ ಮತ್ತು ದ್ವಂದ್ವ ಗೃಹಪ್ರವೇಶಗಳಿಗೆ ಹಾಲು ಉಕ್ಕಿಸುವ ಶಾಸ್ತ್ರ:
- ದೇವರ ಕೋಣೆಯಲ್ಲಿ ಪೂಜೆ:
- ಒಲೆಯ ಪೂಜೆ

**ದೇವಾಂಗ ಪಂಗಡದ ಕಿರು ಪರಿಚಯ** ---- **235**

- ದೇವಾಂಗ ಪುರಾಣ:
- ದೇವಾಂಗ ಮೂಲ:
- ಭೌಗೋಳಿಕ ಹಂಚಿಕೆ:
- ದೇವರ ದಾಸೀಮಯ್ಯ:

**ಆಧಾರ** ---- **239**

## ಜಗದ ಹುಟ್ಟು

ಶಂಕರಾಚಾರ್ಯರ ವಾಣಿಯನ್ವಯ, "ಪುನಃರಪಿ ಜನನಂ ಪುನಃರಪಿ ಮರಣಂ ಪುನಃರಪಿ ಜನನೀ ಜಠರೇ ಶಯನಂ" ಎಂಬಂತೆ, ಈ ಅಖಂಡವಾದ ಪ್ರಪಂಚವು ಕಾಲನ ಚಕ್ರಕ್ಕೆ ಸಿಲುಕಿ ಮಾನವನ ಗಣನೆಗೆ ನಿಲುಕದಷ್ಟು ಬಾರಿ ಆವಿರ್ಭವಿಸಿ ಅಂತರ್ಧಾನವಾಗಿದೆ. ಹಾಗಾಗಿ ಆದಿ ಯಾವುದು? ಅಂತ್ಯ ಯಾವುದು? ಎಂಬ ಮಹತ್ತರವಾದ ಹಾಗೂ ಕುತೂಹಲಕಾರಿಯಾದ ಯಕ್ಷಪ್ರಶ್ನೆಗೆ ಅಷ್ಟು ಸುಲಭದಲ್ಲಿ ಉತ್ತರ ದೊರೆಯಲೊಲ್ಲದು ಪಾಮರರಿಗೆ. ಭಗವಂತನ ಪ್ರೇರಣೆಯಿಂದ ತಮ್ಮ ಅಂತಃಪಟಲದಲ್ಲಿ ಸ್ಫುರಣಗೊಂಡ ಜ್ಞಾನವನ್ನು ಮುಂದೆ ಕಾಲಕ್ರಮೇಣ ಪಾಮರರೊಡನೆ ಹಂಚಿಕೊಂಡ ಪ್ರಾಚೀನರ ಸದ್ಭಾವನೆಯ ಪ್ರಕಾರ, ಪ್ರಸ್ತುತ ನಾವು ಜೀವಿಸಿ ವಾಸಿಸುತ್ತಿರುವ ಪ್ರಪಂಚದ ಸೃಷ್ಟಿಯ ಪೂರ್ವದಲ್ಲಿದ್ದದ್ದು ಗಾಢಾಂಧಕಾರ. ನಂತರ ಭಗವಂತನು ಪಂಚಭೂತಾತ್ಮಕವಾದ ಪ್ರಪಂಚವನ್ನು ಸೃಷ್ಟಿಸುವ ಕೈಂಕರ್ಯ ಆರಂಭಿಸಿದ್ದು "ಜಲ"ದಿಂದ. ಜಲವೆಂದರೆ, ಹಿಂದೆ ಅಸ್ತಿತ್ವದಲ್ಲಿದ್ದು, ಗೋಚರವಾಗುತ್ತಿದ್ದ ಹಾಗೂ ಗೋಚರವಾಗದೆ ಇದ್ದ ಪ್ರಪಂಚವು ಪ್ರಳಯಕ್ಕೀಡಾದ ಅವಶೇಷ. ಆ ಜಲದಲ್ಲಿ ಸೃಷ್ಟಿ ಬೀಜವನ್ನಿಟ್ಟಾಗ ಬೀಜವು ಸುವರ್ಣದಂತೆ ಹೊಳೆಯುತ್ತಾ ಅಂಡವಾಗಿ ಹಿರಣ್ಯಗರ್ಭವೆನಿಸಿ ಅದರಲ್ಲಿ ಸರ್ವಲೋಕ ಪಿತಾಮಹನಾದ ಬ್ರಹ್ಮನು ಜನಿಸಿ ಸಹಸ್ರಾರುಕೋಟಿ ವರ್ಷಗಳ ಕಾಲ ಭಗವಂತನನ್ನು ಧ್ಯಾನಿಸುತ್ತಾ ಪರ್ಯಂತರವಾಗಿ ವಾಸ ಮಾಡಿ ನಂತರ ಅಂಡವನ್ನು ಇಬ್ಭಾಗ ಮಾಡಿ "ದ್ಯುಲೋಕ" ಮತ್ತು "ಭೂಮಿ"ಯನ್ನು ನಿರ್ಮಿಸಿ ಮಧ್ಯದಲ್ಲಿ ಆಕಾಶವನ್ನು, ಎಂಟು ದಿಕ್ಕುಗಳನ್ನು ಹಾಗೂ ಶಾಶ್ವತವಾದ ಸಮುದ್ರವನ್ನು ನಿರ್ಮಿಸಿದನು.

ಮುಂದಿನ ಸೃಷ್ಟಿಕಾರ್ಯದಲ್ಲಿ ಉದಯಿಸಿದ್ದು ಸಂಕಲ್ಪ ಮತ್ತು ವಿಕಲ್ಪಗಳಿಂದ ಆವೃತ್ತವಾದ ಮನಸ್ಸು, ಅಹಂಕಾರ, ಜೀವಾತ್ಮ, ಮಹತ್ತತ್ವ, ಸತ್ವ, ರಜಸ್ಸು, ತಮಸ್ಸು ಮತ್ತು ಪಂಚಭೂತಗಳಾದ, ಆಕಾಶ (ಶಬ್ದ), ವಾಯು (ಶಬ್ದ ಮತ್ತು ಸ್ಪರ್ಶ), ಅಗ್ನಿ (ಶಬ್ದ, ಸ್ಪರ್ಶ ಮತ್ತು ರೂಪ), ಜಲ (ಶಬ್ದ, ಸ್ಪರ್ಶ, ರೂಪ ಮತ್ತು ರಸ) ಮತ್ತು ಭೂಮಿ (ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ). ಭೌತಿಕ ಜಗತ್ತಿನ ಸೃಷ್ಟಿಗೆ ಮುಖ್ಯವಾದ ಏಳು ಕಾರಣಗಳೆಂದರೆ, ಪಂಚಭೂತಗಳು, ಅಹಂಕಾರ ಮತ್ತು ಮನಸ್ಸು. ಇವುಗಳ ಜೊತೆಯಾದ ಅವಿನಾಶಿಯಾದ "ಆತ್ಮ". ಮಾನವನ ದೇಹವು ಆರು ತತ್ವಗಳಾದ ಪಂಚಭೂತಗಳು ಮತ್ತು ಅಹಂಕಾರವನ್ನೊಳಗೊಂಡು ಅದನ್ನು ಶರೀರವೆನ್ನುವರು. ವಯಸ್ಕ ಮನುಷ್ಯನ ದೇಹದಲ್ಲಿ 107 ಮರ್ಮಸ್ಥಾನಗಳು, 108 ಸಂಧಿಗಳು, 109 ಸ್ನಾಯುಗಳು, 700 ನರಗಳು, 500 ಜೀವಕೋಶ ಗುಂಪುಗಳು, 360 ಮೂಳೆಗಳು, ನಾಲ್ಕೂವರೆ ಕೋಟಿ ಕೂದಲು, 280 ಗ್ರಾಂ ತೂಕದ ಹೃದಯ, 420 ಗ್ರಾಂ ತೂಕದ ನಾಲಿಗೆ, 300 ಗ್ರಾಂ ಜೈವಿಕಾಗ್ನಿ, 600 ಗ್ರಾಂ ದ್ರವ, 75 ಗ್ರಾಂ ರೇತಸ್ಸು ಮತ್ತು 600 ಗ್ರಾಂ ಕೊಬ್ಬಿನಂಶ ಹುದುಗಿದೆ. ಜೊತೆಗೆ ಒಳಿತು ಕೆಡುಕುಗಳನ್ನು ಗುರುತಿಸುವ ಜ್ಞಾನಾಗ್ನಿ, ದೃಷ್ಟಿಗೆ ಸಹಕರಿಸುವ ದರ್ಶನಾಗ್ನಿ ಮತ್ತು ಒಡಲಿನಲ್ಲಿದ್ದು ಪಚನಕ್ರಿಯೆಗೆ ಸಹಕಾರಿಯಾಗಿರುವ ಕೋಷ್ಠಾಗ್ನಿಯು ಅಂಕುರದಿಂದ ಅಂತ್ಯೇಷ್ಠಿಯವರೆಗೆ ಸತತ ಯಜ್ಞಕಾರ್ಯ ನಿರ್ವಹಿಸುತ್ತಿರುತ್ತದೆ. ಆದ್ದರಿಂದ ಮಾನವರು ಆತ್ಮವನ್ನು ಯಜ್ಞದ ಕರ್ತೃವೆಂದು ತಿಳಿದು ಬುದ್ಧಿವಂತಿಕೆಯಿಂದ ತಮ್ಮ ಪ್ರಾಜ್ಞ ಮತ್ತು ತೃಪ್ತಿಯೆಂಬ ಪಾತ್ರೆಯಲ್ಲಿ ಅರಿಷಡ್ವರ್ಗಗಳ ಬಲಿದಾನವನ್ನು ಮನಸ್ಸಿನಲ್ಲಿ ಪ್ರತಿಜ್ಞೆ ಮಾಡಿಕೊಂಡು ಯಜ್ಞಕಾರ್ಯದ ಸಫಲತೆಗಾಗಿ ಶ್ರಮಿಸಬೇಕು.



ನಂತರ ಬ್ರಹ್ಮನು ಕರ್ಮಜ ದೇವತೆಗಳನ್ನು, ಸಾಧ್ಯ ದೇವತೆಗಳನ್ನು ಮತ್ತು ಸನಾತನವಾದ ಯಜ್ಞವನ್ನು ಸೃಷ್ಟಿಸಿ ಯಜ್ಞಗಳ ಸಾಫಲ್ಯಕ್ಕಾಗಿ ಋಗ್, ಯಜುಸ್ ಮತ್ತು ಸಾಮನ್ ಗಳನ್ನು ಸೃಜಿಸಿದನು.

ಮುಂದೆ ಕಾಲ (ಯುಗ, ಸಂವತ್ಸರ, ಮಾಸ, ಋತು ಆಯನ.), ನಕ್ಷತ್ರ, ಗ್ರಹ, ನದಿ, ಸಾಗರ, ಪರ್ವತ, ಬಯಲು ಪ್ರದೇಶ ಮತ್ತು ವಿಷಮವಾದ ಭೂಪ್ರದೇಶದ ಸೃಷ್ಟಿಯಾಯಿತು.

ಆಮೇಲೆ ತಪಸ್ಸು, ವಾಕ್ಶಕ್ತಿ, ರತಿ, ಕಾಮ, ಕ್ರೋಧಗಳಾದ ಮೇಲೆ ಕರ್ಮಗಳ ಅರಿಯುವಿಕೆಗೆ ಧರ್ಮ–ಅಧರ್ಮ, ಸುಖ–ದುಃಖ, ಹಿಂಸೆ–ಅಹಿಂಸೆ, ಮೃದುತ್ವ–ಕ್ರೌರ್ಯ ಮತ್ತು ಸತ್ಯ–ಅಸತ್ಯಗಳೆಂಬ ಅಸಂಖ್ಯಾತ ದ್ವಂದ್ವಗಳನ್ನು ಸೃಷ್ಟಿಸಿದನು. ಲೋಕಗಳ ಅಭಿವೃದ್ಧಿಗೆ ತನ್ನ ವದನದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ತೊಡೆಯಿಂದ ವೈಶ್ಯ ಹಾಗೂ ಪಾದದಿಂದ

ಶೂದ್ರರೆಂಬ ವರ್ಣ(ಗುಣ)ಗಳನ್ನು ಸೃಷ್ಟಿಸಿ, ತನ್ನ ದೇಹವನ್ನು ಎರಡು ಭಾಗವಾಗಿಸಿಕೊಂಡು ಪುರುಷ ಮತ್ತು ಸ್ತ್ರೀಯನ್ನು ಸೃಷ್ಟಿಸಿ, ಸ್ತ್ರೀಭಾಗದಿಂದ "ವಿರಾಟ್"ಎಂಬುವನನ್ನು ಸೃಷ್ಟಿಸಿದನು. ಆ ವಿರಾಟ್ ಪುರುಷನಿಂದಲೇ "ಮನು"ವಿನ ಸೃಷ್ಟಿಯಾಯಿತು.

ಮನುವು ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತನ, ವಸಿಷ್ಠ, ಭೃಗು ಮತ್ತು ನಾರದರೆಂಬ ಹತ್ತು ಪ್ರಜಾಪತಿಗಳನ್ನು ಸೃಷ್ಟಿಸಿದನು. ಈ ಪ್ರಜಾಪತಿಗಳು ಮುಂದೆ, ಮಹಾತೇಜಸ್ವಿಗಳಾದ ಸಪ್ತ ಮನುಗಳನ್ನು, ದೇವತೆಗಳನ್ನು, ದೇವತಾ ಸಮೂಹವನ್ನು ಮತ್ತು ಮಹರ್ಷಿಗಳನ್ನು ಸೃಷ್ಟಿಸುವುದರ ಜೊತೆಗೆ ಯಕ್ಷ, ರಾಕ್ಷಸ, ಪಿಶಾಚ, ಗಂಧರ್ವ, ಅಪ್ಸರೆ, ಅಸುರ, ನಾಗ, ಸರ್ಪ ಮತ್ತು ಪ್ರತ್ಯೇಕವಾಗಿ ಪಿತೃಗಣಗಳನ್ನು ಸೃಷ್ಟಿಸಿದರು.

ನಂತರ, ಮುನಿಗಳು ಮಿಂಚು, ಸಿಡಿಲು, ಮೋಡ, ಇಂದ್ರಧನುಸ್ಸು, ಆಕಾಶದಿಂದ ಹೊಮ್ಮುವ ಜ್ಯೋತಿಪುಂಜಗಳು ಮತ್ತು ಸಣ್ಣ, ದೊಡ್ಡ ಆಕಾಶಕಾಯಗಳನ್ನು ಸೃಷ್ಟಿಸಿದರು. ಮುಂದುವರೆದು, ಕಿನ್ನರ, ವಾನರ, ಮೀನು, ವಿವಿಧ ಪಕ್ಷಿಗಳು, ಪಶು, ಮೃಗ, ಮನುಷ್ಯ ಮತ್ತು ಕ್ರೂರ ಪ್ರಾಣಿಗಳ ಸೃಷ್ಟಿಯಾಯಿತು. ತದನಂತರ, ಕ್ರಿಮಿ, ಕೀಟ, ಪತಂಗ, ಹೇನು, ಜೇನು, ತಿಗಣೆ, ಜಿಗಣೆ, ನೊಣ ಹಾಗೂ ಮರ–ಬಳ್ಳಿ ಮೊದಲಾದ ಸ್ಥಾವರ ಜೀವಿಗಳ ಸೃಷ್ಟಿಯಾಯಿತು. ಇದರೊಡನೆ, ಅಮೂಲಾಗ್ರವಾಗಿ ಸ್ಥಾವರದಿಂದ ಹಿಡಿದು ಜಂಗಮ ಮತ್ತು ಪ್ರಾಣಿಗಳನ್ನು ಹೊಂದಿದ ಬೃಹದಾಕಾರವಾದ ಪ್ರಪಂಚದ ಸೃಷ್ಟಿಕಾರ್ಯ ನೆರವೇರಿತು.

**ಜೀವಜಾತಗಳ ವಿಧಗಳು:**

| | |
|---|---|
| ಜರಾಯುಜಗಳು | : ಗರ್ಭಚೀಲದಿಂದ ಹುಟ್ಟಿ ಬರುವ ಜೀವಿ ಅಥವಾ ಪ್ರಾಣಿಗಳು. (ಪಶು, ಮೃಗ, ರಾಕ್ಷಸ, ಪಿಶಾಚ, ಮನುಷ್ಯ). |
| ಅಂಡಜಗಳು | : ಮೊಟ್ಟೆಯನ್ನೊಡೆದು ಬರುವ ಪ್ರಾಣಿಗಳು (ಪಕ್ಷಿ, ಹಾವು, ಮೊಸಳೆ, ಮೀನು, ಆಮೆ ಮುಂತಾದವುಗಳು). |
| ಸ್ವೇದಜಗಳು | : ದೇಹದ ಬೆವರಿನಿಂದ ಹುಟ್ಟಿ ಬರುವ ಜೀವಿಗಳು (ನುಸಿ, ಜಿಗಣೆ, ಹೇನು, ಜೇನು ಮುಂತಾದವುಗಳು). |
| ಉದ್ಭಿಜಗಳು | : ಬೀಜ ಅಥವಾ ಕಾಂಡವನ್ನು ಭೇದಿಸಿ ಹೊರಬರುವವುಗಳು. |



1 ಬೆಳೆದು ಫಲ ಕೊಡುವವರೆಗೂ ಮಾತ್ರ ಬದುಕಿರುವವುಗಳಿಗೆ ಓಷಧಿಗಳೆನ್ನುವರು.

1 ಹೂವು ಮೂಡದೇ ಹಣ್ಣು ಕೊಡುವವುಗಳು ವನಸ್ಪತಿಗಳು (ಅತ್ತಿಯ ಮರ ಇತ್ಯಾದಿ).

1 ಹೂವನ್ನು ಧರಿಸಿ ನಂತರ ಹಣ್ಣನ್ನು ಕೊಡುವವುಗಳಿಗೆ ಮರ ಅಥವಾ ವೃಕ್ಷಗಳೆನ್ನುವರು (ಮಾವು ಇತ್ಯಾದಿ).

1 ಬುಡದಲ್ಲೇ ಗೊಂಚಲಾಗಿ ಹೂ ಬಿಡುವವುಗಳಿಗೆ ಗುಚ್ಛ ಎನ್ನುವರು.

1 ಒಂದೇ ಕಾಂಡದಿಂದ ಬೆಳೆಯುವಂತದ್ದು ಗುಲ್ಮ (ಕಬ್ಬು ಇತ್ಯಾದಿ).

1 ವಿವಿಧ ಬಗೆಯ ತೃಣ ಅಥವಾ ಹುಲ್ಲುಗಳಿಗೆ ತೃಣಜಾತಯವೆನ್ನುವರು.

1 ಉದ್ದವಾಗಿ ಹಬ್ಬಿದ ಬಳ್ಳಿಗಳಿಗೆ ಪ್ರಾತಾನಾವೆಂದು ಬಳ್ಳಿಗಳನ್ನು ವಲ್ಲ್ಯವೆನ್ನುವರು.

ಹೀಗೆ ಬಲು ಸಂಕೀರ್ಣವಾದ ಈ ಜೀವಸಂಕುಲಗಳ ಸಂಸಾರ ಸರಣಿಯಲ್ಲಿ ಬ್ರಹ್ಮನಿಂದ ಹಿಡಿದು ಸ್ಥಾವರಗಳವರೆಗಿನ ಬೃಹತ್ ಸೃಷ್ಟಿಯ ಗತಿಯು ಬೃಹದಾಕಾರವಾಗಿ ಹಬ್ಬಿದೆ.

ಇದಾದ ನಂತರ, ಅಚಿಂತ್ಯ ಪರಾಕ್ರಮಿಯಾದ ಬ್ರಹ್ಮನು ಸೃಷ್ಟಿಕಾಲವನ್ನು ಪ್ರಳಯಕಾಲದೊಂದಿಗೆ ಸೆಣೆಸಾಡಲು ಹಚ್ಚಿ ತಾನು ಪುನಃ ಸೂಕ್ಷ್ಮತಮವಾದ ಆತ್ಮನಲ್ಲಿ ಅಂತರ್ಧಾನನಾದನು. ಮುಂದೆ ಎಲ್ಲಿಯವರೆಗೂ ಸೃಷ್ಟಿಗೆ ಕಾರಣನಾದ ಪ್ರಭುವು ಜಾಗೃತನಾಗಿರುತ್ತಾನೋ ಅಲ್ಲಿಯವರೆಗೂ ಜೀವರಾಶಿಗಳು ತಮ್ಮ ಕರ್ಮಗಳಲ್ಲಿ ತೊಡಗಿದ್ದು, ಪ್ರಭುವು ಸ್ತಬ್ಧನಾದಾಗ (ಮಲಗಿದಾಗ) ಪ್ರಪಂಚವೆಲ್ಲಾ ಪ್ರಳಯ ಹೊಂದಿ ನಿಶ್ಚೇಷ್ಟವಾಗಿ ಮನಸ್ಸು ಕೂಡ ಕ್ರಿಯಾಹೀನವಾಗಿ ನಿಶ್ಚಲವಾಗುತ್ತದೆ. ಯಾವಾಗ ಆ ಪುರುಷನ ವಿರಾಡ್ಗರ್ಭದಲ್ಲಿ ಸಮಸ್ತ ಸೃಷ್ಟಿಯು ಲಯ ಹೊಂದಿ ಅಡಗಿಕೊಳ್ಳುತ್ತದೋ ಆಗ, ಸರ್ವಜಗದ್ರೂಪನಾದ ಅವನು ಶಾಂತವಾಗಿ ನಿದ್ರೆಯಲ್ಲಿದ್ದಂತೆ ಸುಖೀರೂಪಿಯಾಗಿ ಆನಂದಮಯನಾಗಿರುತ್ತಾನೆ.

ಹೀಗೆ ಪ್ರಳಯ ಕಾಲದಲ್ಲಿ ಜೀವಾತ್ಮನು ಪ್ರಗಾಢವಾದ ತಮಸ್ಸನ್ನಾಶ್ರಯಿಸಿ ಇಂದ್ರಿಯಗಳುಳ್ಳ ಸೂಕ್ಷ್ಮ ಶರೀರ ಇದ್ದರೂ ಕರ್ಮಗಳಲ್ಲಿ ತೊಡಗಲಾರದೆ ನಿಷ್ಕ್ರಿಯನಾಗಿರುತ್ತಾನೆ. ಕಾಲಾನುಸಾರ ಪುನಃ ಶರೀರಧಾರಣೆ ಮಾಡಿ ಸ್ಥೂಲರೂಪದಿಂದ ಹೊರ ಬರುತ್ತಾನೆ. ಆತ್ಮವು ವಿಭುವಾದರೂ ಸೂಕ್ಷ್ಮ

ಅಣುರೂಪಗಳಾದ ಪಂಚಭೂತಗಳು, ಇಂದ್ರಿಯ, ಮನಸ್ಸು, ಬುದ್ಧಿ, ಪೂರ್ವಸಂಸ್ಕಾರ, ಅನಾದಿಕರ್ಮ, ಪ್ರಾಣವಾಯು, ಅಜ್ಞಾನಾವರಣವೆಂಬ ಪುರ್ಯಷ್ಟಕಗಳ ಮಾತ್ರೆಯುಳ್ಳವನಾಗಿ, ಅಣುರೂಪನಾಗಿ ಸ್ಥಾವರ, ಜಂಗಮ, ವೃಕ್ಷ ಮತ್ತು ಮನುಷ್ಯಾದಿ ಬೀಜಗಳಲ್ಲಿ ಪ್ರವೇಶಿಸಿ ದೇಹಾದಿಗಳನ್ನು ಧರಿಸುತ್ತಾನೆ.

**ಜೀವ ಶ್ರೇಷ್ಠರು:**

ಬ್ರಹ್ಮಜ್ಞಾನಿಗಳು, ಕರ್ಮಾನುಷ್ಠಾನಶೀಲರಲ್ಲಿ ಶಾಸ್ತ್ರೋಕ್ತವಾಗಿ ಕರ್ಮ ನಡೆಸುವವರು, ಕರ್ಮಾನುಷ್ಠಾನ ಮಾಡುವ ಸದಾಚಾರಿಗಳು, ವಿದ್ವಾಂಸರು, ಬ್ರಾಹ್ಮಣರು, ಮನುಷ್ಯರು, ಪಶುಗಳು, ಕ್ರಿಮಿ, ಕೀಟ ಮತ್ತಿತರ ಪ್ರಾಣಿಗಳು ಮತ್ತು ವೃಕ್ಷಾದಿ ಸ್ಥಾವರಗಳು

**ನಾಲ್ಕು ವರ್ಣ(ಗುಣ)ದವರು ಪಾಲಿಸಬೇಕಾದ ಕರ್ಮಗಳು:**

| | | |
|---|---|---|
| ಬ್ರಾಹ್ಮಣ | : | ಅಧ್ಯಯನ, ಅಧ್ಯಾಪನ, ಯಜ್ಞ ಮತ್ತು ದಾನ |
| ಕ್ಷತ್ರಿಯ | : | ರಕ್ಷಣೆ, ದಾನ, ಯಾಗ, ಅಧ್ಯಯನ, ವಿಭೋಗ |
| ವೈಶ್ಯ | : | ಪಶುಸಂಗೋಪನೆ, ದಾನ, ಹೋಮ, ಅಧ್ಯಯನ, ವ್ಯಾಪಾರ, ಕೃಷಿ ಮತ್ತು ಧನ ಸಂಪಾದನೆ |
| ಶೂದ್ರ | : | ಮೇಲಿನ ಮೂರು ವರ್ಣದವರ ಸೇವೆ |

## ಕಾಲ

ಕಾಲವೆಂಬುದು ವಿಶ್ವವ್ಯಾಪಿಯಾದ ಸದಾ ಚಲನಶೀಲತೆಯಿಂದ ಕೂಡಿ ಪರಿವರ್ತನೆಗೊಳ್ಳುತ್ತಿರುವ ಶಕ್ತಿಯ ರೂಪ. ಇಂಥಾ ಮಹಾನ್ ಶಕ್ತಿಯ ವಶವಾಗಿರುವ ವಿಶ್ವದಲ್ಲಿನ ಸಕಲ ಜೀವ ಮತ್ತು ನಿರ್ಜೀವ ವಸ್ತುಗಳು ನಿರರ್ಗಳವಾಗಿ ಅವಿರತ ತಮ್ಮ ನಿತ್ಯ ಕಾರ್ಯ ಕಲಾಪಗಳನ್ನು ಪೂರೈಸುತ್ತಿವೆ. ವಿಶ್ವದಾದ್ಯಂತ ಘಟಿಸುತ್ತಿರುವ ಘಟನೆಗಳನ್ನು ಕಾಲದ ಮುಖೇನ ಗುರುತಿಸುತ್ತಿರುವುದು ಸರ್ವವೇದ್ಯ. ಯಾವುದೇ ಘಟನೆಗಳನ್ನು ಆಯಾ ಕಾಲಮಾನಕ್ಕೆ ಮತ್ತು ಮನೋಸ್ಥಿತಿಗೆ ತಕ್ಕಂತೆ, ಒಳ್ಳೆಯ ಅಥವಾ ಕೆಟ್ಟ ಘಟನೆಗಳು ಎಂದು ಗುರುತಿಸಲ್ಪಡುತ್ತವೆ. ಮಾನವ ಸಂಕುಲವು ಪ್ರಕೃತಿ ನಿಯಮದಂತೆ ಒಳಿತು ಮತ್ತು ಕೆಡುಕುಗಳು ಸಮಾನವಾಗಿ ಎಲ್ಲೆಲ್ಲೂ ಪಸರಿಸಿದ್ದರೂ, ಅದನ್ನು ಕುರುಡು ಜಾಣತನದಲ್ಲಿ ಮರೆತು ಯಾವುದೇ ಕಾರ್ಯವನ್ನು ಆರಂಭಿಸಲು ಸಂಕಲ್ಪಿಸುವಾಗ ಸದಾಕಾಲ ಒಳಿತನ್ನೇ ಬಯಸುತ್ತಾ ತಲೆತಲಾಂತರಗಳಿಂದ ಘಟಿಸುತ್ತಿರುವ ಘಟನೆಗಳನ್ನು



ಅವಲೋಕಿಸಿ ಗ್ರಹ ಮತ್ತು ನಕ್ಷತ್ರಗಳ ಚಲನೆಯ ಆಧಾರದ ಮೇಲೆ ಸಂಕೀರ್ಣವಾದ ಪ್ರಾಕೃತಿಕ ಆಗುಹೋಗುಗಳನ್ನು ಅಂದಾಜಿಸುತ್ತಾ ಜನ್ಮಕುಂಡಲಿಗೆ ನಕ್ಷತ್ರ, ತಿಥಿ, ವಾರ ಮತ್ತು ಲಗ್ನವನ್ನು ಹೊಂದಿಸಿ ಶುಭ ಘಳಿಗೆ ಎಂದು ನಿರ್ಧರಿಸಲಾಗುತ್ತಿದೆ.

**ಕಾಲ ಮಾಪನ:**

ಮನುಷ್ಯನು ತನ್ನ ಕಣ್ಣುರೆಪ್ಪೆಯನ್ನು ಸ್ವಾಭಾವಿಕವಾಗಿ 18 ಸಲ ಮುಚ್ಚಿ ತೆಗೆಯುವ ಸಮಯಕ್ಕೆ 1 ಕಾಷ್ಠವೆಂದೂ, 30 ಕಾಷ್ಠಗಳಿಗೆ 1 ಕಲಾ ಎಂದು, 30 ಕಲಾಗಳಿಗೆ 1 ಮುಹೂರ್ತವೆಂದು ಮತ್ತು 30 ಮುಹೂರ್ತಗಳಿಗೆ 1 ದಿನವೆಂದು ಗುರುತಿಸಲಾಗಿದೆ.

ಮನುಷ್ಯರ 1 ತಿಂಗಳು ಪಿತೃಗಣಗಳ 1 ದಿನ (ಹಗಲು ಮತ್ತು ರಾತ್ರಿ)
ಮನುಷ್ಯರ ತಿಂಗಳಿನಲ್ಲಿ ಎರಡು ಪಕ್ಷಗಳು : ಮೊದಲನೆಯದು ಕೃಷ್ಣ ಪಕ್ಷ (ಪಿತೃಗಳು ಕ್ರಿಯಾಶೀಲರು), ಎರಡನೆಯದು ಶುಕ್ಲ ಪಕ್ಷ (ಪಿತೃಗಳ ನಿದ್ರಾವಸ್ಥೆ)

ಮನುಷ್ಯರ 1 ವರ್ಷ ದೇವತೆಗಳ 1 ದಿನ (ಹಗಲು ಮತ್ತು ರಾತ್ರಿ)
ಮನುಷ್ಯರ 1 ವರ್ಷದಲ್ಲಿ ಎರಡು ವರ್ಗ; ಉತ್ತರಾಯಣ (ದೇವತೆಗಳ ಹಗಲು ಮತ್ತು ಅವರ ಕರ್ಮ ಕಾಲ) ಮತ್ತು ದಕ್ಷಿಣಾಯನ (ದೇವತೆಗಳ ರಾತ್ರಿ ಮತ್ತು ಅವರ ನಿದ್ರಾ ಕಾಲ)

ಕಲಿಯುಗದ ಅವಧಿ: 4,32,000 ಮನುಷ್ಯರ ವರ್ಷಗಳು= 1,200 ದೇವ ವರ್ಷಗಳು

ದ್ವಾಪರಯುಗದ ಅವಧಿ: 8,64,000 ಮನುಷ್ಯರ ವರ್ಷಗಳು= 2,400 ದೇವ ವರ್ಷಗಳು

ತ್ರೇತಾಯುಗದ ಅವಧಿ: 12,96,000 ಮನುಷ್ಯರ ವರ್ಷಗಳು= 3,600 ದೇವ ವರ್ಷಗಳು

ಸತ್ಯ /ಕೃತಯುಗದ ಅವದಿ: 17,28,000 ಮನುಷ್ಯರ ವರ್ಷಗಳು= 4,800 ದೇವ ವರ್ಷಗಳು

ಹಾಗಾಗಿ, ಒಂದು ಚತುರ್ಯುಗದ ಅವಧಿ = 43,20,000 ಮನುಷ್ಯರ ವರ್ಷಗಳು

ಇಂತಹ 72 ಚತುರ್ಯುಗಗಳನ್ನು ಒಂದು ಮನ್ವಂತರ ಎನ್ನುವರು.

1 ಮನ್ವಂತರ = 31,10,40,000 ಮನುಷ್ಯರ ವರ್ಷಗಳು
1000ಚತುರ್ಯುಗ = 14 ಮನ್ವಂತರ = 432,00,00,000 ಮನುಷ್ಯರ ವರ್ಷಗಳು= ಬ್ರಹ್ಮನ ಒಂದು ಹಗಲು = 1 ಕಲ್ಪ
ಬ್ರಹ್ಮನ ಒಂದು ದಿನ (ಹಗಲು ಮತ್ತು ರಾತ್ರಿ) 2 ಕಲ್ಪ = 864,00,00,000 ಮನುಷ್ಯರ ವರ್ಷಗಳು
ಬ್ರಹ್ಮನ ಆಯಸ್ಸು = 2 ಕಲ್ಪ * 360 * 100 ವರ್ಷಗಳು = 31104000,00,00,000 ಮನುಷ್ಯರ ವರ್ಷಗಳು

14 ಮನ್ವಂತರಗಳು: ಸ್ವಾಯಂಭುವ, ಸ್ವರೋಸಿಶ, ಉತ್ತಮ, ತಾಪಸ, ರೈವತ, ಚಕ್ಷೂಷ, ವೈವಸ್ವತ (ನಾವು ಜೀವಿಸಿರುವ ಮನ್ವಂತರ), ಸಾವರ್ಣಿ, ದಕ್ಷ ಸಾವರ್ಣಿ, ಬ್ರಹ್ಮ ಸಾವರ್ಣಿ, ಧರ್ಮ ಸಾವರ್ಣಿ, ರುದ್ರ ಸಾವರ್ಣಿ, ದೇವ ಸಾವರ್ಣಿ ಮತ್ತು ಇಂದ್ರ ಸಾವರ್ಣಿ.

**ಚತುರ್ಯುಗಗಳ ಕಾಲಮಾನ:**
ಸಂಧ್ಯಾಕಾಲ 400 ದೇವ ವರ್ಷಗಳು+ಕೃತಯುಗ 4000 ದೇವ ವರ್ಷಗಳು+ ಸಂಧ್ಯಾಂಶ 400 ದೇವ ವರ್ಷಗಳು
+ ಸಂಧ್ಯಾಕಾಲ 300 ದೇವ ವರ್ಷಗಳು+ತ್ರೇತಾಯುಗ 3000 ದೇವ ವರ್ಷಗಳು+ ಸಂಧ್ಯಾಂಶ 300 ದೇವ ವರ್ಷಗಳು
+ ಸಂಧ್ಯಾಕಾಲ 200 ದೇವ ವರ್ಷಗಳು+ದ್ವಾಪರಾಯುಗ 2000 ದೇವ ವರ್ಷಗಳು + ಸಂಧ್ಯಾಂಶ 200 ದೇವ ವರ್ಷಗಳು
+ ಸಂಧ್ಯಾಕಾಲ 100 ದೇವ ವರ್ಷಗಳು + ಕಲಿಯುಗ 1000 ದೇವ ವರ್ಷಗಳು+ ಸಂಧ್ಯಾಂಶ 100 ದೇವ ವರ್ಷಗಳು

ಹೀಗೆ, ಸಂಪೂರ್ಣ ನಾಲ್ಕು ಯುಗಗಳ ಅವಧಿಯಾದ 10,000 ದೇವ ವರ್ಷಗಳು ಮತ್ತು ನಡುವಿನ ಸಂಧ್ಯಾಕಾಲ (ಸೃಷ್ಟಿಯ ಕಾಲ), ಸಂಧ್ಯಾಂಶಗಳ (ಪ್ರಳಯಕಾಲ) ಅವಧಿಯಾದ 2,000 ದೇವ ವರ್ಷಗಳು ಸೇರಿ ಒಟ್ಟಿಗೆ 12,000 ದೇವ ವರ್ಷಗಳು ಅದುವೇ ದೇವತೆಗಳ 1 ಯುಗ ಎನಿಸುವುದು. ಈ ಅವಧಿಯು ಮನುಷ್ಯರ 43,20,000 ವರ್ಷಗಳಿಗೆ ಸಮವಾಗುವುದು, ಅದುವೆ ಮನುಷ್ಯರ ಚತುರ್ಯುಗ. ಇಂತಹ 2,000 ದೇವತೆಗಳ ಯುಗಗಳು ಬ್ರಹ್ಮನ 1 ದಿನಕ್ಕೆ ಸಮ (ಹಗಲು ಮತ್ತು ರಾತ್ರಿ ಸೇರಿ) ಬ್ರಹ್ಮನ ಆಯಸ್ಸು 72000 ಕಲ್ಪಗಳು ಎಂದರೆ ಮೂವತ್ತೊಂದು



ಸಾವಿರದ ನೂರಾನಾಲ್ಕು ಕೋಟಿ ಸಾವಿರ ಮನುಷ್ಯರ ವರ್ಷಗಳು! ಬ್ರಹ್ಮನು ದಿನಂಪ್ರತಿ ಬೆಳಿಗ್ಗೆ (432,00,00,000 ಮನುಷ್ಯರ ವರ್ಷಗಳ ಬಳಿಕ) ಎದ್ದು ಸತ್ ಮತ್ತು ಅಸತ್, ವ್ಯಕ್ತ ಮತ್ತು ಅವ್ಯಕ್ತವಾಗಿರುವ ಮನಸ್ಸನ್ನು ಸೃಷ್ಟಿಸುತ್ತಾ ಪ್ರಪಂಚದ ಹುಟ್ಟು ಸಾವಿನ ನಿರಂತರ ಪ್ರಕ್ರಿಯೆಗೆ ಚಾಲನೆ ನೀಡುತ್ತಿರುತ್ತಾನೆ. ಹೀಗೆ, ಬ್ರಹ್ಮನ ಒಂದು ಹಗಲು ಮತ್ತು ಒಂದು ರಾತ್ರಿಗೆ ಸಮನಾದ ಅವಧಿಯಾದ 2,000 ದೇವ ಯುಗಗಳ ಬಗ್ಗೆ ಯಾರು ಅರಿಯುವರೋ ಅವರೇ ಅಹೋರಾತ್ರಿಗಳನ್ನು ತಿಳಿದವರೆಂದೂ, ಅವರನ್ನು ಕಾಲಜ್ಞರು ಅಥವಾ ಕಾಲಜ್ಞಾನಿಗಳು ಎನ್ನುತ್ತಾರೆ.

**ರಾಹು ಕಾಲ :** ರಾಹುಕಾಲವನ್ನು "ವಿಷಘಳಿಗೆ" ಎಂದೂ ಕರೆಯುವುದು ವಾಡಿಕೆ. ಈ ಸಮಯದಲ್ಲಿ ಮುಖ್ಯವಾದ ಕಾರ್ಯಗಳು ಅಥವಾ ಶುಭಕಾರ್ಯಗಳನ್ನು ಮಾಡುವುದು ನಿಶಿದ್ಧವಾದರೂ ಈ ಸಮಯದಲ್ಲಿ ರಾಹುದೋಷ ನಿವಾರಣಾ ಪೂಜೆ ಮತ್ತು ಮಾತೆ ದುರ್ಗಾದೇವಿಯ ಆರಾಧನೆಗೆ ತುಂಬಾ ಸೂಕ್ತವೆಂದು ಪುರಾಣಗಳಲ್ಲಿ ಉಲ್ಲೇಖಿಸಲಾಗಿದೆ.
**ಗುಳಿಕ ಕಾಲ:** ಈ ಕಾಲದ ವಿಶೇಷತೆಯೆಂದರೆ ಯಾವುದೇ ಕಾರ್ಯಗಳನ್ನು ಈ ಸಮಯದಲ್ಲಿ ಆಚರಿಸಿದರೆ, ಆ ಕಾರ್ಯಗಳು ಪುನಃ ಮರುಕಳಿಸುತ್ತವೆ ಎಂಬ ನಂಬಿಕೆಯಿದೆ. ಹಾಗಾಗಿ, ಗೃಹಪ್ರವೇಶ, ವಾಹನ ಮತ್ತು ಬಂಗಾರ ಇತ್ಯಾದಿಗಳನ್ನು ಖರೀದಿಸಲು ಯೋಗ್ಯವೆನಿಸಿದೆ. ಆದರೆ, ಮದುವೆ ಕಾರ್ಯ ಮತ್ತು ಮೃತ ವ್ಯಕ್ತಿಯ ಶರೀರವನ್ನು ಈ ಸಮಯದಲ್ಲಿ ತೆಗೆಯಲು ಸಮಂಜಸವಲ್ಲ ಯಾಕೆಂದರೆ ಇವುಗಳು ಮತ್ತೆ ಮರುಕಳಿಸದಿರಲಿ ಎಂಬ ಆಶಯ.
**ಯಮಗಂಡ ಕಾಲ:** ಈ ಸಮಯವನ್ನು ಯಾವುದೇ ಕಾರ್ಯವನ್ನು ಅಂತ್ಯಗೊಳಿಸಲು ಪಾಲಿಸಬಹುದಾದ ವೇಳೆಯೆಂದು ಮಾನ್ಯತೆ ಪಡೆದಿದೆ. ಯಮಗಂಡ ಕಾಲವನ್ನು ಮೃತ್ಯುವಿನ ಸಮಯವೆಂದೂ ಹೇಳುತ್ತಾರೆ. ಈ ಸಮಯದಲ್ಲಿ ಅಂತ್ಯಕ್ರಿಯೆ, ತಿಥಿಯಾಚರಣೆ ಇತ್ಯಾದಿಗಳನ್ನು ನೆರವೇರಿಸಲಾಗುತ್ತದೆ.

## ಧರ್ಮ

ಧರ್ಮ ಶಾಸ್ತ್ರವು ಭಗವಂತನಿಂದ ಆರಂಭಗೊಂಡು ಮೊದಲು ಬ್ರಹ್ಮನಿಗೆ, ಬ್ರಹ್ಮನಿಂದ ಮನುವಿಗೆ, ಮನುವಿನಿಂದ ದಶ ಪ್ರಜಾಪತಿಗಳಿಗೆ, ಪ್ರಜಾಪತಿಗಳಿಂದ ಋಷಿಗಳಿಗೆ ಮತ್ತು ಋಷಿಗಳಿಂದ ಇತರರಿಗೆ ಹಂಚಲ್ಪಟ್ಟಿದೆ.

1 ಕೃತಯುಗದಲ್ಲಿ ತಪಸ್ಸೇ ಧರ್ಮ ಹಾಗೂ ಧರ್ಮಕ್ಕೆ ನಾಲ್ಕು ಕಾಲುಗಳಿದ್ದು ಪ್ರಜೆಗಳೆಲ್ಲಾ ರೋಗ ರುಜಿನವಿಲ್ಲದೇ ಸರ್ವ ಸುಖವನ್ನು ಅನುಭವಿಸಿ 400 ವರ್ಷಗಳವರೆಗೆ ಬದುಕುವರು.

1 ತ್ರೇತಾಯುಗದಲ್ಲಿ ಜ್ಞಾನವೇ ಧರ್ಮ ಹಾಗೂ ಧರ್ಮಕ್ಕೆ ಮೂರು ಕಾಲುಗಳಿದ್ದು ಪ್ರಜೆಗಳು ಕೊಂಚ ರೋಗ, ಸ್ವಲ್ಪ ಕಷ್ಟಗಳನ್ನು ಅನುಭವಿಸಿ 300 ವರ್ಷಗಳವರೆಗೆ ಬದುಕುವರು.

1 ದ್ವಾಪರಯುಗದಲ್ಲಿ ಯಜ್ಞವೇ ಧರ್ಮ ಹಾಗೂ ಧರ್ಮಕ್ಕೆ ಎರಡು ಕಾಲುಗಳಾಗಿ ಪ್ರಜೆಗಳು ರೋಗ, ಕಷ್ಟನಷ್ಟಗಳನ್ನು ಅನುಭವಿಸಿ 200 ವರ್ಷಗಳವರೆಗೆ ಬದುಕುವರು.

1 ಕಲಿಯುಗದಲ್ಲಿ ದಾನವೇ ಧರ್ಮ ಹಾಗೂ ಧರ್ಮಕ್ಕೆ ಒಂದೇ ಕಾಲುಳಿದು ಪ್ರಜೆಗಳು ಅತಿಯಾದ ರೋಗ, ಕಷ್ಟನಷ್ಟಗಳನ್ನು ಅನುಭವಿಸಿದರೂ ಕರ್ಮಸಿದ್ಧಿ, ಪ್ರಾರ್ಥನೆ ಹಾಗೂ ತಪಸ್ಸಿನ ಪ್ರಭಾವದಿಂದ 100 ವರ್ಷಗಳವರೆಗೆ ಬದುಕುವರು.

ಧರ್ಮಕ್ಕೆ ನಿರ್ದಿಷ್ಟತೆ ಇಲ್ಲದಿರುವುದಕ್ಕೆ ಕಾರಣ ಕಾಲ, ಮಾನ ಮತ್ತು ಸ್ಥಿತಿಗೆ ಅನುಗುಣವಾಗಿ ಆಗುವ ಬದಲಾವಣೆಗಳೇ ಮುಖ್ಯವಾದವುಗಳು.

## ದಾನಗಳ ಮಹತ್ವ:

ಸ್ವಾರ್ಜಿತದಿಂದ ಗಳಿಸಿದ ಸುಧನವನ್ನು ಮಾತ್ರ ಉಪಯೋಗಿಸಿ ಸದ್ಭಾವನೆಯಿಂದ ದಾನ ಮಾಡಬೇಕು. ದಾನ ಮಾಡುವಾಗಲಿನ ಭಾವನೆಗೆ ತಕ್ಕಂತೆ ಫಲಶೃತಿ ಪ್ರಾಪ್ತವಾಗುತ್ತದೆ ಎಂಬುದನ್ನು ಗಮನಿಸಬೇಕು.

ಯಜ್ಞ ಕಾರ್ಯ ನೆರವೇರಿಸುವುದು, ಕೆರೆ, ಬಾವಿಗಳ ಸ್ಥಾಪನೆ ಮತ್ತು ಅನ್ನಛತ್ರಗಳ ನಡೆಸುವಿಕೆಯಿಂದ ಪುಣ್ಯಫಲದ ಅಕ್ಷಯವಾಗುವುದು. ಜಲದಾನದಿಂದ ತೃಪ್ತಿ, ಅನ್ನದಾನದಿಂದ ಸುಖದ ಅಕ್ಷಯ, ಎಳ್ಳುದಾನದಿಂದ ಸಂತಾನ ಪ್ರಾಪ್ತಿ, ದೀಪದಾನದಿಂದ ಉಜ್ವಲ ದೃಷ್ಟಿ, ಭೂದಾನದಿಂದ ಭೂ ವರ್ಧನೆ, ಗೃಹದಾನ, ವೃಷಭದಾನ ಮತ್ತು ಅಭಯದಾನದಿಂದ ಐಶ್ವರ್ಯ



ವರ್ಧನೆ, ಬೆಳ್ಳಿಯ ದಾನದಿಂದ ರೂಪ ವರ್ಧನೆ, ವಾಹನ ಅಥವಾ ಹಾಸಿಗೆ ದಾನದಿಂದ ದಾಂಪತ್ಯ ಸುಖ ವರ್ಧನೆ, ಧಾನ್ಯದಾನದಿಂದ ಶಾಶ್ವತ ಸುಖ, ವಸ್ತ್ರದಾನದಿಂದ ಶಾಂತಿ ವೃದ್ಧಿ, ಕುದುರೆ ದಾನದಿಂದ ಅಶ್ವಿನಿ ದೇವತೆಗಳ ಕೃಪಾಕಟಾಕ್ಷ, ಗೋದಾನದಿಂದ ಸೂರ್ಯಲೋಕ ಪ್ರಾಪ್ತಿ ಮತ್ತು ವಿದ್ಯಾದಾನದಿಂದ ಬ್ರಹ್ಮಸಾಯುಜ್ಯವನ್ನು ಹೊಂದಬಹುದು.

ಗೀತೆಯಲ್ಲಿ ಉಲ್ಲೇಖಿಸಿರುವಂತೆ, ಮಾನವನ ಜೀವನದ ಹದಿನೆಂಟು ಮೌಲ್ಯಗಳೆಂದರೆ; ಧರ್ಮ, ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ, ಬಲ, ಶ್ರವಣ, ಮನನ, ನಿಧಿಧ್ಯಾಸನ, ಶೀಲ, ವಿನಯ, ವೇದವಿದ್ಯೆ ಮತ್ತು ವೇದವೇದ್ಯ. ಅಂದರೆ, ಧರ್ಮದ ಚೌಕಟ್ಟಿನಲ್ಲಿ ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ ಮತ್ತು ಬಲವನ್ನು ಮೈಗೂಡಿಸಿಕೊಂಡು ಶಾಸ್ತ್ರದ ಶ್ರವಣ, ಮನನ ಮಾಡುತ್ತಾ ನಿಧಿಧ್ಯಾಸನದೊಂದಿಗೆ ಶೀಲ ಮತ್ತು ವಿನಯಗಳನ್ನು ನಮ್ಮ ನಿತ್ಯ ಸಂಗಾತಿಗಳಾಗಿಸಿಕೊಳ್ಳಬೇಕು. ಹಾಗಾಗಿ, ಈ ಹದಿನಾರು ಜೀವನ್ಮೌಲ್ಯಗಳಿಂದ ಹದಿನೇಳನೆ ವೇದವಿದ್ಯೆಯನ್ನು ಒಲಿಸಿಕೊಂಡರೆ ಹದಿನೆಂಟನೇ ವೇದವೇದ್ಯವಾದ ಭಗವಂತನನ್ನು ಸುಲಭವಾಗಿ ತಲುಪಬಹುದು.

## ಮನುಷ್ಯರಲ್ಲಿ ಸಹಜವಾಗಿ ಹಾಸುಹೊಕ್ಕಾಗಿರುವ ಮೂರು ವಿಧದ ದುಷ್ಕರ್ಮಗಳೆಂದರೆ;

1 **ಮಾನಸ ಕರ್ಮ :** ಪರಧನಕ್ಕೆ ಆಸೆ ಪಡುವುದು, ಪರರಿಗೆ ಕೇಡು ಬಯಸುವುದು ಮತ್ತು ಅಸತ್ಯದಲ್ಲಿ ಆಸಕ್ತಿ ಹೊಂದುವುದು

1 **ವಾಚನಿಕ ಕರ್ಮ :** ಕರ್ಕಶ ಹಾಗೂ ಮಲೀನ ಮಾತುಗಳು, ಸುಳ್ಳು ನುಡಿಯುವುದು, ಚಾಡಿ ಹೇಳುವುದು ಮತ್ತು ಅಸಂಗತ, ಅಸಂಬದ್ಧವಾಗಿ ಪ್ರಲಾಪಿಸುವುದು

1 **ಶಾರೀರಿಕ ಕರ್ಮ :** ಪರಧನ ಕಸಿಯುವಿಕೆ, ಶಾಸ್ತ್ರ ವಿರೋಧವಾದ ಹಿಂಸೆ ಮತ್ತು ಪರಸ್ತ್ರೀ ಸಂಸರ್ಗ

## ಹದಿನಾರು ಸಂಸ್ಕಾರಗಳು

ಅಂಕುರದಿಂದ ಆರಂಭಗೊಂಡು ಅಂತ್ಯೇಷ್ಠಿಯವರೆಗೆ ಜೀವಿಸುವ ಮಾನವರು ಭವಬಂಧನಗಳಿಂದ ಪಾರಾಗಿ ತಮ್ಮ ಜೀವನವನ್ನು ಪಾವನಗೊಳಿಸಿಕೊಂಡು ಭೌತಿಕ ಪ್ರಪಂಚದಲ್ಲಿರುವ ಮಿಕ್ಕವರೆಲ್ಲರನ್ನೂ ಆದರಿಸುತ್ತಾ ಮೋಕ್ಷ ಸಂಪಾದಿಸಲು ಅನಾದಿಯಿಂದ, ಬದಲಾವಣೆಗಳಿಗೆ ಒಗ್ಗಿಕೊಂಡರೂ, ಉಳಿದು ಪಾಲಿಸಿಕೊಂಡು ಬಂದಿರುವ, ಮಾನವರು ತಮ್ಮ ಜೀವನ ಶೈಲಿಯಲ್ಲಿ ಅಳವಡಿಸಿಕೊಳ್ಳಬೇಕಾದ ಧಾರ್ಮಿಕತೆಯ ಪುಣ್ಯಕರವಾದ ಹದಿನಾರು ಸಂಸ್ಕಾರಗಳೆಂದರೆ, ಕ್ರಮವಾಗಿ; ಗರ್ಭಾದಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣೆ, ಅನ್ನಪ್ರಾಶನ, ಚೂಡಾಕರ್ಮ, ಕರ್ಣವೇಧ, ಅಕ್ಷರಾಭ್ಯಾಸ, ಉಪನಯನ, ವೇದಾರಂಭ, ಕೇಶಾಂತ, ಸಮಾವರ್ತನ, ವಿವಾಹ ಮತ್ತು ಅಂತ್ಯೇಷ್ಠಿ

**ಸಂಸ್ಕಾರಗಳನ್ನು ಆಚರಿಸುವ ಮುನ್ನ ನಡೆಸುವ ಸಿದ್ಧತೆಗಳು:**

**ಸ್ನಾನ :** ಧಾರ್ಮಿಕ ಕ್ರಿಯೆಗಳಿಗೆ ತೊಡಗಿಸಿಕೊಳ್ಳುವ ಮುನ್ನ ಮುಗಿಸಲೇಬೇಕಾದ ವಿಧಿಯಿದು. ಸ್ನಾನದಿಂದ ಜೀವಿಗಳು ದೈಹಿಕವಾಗಿ ಶುದ್ಧವಾದರೂ ಈ ವಿಧಿಯ ಹಿನ್ನೆಲೆಯಲ್ಲಿ ಅಡಗಿರುವ ಸೂಕ್ಷ್ಮತೆಯೆಂದರೆ "ನಾನು ಶುಚಿಯಾದೆ" ಎನ್ನುವ ಭಾವವನ್ನು ಮನಸ್ಸಿನಲ್ಲಿ ಅಚ್ಚೊತ್ತುವುದು. ಆಗ ಮನಸ್ಸಿನಲ್ಲಿ ಪ್ರಸನ್ನತೆ ಉಂಟಾಗಿ ಮುದವೆನಿಸಿ ನಿರಾಳತೆಯ ಭಾವ ಮೂಡಿ ಆಚರಿಸಲಿರುವ ವಿಧಿ–ವಿಧಾನಗಳಿಗೆ ತನ್ನನ್ನು ಸಮರ್ಪಿಸಿಕೊಳ್ಳಲು ಅಣಿಮಾಡಿದಂತೆ.

**ಆಸನ :** ಧಾರ್ಮಿಕ ಕ್ರಿಯೆಗಳಲ್ಲಿ ಪಾಲ್ಗೊಳ್ಳುವಾಗ ನೇರವಾಗಿ ನೆಲದ ಮೇಲೆ ಕುಳಿತುಕೊಳ್ಳದೆ ವಿದ್ಯುತ್ ವಾಹಕಗಳಲ್ಲದ ಕೃಷ್ಣಾಜಿನ, ವ್ಯಾಘ್ರಾಜಿನ, ದರ್ಭಾಸ್ತರಣ ಅಥವಾ ಮರದ ಮಣೆಗಳನ್ನು ಉಪಯೋಗಿಸಲು ಸೂಚಿಸಿರುವ ಕಾರಣವೆಂದರೆ ಶರೀರದಲ್ಲಿ ಉಗಮವಾಗುವ ವಿದ್ಯುತ್ ಪಾರ್ಥೀವ ವಿದ್ಯುತ್ತಿನ ಸಂಪರ್ಕಕ್ಕೆ ಒಳಗಾಗಬಾರದು ಎಂಬುದು. ಅಲ್ಲದೇ ಭೂಮಿಯಲ್ಲಿ ಪಸರಿಸಿರಬಹುದಾದ ಋಣಾತ್ಮಕ ಕಂಪನಗಳು ಮಾನಸಿಕ ಏಕಾಗ್ರತೆಗೆ ಭಂಗ ತಾರದಿರಲೆಂದೂ ಆಗಿದೆ. ಬಳಸುವ ಆಸನಗಳಿಂದ ಅತೀ ಸುಖ ಕೂಡ ಇರಬಾರದು ಹಾಗಾಗಿ ಮೆತ್ತನೆಯ ಆಸನಗಳ ನಿಷೇಧವಿದೆ. ಅಂತೆಯೇ ತೀರ ಒರಟಾದ ಆಸನಗಳೂ ತ್ಯಾಜ್ಯಗಳೇ, ಯಾಕೆಂದರೆ ಇವೆರಡೂ



ಮಾನಸಿಕ ಚಿತ್ತವನ್ನು ಚಂಚಲಗೊಳಿಸುವಲ್ಲಿ ಶಕ್ತವಾಗಿವೆ.

**ತಿಲಕ ಧಾರಣೆ :** ಆಸನದ ನಂತರ ತಿಲಕಧಾರಣೆಗೆ ಮಹತ್ವವಿದೆ. ತಿಲಕವಿಲ್ಲದಿದ್ದರೆ ಸ್ನಾನ, ದಾನ, ಹೋಮ, ತಪಸ್ಸು, ದೇವಕರ್ಮ, ಪಿತೃಕರ್ಮ ಇತ್ಯಾದಿ ಯಾವುದೇ ಕಾರ್ಯಗಳು ನಿಷ್ಫಲವೆನಿಸುವುದು. ಶಾಸ್ತ್ರಗಳ ದೃಷ್ಟಿಯಿಂದ ತಿಲಕ ಕ್ರಿಯೆಗೆ ಅತ್ಯಂತ ಶ್ರೇಷ್ಠವಾದ ವಸ್ತುವೆಂದರೆ ತೀರ್ಥಮೃತ್ತಿಕೆ. ಪುಣ್ಯಕ್ಷೇತ್ರ, ತೀರ್ಥಸ್ಥಳಗಳ ಮೃತ್ತಿಕೆಯನ್ನು ಸಂಗ್ರಹಿಸಿಟ್ಟುಕೊಂಡು ಅದನ್ನೇ ತಿಲಕ ಕ್ರಿಯೆಗೆ ದ್ರವ್ಯವನ್ನಾಗಿ ಬಳಸಬೇಕು. ಇಂಥಾ ತೀರ್ಥಮೃತ್ತಿಕೆಯನ್ನು ಹಣೆಯಲ್ಲಿ ಧರಿಸಿದಾಗ ದುರ್ವಿಚಾರಗಳೆಲ್ಲಾ ತೊಲಗಿ ಪಾವಿತ್ರ್ಯತೆ ನೆಲೆಸುವಂಥ ಅಪಾರ ವಿಶೇಷ ಗುಣಗಳುಂಟು. ತೀರ್ಥಮೃತ್ತಿಕೆ ಅಲಭ್ಯವಾದಾಗ ಚಂದನ, ಗೋಪಿಚಂದನ, ಸಿಂಧೂರ, ಕುಂಕುಮ ಮತ್ತು ಭಸ್ಮ ಇತ್ಯಾದಿಗಳನ್ನು ತಿಲಕ ಕ್ರಿಯೆಗೆ ಬಳಸಬಹುದು. ತಿಲಕದ ಮಹತ್ವವೆಂದರೆ, ನಮ್ಮ ಸಮಸ್ತ ಸಂಕಲ್ಪಗಳಿಗೆ ಕೇಂದ್ರ ಬಿಂದು ಮಸ್ತಿಷ್ಕ. ಮನಸ್ಸಿನಲ್ಲಿ ಸಂಕಲ್ಪ ಜಾಗೃತವಾದೊಡನೆ ಮಸ್ತಿಷ್ಕದಲ್ಲಿರುವ ಧಮನಿಗಳಲ್ಲಿ ಕಂಪನ ಉಂಟಾಗಿ ತನ್ಮೂಲಕ ಇತರ ಇಂದ್ರಿಯಗಳಿಗೆ ತಲುಪಿ ಅವು ಕಾರ್ಯೋನ್ಮುಖವಾಗುತ್ತವೆ. ನಮ್ಮ ಮಸ್ತಿಷ್ಕವು ವಿಕಾರ ರಹಿತವಾಗಿದ್ದಷ್ಟೂ ಪ್ರತ್ಯೇಕ ಸಂಗತಿಯ ವಾಸ್ತವ ರೂಪ ಗ್ರಹಿಸುವುದು ಸುಲಭವಾಗುತ್ತದೆ. ನಮ್ಮ ಜ್ಞಾನತಂತುಗಳ ಕೇಂದ್ರ ಭಾಗವೆಂದರೆ ಲಲಾಟ ಮತ್ತು ಹುಬ್ಬುಗಳ ನಡುವಿನ ಭಾಗ. ಅಧಿಕ ವಿಚಾರಗಳ ಒತ್ತಡ ಬಿದ್ದಾಗ ಇದೇ ಭಾಗದಲ್ಲಿ ವೇದನೆಯು ಆರಂಭವಾಗುವುದು. ಆ ಭಾಗದಲ್ಲಿ ತಿಲಕವಿದ್ದಾಗ, ತಿಲಕ ವಸ್ತುವು ಜ್ಞಾನತಂತುಗಳಿಗೆ ತಂಪನ್ನಿತ್ತು ವೇದನೆಯನ್ನು ಶಮನಗೊಳಿಸಲು ಸಹಕಾರಿಯಾಗಿದೆ. ಇದಲ್ಲದೆ ತಲೆನೋವು, ಸೈನಸ್ ಬಾಧೆ, ದೃಷ್ಟಿದೋಷ ನಿವಾರಣೆಗೂ ಸಹ ಉಪಯುಕ್ತವಾಗಿದೆ. ಜೊತೆಗೆ ಅಂತಃಪ್ರಜ್ಞೆಯು ಜಾಗೃತಗೊಂಡು ಗ್ರಹಣ ಶಕ್ತಿ ಕೂಡ ವೃದ್ಧಿಸಲು ಸಹಾಯಕವಾಗಿದೆ.

**ಸಂಧ್ಯಾವಂದನೆ :** ಸಂಧ್ಯಾವಂದನೆಗೆ ಆಧ್ಯಾತ್ಮಿಕ ಪ್ರಪಂಚದಲ್ಲಿ ಮಹತ್ತರವಾದ ಸ್ಥಾನವಿದೆ. ಆತ್ಮೋನ್ನತಿಗೆ ನಮಗೆ ದೊರೆತಿರುವ ಶ್ರೇಷ್ಠ ಸಾಧನವಿದು. ಸಂಧ್ಯಾವಂದನೆಯ ವಿಧಿಯನ್ನು ಸೂಚಿಸಿರುವುದು ಕರ್ಮವನ್ನು ಕೈಗೊಳ್ಳುವವರ ಮನೋಭೂಮಿಕೆಯನ್ನು ಹದಗೊಳಿಸುವುದಕ್ಕಾಗಿ. ಹಾಗಾಗಿ ಇದನ್ನು ಎಂದೋ ಒಂದು ದಿನ ಮಾಡುವ ಕರ್ಮ ಇದಲ್ಲ, ಪ್ರತಿನಿತ್ಯ

ಮಾಡುವಂಥದ್ದು. ಸಂಖ್ಯಾಪೂರ್ವಕವಾಗಿ ಗಾಯತ್ರಿಮಂತ್ರವನ್ನು ಜಪಿಸಬೇಕು. ಅರ್ಘ್ಯ ಕೊಡುವ ನೀರಿನಲ್ಲಿ ಗಾಯತ್ರಿಯಂತ್ರವನ್ನು ಬರೆಯಬೇಕು

**ಆಚಮನ :** ಆಚಮನವೆಂದರೆ ಜಲಪಾನ. ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಶುದ್ಧ ಸ್ಥಳದಲ್ಲಿ ಆರಾಮಾಸನದಲ್ಲಿ ಕುಳಿತು ಗೋಕರ್ಣಾಕೃತಿಯ (ಹಸುವಿನ ಕಿವಿ) ಹಸ್ತದಲ್ಲಿ ಉದ್ದಿನಕಾಳು ಮುಳುಗುವಷ್ಟು ಜಲವನ್ನು ದೇವರ ಸ್ಮರಣೆ ಮಾಡುತ್ತಾ ಮೂರು ಬಾರಿ ಕುಡಿಯುವುದೇ ಆಚಮನ. ಆಚಮನದಿಂದ ಶರೀರ, ಮಾನಸ ಹಾಗೂ ವಾಚಿಕ ಪಾಪಗಳು ನಿವಾರಿಸಲ್ಪಡುತ್ತವೆ ಎಂಬ ನಂಬಿಕೆ. ಆಚಮನದಿಂದ ಕಂಠಶೋಷಣವು ದೂರಾಗಿ ಮಂತ್ರೋಚ್ಚಾರಣೆಯು ಸ್ಪಷ್ಟವೂ ಶುದ್ಧವೂ ಆಗಲು ಸಹಕಾರಿ. ಜೊತೆಗೆ ದೇಹದ ನೀರಿನಂಶದ ಕೊರತೆಯನ್ನು ನೀಗಿಸಿ ಶರೀರದ ಉಷ್ಣತೆಯನ್ನು ಹತೋಟಿಯಲ್ಲಿಡುತ್ತದೆ.

**ಪ್ರಾಣಾಯಾಮ :** ಉಸಿರನ್ನು ನಿಯಂತ್ರಣದಲ್ಲಿರಿಸಲು ಪ್ರಾಣಾಯಾಮದ ಅವಶ್ಯಕತೆಯಿದೆ. ಉಸಿರಾಟ ನಿಯಂತ್ರಣದಲ್ಲಿದ್ದರೆ ಆರೋಗ್ಯ ಮತ್ತು ಆಯುಷ್ಯ ವೃದ್ಧಿಯಾಗುತ್ತದೆ ಎಂಬುದು ಸರ್ವ ವೇದ್ಯ. ಹಾಗಾಗಿ, ಸಾಂಗವಾಗಿ ಪ್ರಾಣಾಯಾಮವನ್ನು ಮಾಡಿ ಕ್ರಿಯೆಗಳನ್ನು ಆರಂಭಿಸಿದರೆ ಸತ್ಫಲ ಪ್ರಾಪ್ತಿಯಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ದಶೋಂಕಾರದ ಮಂತ್ರವನ್ನು ಜಪಿಸುತ್ತಾ ಬ್ರಹ್ಮಚಾರಿಗಳು ಅಂಗುಷ್ಠ, ಅನಾಮಿಕ ಮತ್ತು ಕನಿಷ್ಠಿಕಾ ಅಂಗುಲಿಗಳಿಂದ ಮತ್ತು ಗೃಹಸ್ಥರೋ ಐದೂ ಅಂಗುಲಿಗಳನ್ನು ಉಪಯೋಗಿಸಬೇಕು. ಪ್ರಾಣಾಯಾಮದಲ್ಲಿ ಮೂರು ಅಂಗಗಳಿವೆ; ರುದ್ರರು ಅಧಿಪತಿಯಾದ ರೇಚಕ – ದೇಹದೊಳಗಿರುವ ವಾಯುವನ್ನು ಬಲಮೂಗಿನಿಂದ ಹೊರಗೆ ಬಿಡುವುದು, ಬ್ರಹ್ಮರು ಅಧಿಪತಿಯಾದ ಪೂರಕ – ಹೊರಗಿರುವ ವಾಯುವನ್ನು ಎಡಮೂಗಿನಿಂದ ದೇಹದೊಳಕ್ಕೆ ಎಳೆದುಕೊಳ್ಳುವುದು ಮತ್ತು ಸ್ವಯಂ ಪರಮಾತ್ಮನೇ ಅಧಿಪತಿಯಾದ ಕುಂಭಕ – ದೇಹದೊಳಕ್ಕೆ ಸ್ವೀಕರಿಸಿದ ವಾಯುವನ್ನು ಹಾಗೆಯೇ ಸಾಧ್ಯವಾದಷ್ಟು ಸಮಯ ತಡೆದು ಹಿಡಿಯಬೇಕು. ಹೀಗೆ ಧ್ಯಾನಿಸುತ್ತಾ ಮಾಡುವ ಪ್ರಾಣಾಯಾಮವನ್ನು ಸಗರ್ಭಪ್ರಾಣಾಯಾಮವೆನ್ನುವರು.

**ಸಂಕಲ್ಪ :** ಲೋಕದಲ್ಲಿ ಜರುಗುವ ಎಲ್ಲಾ ಕಾರ್ಯ ಕಲಾಪಗಳಿಗೆ ಒಂದು ಉದ್ದೇಶ ಇದ್ದೇ ಇರುತ್ತದೆ. ನಿರ್ದಿಷ್ಟ ಕರ್ಮವನ್ನು ಯಾವ



ಉದ್ದೇಶದಿಂದ ಮಾಡುತ್ತಿದ್ದೇವೆಂದು ತಿಳಿದುಬರುವುದು ಸಂಕಲ್ಪದಿಂದ. ಕರ್ಮಾಂಗಗಳಲ್ಲೆಲ್ಲಾ ಸಂಕಲ್ಪವು ಅತ್ಯವಶ್ಯಕ. ನಿತ್ಯಕರ್ಮವೂ ಇದಕ್ಕೆ ಹೊರತಲ್ಲ. ಎಲ್ಲಾ ಬಯಕೆಗಳಿಗೂ ಮೂಲವಾದದ್ದು ಸಂಕಲ್ಪ. ವಿಧಿವತ್ತಾಗಿ ಸಂಕಲ್ಪ ಮಾಡುವುದೆಂದರೆ ಶಪಥ ಗ್ರಹಣ ಮಾಡಿದಂತೆ. ತರುವಾಯ ಆ ಕಾರ್ಯವನ್ನು ಮಾಡಲು ಕರ್ತೃವು ಬದ್ಧನಾಗುತ್ತಾನೆ. ಸಂಕಲ್ಪ ಕಾರ್ಯದಲ್ಲಿ ಜಲೋಸ್ಪರ್ಶವಿದೆ. ಜಲವು ವರುಣ ದೇವರ ಆವಾಸ ಸ್ಥಾನ. ವೇದಗಳ ಪ್ರಕಾರ ವರುಣನು ಋತದ ಅಧಿದೇವತೆ. ಅಂದರೆ ವಚನಭ್ರಷ್ಟರಿಗೆ ಶಿಕ್ಷೆ ವಿಧಿಸುವವ. ಹೀಗಾಗಿ, ವಿಧಿವತ್ತಾಗಿ ಸಂಕಲ್ಪವನ್ನು ಮಾಡಿ ನಮಗೆ ನಾವೇ ಬದ್ಧತೆಗೊಳಪಡುವುದಕ್ಕೆ ಸಂಕಲ್ಪವು ಸುಲಭದ ದಾರಿ.

**ದೇಶ, ಕಾಲ ಸಂಕೀರ್ತನೆ :** ಕರ್ಮದ ಆರಂಭದಲ್ಲಿ ದೇಶ, ಕಾಲಗಳನ್ನು ಸ್ಮರಿಸಿಕೊಳ್ಳಬೇಕೆಂಬುದು ನಿಯಮ. ಈ ನಿಯಮದ ಪ್ರಕಾರ ಮನ್ವಂತರ, ಕಲ್ಪ, ಯುಗ, ಸಂವತ್ಸರ, ಮಾಸ, ತಿಥಿ, ವಾರ, ನಕ್ಷತ್ರಗಳ ಜೊತೆಗೆ ದ್ವೀಪ, ಖಂಡ, ಮಂಡಲ ಮತ್ತು ದೇಶಗಳನ್ನು ಉಲ್ಲೇಖಿಸಲಾಗುತ್ತದೆ. ಈ ನಿಯಮದ ಉದ್ದೇಶ ವರ್ತಮಾನವನ್ನು ನೆನಪಿಸಿಕೊಂಡು ಭೂತಕಾಲದೊಡನೆ ಸಂಬಂಧವನ್ನು ಬೆಸೆದು ನಮ್ಮ ಭವ್ಯವಾದ ಪರಂಪರೆಯನ್ನು ಜ್ಞಾಪಿಸಿಕೊಳ್ಳುತ್ತಾ ಆ ಪರಂಪರೆಯ ಉತ್ತರಾಧಿಕಾರಿಗಳು ನಾವು ಎಂಬ ಹೆಮ್ಮೆಯನ್ನು ಸಾದರಪಡಿಸುವುದಾಗಿದೆ. ಜೊತೆಗೆ ವಿಸ್ತಾರವಾದ ಭೂಖಂಡದ ಸಾಂಸ್ಕೃತಿಕ ಏಕತೆಯೊಂದಿಗೆ ಭೌಗೋಳಿಕ ಏಕತೆಯನ್ನೂ ಸಾರುತ್ತಾ ನಮ್ಮತನದ ನೆನಪನ್ನು ಸದಾ ಜಾಗೃತವಾಗಿರಿಸಬೇಕೆಂಬುದೇ ಇದರ ಆಶಯ.

**ವೈಶ್ವದೇವ :** ಈ ವಿಧಿಯ ಮಹತ್ವ ಅಗ್ನಿಗೆ ತುಪ್ಪದ ಆಹುತಿಗಳನ್ನು ನೀಡುವುದು ಮತ್ತು ಅನ್ನದ ಬಲಿಯನ್ನು ಅರ್ಪಿಸುವುದು. ಅನ್ನವಸ್ತ್ರಾದಿಗಳನ್ನು ಅಗ್ನಿಗೆ ಅರ್ಪಿಸುವ ಹಿನ್ನೆಲೆಯೆಂದರೆ, ಅಗ್ನಿಯನ್ನು ಹೊರತು ಪಡಿಸಿ ಇತರ ಯಾವುದೇ ರೀತಿಯ ದೇವರ ಪ್ರತೀಕಗಳಿಗೆ ಸಮರ್ಪಿಸುವ ನೈವೇದ್ಯವು ಮತ್ತೆ ನಮ್ಮ ವಶವಾಗುವುವು. ಆದರೆ, ಅಗ್ನಿರೂಪದ ದೇವರಿಗೆ ಅರ್ಪಿಸಿದ ನೈವೇದ್ಯ ಮಾತ್ರ ಸಂಪೂರ್ಣ ಭಸ್ಮ! ಹಾಗಾಗಿ, ಮಾನಸಿಕವಾಗಿ, ನಾವು ನೈವೇದ್ಯವನ್ನು ದೇವರಿಗೆ ಸಮರ್ಪಿಸಿದ್ದನ್ನು ಆತನು ಸ್ವೀಕರಿಸಿದನೆಂಬ ತೃಪ್ತಿಯ ಭಾವ. ಇನ್ನು ಯಜ್ಞ, ಯಾಗಾದಿ, ಹೋಮ ಹವನಗಳಿಂದಾಗುವ ಉಪಯೋಗವೆಂದರೆ ಆಮ್ಲಜನಕದ ವರ್ಧನೆಯಿಂದ ಭೂಮಿಯ ಮೇಲಿನ

ವಾತಾವರಣವನ್ನು ರಕ್ಷಿಸುತ್ತಿರುವ "ಓಝೋನ್" ಪದರ ಹಾಗೂ ಪರಿಸರದ ರಕ್ಷಣೆ.

**ಗಣಪತಿ ಪೂಜೆ :** ಆರಂಭಿಸಿದ ಯಾವುದೇ ಕಾರ್ಯವು ಸುಸೂತ್ರವಾಗಿ ನಿರ್ವಿಘ್ನದಿಂದ ಸಮಾಪ್ತವಾಗಲೆಂಬ ಹೆಬ್ಬಯಕೆ.

**ಪುಣ್ಯಾಃ :** ಪುಣ್ಯಾಃ ಅಥವಾ ಸ್ವಸ್ತಿವಾಚನ ನಾಂದಿಯ ಪೂರ್ವದಲ್ಲಿ ವಿಹಿತವಾಗಿದೆ. ಪುಣ್ಯಾಃವೆಂದರೆ ಶುಭದಿನ ಎಂದರ್ಥ. ಸ್ವಸ್ತಿವಾಚನವೆಂದರೆ "ಸ್ವಸ್ತಿ" ಎಂದು ಹೇಳಿಸುವುದು. ವಾಸ್ತವವಾಗಿ ಈ ವಿಧಿಯನ್ನು ವಾತಾವರಣದ ಶುದ್ಧಿ ಮತ್ತು ಸಿದ್ಧಿಗಳ ಸಲುವಾಗಿ ಆಚರಿಸುವಂಥದ್ದು. ಮಂತ್ರೋಚ್ಚಾರಣೆಯಿಂದ ಹುಟ್ಟಿದ ಧ್ವನಿ ತರಂಗಗಳು ವಾತಾವರಣವನ್ನು ಶುದ್ಧಿಗೊಳಿಸಿ ಕಾರ್ಯವು ಸಾಂಗವಾಗಿ ನೆರವೇರಲು ಸಹಕಾರಿಯಾಗಿದೆ.

**ನಾಂದಿ :** ನಾಂದಿಯ ಉದ್ದೇಶ ಪಿತೃದೇವತೆಗಳನ್ನು ತೃಪ್ತಿಪಡಿಸುವುದು. ನಾಂದಿಯನ್ನು ಶ್ರಾದ್ಧವೆಂದು ಕರೆಯಲಾಗಿದ್ದರೂ ಇಲ್ಲಿ ಪಿಂಡಪ್ರದಾನಾದಿಗಳಿಲ್ಲ. ಯಾವುದೇ ಸತ್ಕರ್ಮವನ್ನು ಮಾಡುವ ಮುನ್ನ ಹಿರಿಯರನ್ನು ಆದರಿಸಬೇಕು ಮತ್ತು ಅವರನ್ನು ತೃಪ್ತಿಪಡಿಸಿ ಅವರ ಪ್ರಸನ್ನತೆಯನ್ನು ಗಳಿಸಿಕೊಳ್ಳಬೇಕು. ಅಂತೆಯೇ ಹಿರಿಯರ ಆಶೀರ್ವಾದ, ಅನುಗ್ರಹಗಳಿದ್ದರೆ ಶುಭಕರ್ಮವು ಫಲದಾಯಕವಾಗುವುದೆಂಬ ಭಾವವಿದೆ ಈ ಸತ್ಪರಂಪರೆಯ ವಿಧಿಯಲ್ಲಿ.

**ಉದಕಶಾಂತಿ :** ಉದಕಶಾಂತಿಯ ಉದ್ದೇಶ ಅಮಂಗಲ ನಿವಾರಣೆ ಮತ್ತು ಸಮಸ್ತ ಸನ್ಮಂಗಳ ಪ್ರಾಪ್ತಿ. ನಂಬಿಕೆಯಂತೆ ದುಷ್ಟಶಕ್ತಿಗಳು ಸತ್ಕರ್ಮದ ಫಲವನ್ನಪಹರಿಸಲು ಆಸಕ್ತವಾಗಿರುವುದರಿಂದ ಅವುಗಳನ್ನು ನಿವಾರಿಸಲು ಮಂತ್ರಜಲವು ಅತ್ಯಂತ ಪ್ರಭಾವಶಾಲಿಯಾದದ್ದು. ಪ್ರತಿಸರಬಂಧವು ಉದಕಶಾಂತಿಯನ್ನು ಅನುಸರಿಸಿ ನಡೆಸುವ ಕ್ರಮ. ಕೈಗೆ ಕಂಕಣವನ್ನು ಕಟ್ಟಿಕೊಳ್ಳುವುದು ರಕ್ಷಣಾರ್ಥವೇ. ಕರ್ಮನಿರತರಾದವರನ್ನು ರೋಗಾಣುಗಳು ಸೋಕದಿರಲೆಂದು ಮತ್ತು ಅಸ್ವಾಸ್ಥ್ಯ ಪೀಡಿಸಬಾರದು ಎಂಬ ಆಶಯ.

**ಗ್ರಹಶಾಂತಿ :** ಗ್ರಹಗಳು ಮಾನವನ ದೇಹ ಹಾಗೂ ಮನಸ್ಸುಗಳ ಮೇಲೆ ಅಪಾರ ಪ್ರಭಾವವನ್ನು ಬೀರುತ್ತವೆ. ಉದಾಹರಣೆಗೆ ಸೂರ್ಯನಿಂದ ಆತ್ಮ, ಚಂದ್ರನಿಂದ ಮನಸ್ಸು, ಮಂಗಳನಿಂದ ರಕ್ತಸಂಚಾರ, ಬುಧನಿಂದ ಕಲ್ಪನಾಶಕ್ತಿ, ಗುರುವಿನಿಂದ ಜ್ಞಾನ, ಶುಕ್ರನಿಂದ ವೀರ್ಯ ಮತ್ತು ಶನಿಯಿಂದ ಸುಖ–ದುಃಖಗಳ ಅನುಭೂತಿಗಳುಂಟಾಗುತ್ತವೆ. ಗ್ರಹಶಾಂತಿಯು ಕೃತಜ್ಞತಾ



ಸಮರ್ಪಣೆಯ ದ್ಯೋತಕವಾಗಿರುವುದರ ಜೊತೆಗೆ ಅನಿಷ್ಟ ನಿವಾರಣೆ ಮತ್ತು ಇಷ್ಟಪ್ರಾಪ್ತಿಯ ಉದ್ದೇಶವನ್ನೂ ಹೊಂದಿದೆ.

ಒಟ್ಟಾರೆ ಯಾವುದೇ ಸಂಸ್ಕಾರಗಳಿಗೆ ತೊಡಗುವವರಿಗೆ ಆಧಿಭೌತಿಕ, ಆಧ್ಯಾತ್ಮಿಕ ಮತ್ತು ಆಧಿದೈವಿಕ ಪೀಡೆಗಳೊದಗಬಾರದೆಂದು ಕರ್ತನ ಸುತ್ತಾ ಅಭೇದ್ಯವಾದ ರಕ್ಷಣಾವ್ಯೂಹವನ್ನು ನಿರ್ಮಿಸುವುದೇ ಆಗಿದೆ. ಇಂತಹ ರಕ್ಷಣೆಯಲ್ಲಿ ನೆರವೇರಿದ ಕಾರ್ಯಗಳು ತೀವ್ರವಾದ ಫಲಕಾರಿಯಾಗಿರುತ್ತವೆ.

## 1. ಗರ್ಭಾದಾನ

ಈ ಶಬ್ದದ ಅರ್ಥವೆಂದರೆ, ತಾನು ಸ್ಥಾಪಿಸಿದ್ದನ್ನು ತಾನೇ ಪಡೆದು ಪೋಷಿಸಿ ಮತ್ತೆ ಸಮಾಜಕ್ಕೆ ಕೊಡುವ ಮತ್ತು ಜೀವನದಲ್ಲಿ ನಡೆಯುವ ಪಾಪ ಪುಣ್ಯಗಳಿಗೆ ಜಾಮೀನು ಆಗುವುದು. ಯುಕ್ತಕಾಲದಲ್ಲಿ, ಆರೋಗ್ಯವಂತರಾದ ವಿವಾಹಿತ ದಂಪತಿಗಳು ಶಾರೀರಿಕ ಹಾಗೂ ಮಾನಸಿಕ ಯೋಗ್ಯತೆಯನ್ನು ಹೊಂದಿದ್ದು ಜೊತೆಗೂಡಿ ವಂಶೋದ್ಧಾರಕ್ಕೆ ಬೇಕಾದ ಸಂತಾನೋತ್ಪತ್ತಿಯನ್ನು ಮಾಡುವ ಪವಿತ್ರ ಕರ್ತವ್ಯವಿದು. ಸಕಲ ರೀತಿಯಿಂದಲೂ ಶುದ್ಧರಾಗಿರುವ ನವದಂಪತಿಗಳಿಗೆ ಗರ್ಭಾದಾನ ಮುಹೂರ್ತದಲ್ಲಿ ಯಾವುದೇ ರೀತಿಯ ಮನದುಗುಡ, ಭಯ, ಕಾತುರ ಇರುವುದು ಸಹಜ. ಇಂತಹ ಸಂದರ್ಭದಲ್ಲಿ ಪರಸ್ಪರರು ಆತ್ಮೀಯತೆಯಿಂದ, ವಿಶ್ವಾಸದಿಂದ ಮತ್ತು ಒಮ್ಮನದಿಂದ ಬೆರೆಯಬೇಕು. ವಿವಾಹದ ಪ್ರಥಮ ರಾತ್ರಿಯೇ ಶ್ರೇಷ್ಠ, ಮಹೋನ್ನತ ಮತ್ತು ಪವಿತ್ರವೆಂದು ನಂಬಿ ಅನುಸರಿಸಬೇಕು. ಆ ಸಂದರ್ಭದಲ್ಲಿ ಹಿಂದಿನ ದುಷ್ಕ್ರಿಯೆಗಳನ್ನು ಜ್ಞಾಪಿಸಿಕೊಳ್ಳದೇ, ಪಡೆಯುತ್ತಿರುವುದೇ ಪರಮಾನ್ನ ಗತಿಸಿದ್ದು ಹಳಸಿದ ಅನ್ನ ಎಂಬ ಭಾವವಿರಿಸಿಕೊಂಡು ಸದಾ ಶುಭ ವಿಚಾರಗಳನ್ನೇ ಮೆಲುಕು ಹಾಕುತ್ತಿರಬೇಕು. ಸದ್ಗುಣಸಂಪನ್ನರಾದ ವಿಖ್ಯಾತ ಸಂತಾನಾಪೇಕ್ಷೆಯನ್ನು ಹೊಂದಿ ಸಮಾಗಮ ಮಾಡಿದರೆ ದಂಪತಿಗಳ ಮತ್ತು ಸಂತಾನದ ಜೀವನ ಸಾರ್ಥಕವಾದೀತು.

**ವಧುವರರು ಮಲಗುವ ಮನೆಯ ಶಾಸ್ತ್ರ:**

ಬೀಗರುಗಳ ಪೂರ್ವ ನಿರ್ಧಾರದಂತೆ, ಈ ಶಾಸ್ತ್ರವನ್ನು ವಧು ಅಥವಾ ವರನ ಸ್ವಗೃಹದಲ್ಲಿ ನೆರವೇರಿಸತಕ್ಕದ್ದು.

ವಧುವಿನ ಮನೆಯಲ್ಲಿ ನಡೆಸುವ ಈ ಶಾಸ್ತ್ರಕ್ಕೆ ವರನ ಮನೆಯವರು ಮುತ್ತೈದೆಯರೊಂದಿಗೆ ಒಂಭತ್ತು ತಟ್ಟೆಗಳಲ್ಲಿ ಹಣ್ಣು ಮತ್ತು ಸಿಹಿ ತಿಂಡಿಗಳನ್ನು

ಕೊಂಡೊಯ್ದು ವಧುವರರಿಗೆ ಆರತಿ ಮಾಡಿ ಆಶೀರ್ವಾದ ಮಾಡಿ ಬರಬೇಕು.

**ಮಲಗುವ ಮನೆಯ ಸಿದ್ಧತೆ :**

- ವಧು ವರರು ಮಲಗುವ ಮನೆಯ ಶಾಸ್ತ್ರವನ್ನು ನೆರವೇರಿಸಲು ಒಂದು ಕೋಣೆಯನ್ನು ಆಯ್ಕೆ ಮಾಡಬೇಕು.
- ನಂತರ ಆ ಕೋಣೆಯಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ತಲೆದಿಂಬುಗಳನ್ನು ಇರಿಸುವಂತೆ ಹೊಸ ಹಾಸಿಗೆಗಳನ್ನು ನೆಲದ ಅಥವಾ ಮಂಚದ ಮೇಲೆ ಹಾಸಿ ಅದರ ಮೇಲೆ ಹೊಸ ಹೊದಿಗೆಯನ್ನು ಹೊದಿಸಿ ಸಿದ್ಧಪಡಿಸಬೇಕು.
- ಐದು ತಾಂಬೂಲಗಳನ್ನು ಹಾಸಿಗೆಯ ನಾಲ್ಕೂ ಬದಿಗಳಲ್ಲಿ ಮತ್ತು ಹಾಸಿಗೆಯ ಮಧ್ಯ ಭಾಗದಲ್ಲಿ ಇರಿಸಬೇಕು.
- ಪ್ರತೀ ತಾಂಬೂಲದಲ್ಲಿ ವೀಳೆಯದೆಲೆ–2, ಅಡಿಕೆ –2 ಮತ್ತು ಒಂದು ಬಾಳೆಹಣ್ಣನ್ನು ಇಡಬೇಕು.
- ಒಂದು ತಟ್ಟೆಯಲ್ಲಿ ಪಂಚಫಲಗಳನ್ನು ಇರಿಸಬೇಕು (ತೆಂಗಿನ ಕಾಯಿ, ಸೇಬು, ಸಪೋಟ, 2 ಬಾಳೆಹಣ್ಣು, ಕಿತ್ತಳೆ ಹಣ್ಣು).
- ಹಾಸಿಗೆಯ ಮಧ್ಯದಲ್ಲಿ ಬಿಳಿಯ ಹೂವಿನ ಹಾರ ಮತ್ತು ಅಂಗುದಾರವನ್ನು ಸುತ್ತಿರುವ ಒಂದು ಸೌತೇಕಾಯಿಯನ್ನು ಇರಿಸಬೇಕು.
- ಕೋಣೆಯ ದೇವರ ಮೂಲೆಯಲ್ಲಿ ಮನೆದೇವರ ಒಂದು ಭಾವಚಿತ್ರ, ಎದುರಿಗೆ ಜ್ಯೋತಿಯೊಡನೆ ಬೆಳಗುತ್ತಿರುವ ಎರಡು ದೀಪಸ್ತಂಭಗಳೊಂದಿಗೆ ಪೂಜಾ ಸಾಮಗ್ರಿಗಳನ್ನಿರಿಸಬೇಕು.
- ಆಯ್ದ ಸ್ಥಳದಲ್ಲಿ ತರಹೇವಾರಿ ಸಿಹಿ ಮತ್ತು ಖಾರದ ತಿಂಡಿಗಳು ಜೊತೆಗೆ ವಿವಿಧ ಹಣ್ಣುಗಳು, ಒಂದು ಚೊಂಬಿನಲ್ಲಿ ನೀರು ಮತ್ತು ಒಂದು ಲೋಟದಲ್ಲಿ ಹಾಲನ್ನು ಇಡಬೇಕು.
- ಮನೆಯವರ ಶಕ್ತ್ಯಾನುಸಾರ ಮತ್ತು ಅಭಿಲಾಷೆಯ ಮೇರೆಗೆ ಕೋಣೆಯನ್ನು ಅಲಂಕರಿಸಬೇಕು

**ವಿಧಾನ :**

- ಮೊದಲು ಹಾಸಿಗೆ ಹಾಸಿದ ಮುತ್ತೈದೆಯು ದೇವರ ಭಾವಚಿತ್ರಕ್ಕೆ, ದೀಪಸ್ತಂಭಗಳಿಗೆ ಮತ್ತು ಹಾಸಿಗೆಗೆ, ಅರಿಶಿನ ಕುಂಕುಮ, ಹೂವನ್ನಿಟ್ಟು ಗಂಧದಕಡ್ಡಿಗಳನ್ನು ಬೆಳಗಿ ತೆಂಗಿನಕಾಯಿ ಒಡೆದು ತುಪ್ಪದ ಆರತಿ ಮಾಡಬೇಕು.



- ತದನಂತರ ನಿಗದಿಪಡಿಸಿದ ಮುಹೂರ್ತಕ್ಕೆ ಅನುಸಾರ ವಧುವರರನ್ನು ಕೋಣೆಯೊಳಕ್ಕೆ ಬರಮಾಡಿಕೊಂಡು ಹಾಸಿಗೆಯ ಮೇಲೆ ಕೂರಿಸಿ ಗಂಡು ಹೆಣ್ಣಿನ ಕೈಗಳಲ್ಲಿ ಹೂವಿನ ಹಾರಗಳನ್ನು ಕೊಟ್ಟು ಪರಸ್ಪರ ಬದಲಾಯಿಸಿಕೊಳ್ಳುವಂತೆ ತಿಳಿಸಬೇಕು.
- ಮೊದಲು ಮುತ್ತೈದೆಯು ವಧುವರರ ಹಣೆಗಳಿಗೆ ಕುಂಕುಮವನ್ನಿಟ್ಟು, ವಧುವಿನ ಮಡಿಲಿನಲ್ಲಿ ಪಂಚಫಲಗಳನ್ನು ಇಡಬೇಕು.
- ನಂತರ ಹಾಸಿಗೆಯ ದೇವಮೂಲೆಯಲ್ಲಿರುವ ತಾಂಬೂಲವನ್ನು ಆಕೆಯು ವಧುವರರಿಂದ ಪಡೆದು ಅಕ್ಷತೆ ಅವರ ತಲೆಮೇಲೆ ಹಾಕಿ ಆಶೀರ್ವಾದ ಮಾಡಬೇಕು.
- ಉಳಿದ ನಾಲ್ಕು ತಾಂಬೂಲಗಳನ್ನು ಮಿಕ್ಕ ನಾಲ್ಕು ಮುತ್ತೈದೆಯರು ಕ್ರಮವಾಗಿ ಬಂದು ವಧುವರರ ಹಣೆಗಳಿಗೆ ಕುಂಕುಮವನ್ನಿಟ್ಟು ಅವರಿಗೆ ಆಶೀರ್ವದಿಸಿ ಪಡೆಯತಕ್ಕದ್ದು.
- ನಂತರ, ಕೆಂಪುನೀರಿನ ಆರತಿಯನ್ನು ನೀಲಾಂಜನದೊಂದಿಗೆ ಮಾಡಿ ಆರತಿ ತಟ್ಟೆಯಲ್ಲಿ ತಾಂಬೂಲಸಹಿತ ದಕ್ಷಿಣೆಯನ್ನು ಪಡೆದು ಅಕ್ಷತೆಯನ್ನು ವಧುವರರ ಮೇಲೆ ಹಾಕಿ ಆಶೀರ್ವಾದ ಮಾಡಬೇಕು.
- ಮುತ್ತೈದೆಯರು ಕೋಣೆಯ ಬಾಗಿಲನ್ನು ಮುಚ್ಚಿಕೊಂಡು ಹೊರಡುವ ಮುನ್ನ, ನಿಗದಿತ ಮುಹೂರ್ತದೊಳಗೆ ದೇವರ ಪೂಜೆ ಮಾಡಬೇಕೆಂದು ವಧುವರರಿಗೆ ನೆನಪಿಸತಕ್ಕದ್ದು.
- ಕೋಣೆಯಿಂದ ಹೊರಕ್ಕೆ ಬಂದ ಮೇಲೆ ಆರತಿ ತಟ್ಟೆಯಲ್ಲಿರುವ ಕೆಂಪುನೀರನ್ನು ಮನೆಯ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿಯಬೇಕು.

***ಸೂಚನೆ :***

ವರನು ಮೊದಲನೆ ರಾತ್ರಿಯಲ್ಲಿ ದಕ್ಷಿಣೆ ಹಣವನ್ನು, ವಧುವಿನ ಮನೆಯಲ್ಲಿ ಮಲಗುವ ಹಾಸಿಗೆಯ ಕೆಳಗಡೆ ಇಡುವುದಲ್ಲದೇ ವಧುವಿನ ಸೆರಗಿನ ತುದಿಯಲ್ಲಿಟ್ಟು ಗಂಟು ಹಾಕಬೇಕು.

ಮೊದಲು ಹಾಸಿಗೆ ಹಾಸಿದ ಮುತ್ತೈದೆಯವರು ಮಾತ್ರ ಹಾಸಿಗೆಯ ಕೆಳಗೆ ಇರಿಸಿರುವ ದಕ್ಷಿಣೆಯನ್ನು ತೆಗೆದುಕೊಳ್ಳಲು ಅರ್ಹರು. ಈ ಶಾಸ್ತ್ರವನ್ನು ಮೂರು ದಿನಗಳವರೆಗೆ ಅನುಸರಿಸಬೇಕು.

ವಧುವಿನ ಗೃಹದಲ್ಲಿ ಮಲಗುವ ಶಾಸ್ತ್ರ ನೆರವೇರಿದ್ದರೆ, ಮುಂದೆ ವಧುವರರನ್ನು ವರನ ಮನೆಗೆ ತಲುಪಿಸಿದಾಗ, ವರನ ಮನೆಯಲ್ಲಿಯೂ ಸಹ ಮೂರು ದಿನಗಳು ಮಲಗುವ ಮನೆಯ ಶಾಸ್ತ್ರವನ್ನು ನೆರವೇರಿಸಬೇಕಲ್ಲದೇ ವರನು, ಇಲ್ಲಿಯೂ ಸಹ ಮೊದಲನೆಯ ರಾತ್ರಿ ಹಾಸಿಗೆಯ ಕೆಳಗಡೆ ದಕ್ಷಿಣೆಯನ್ನಿಡಬೇಕು ಮತ್ತು ಇಲ್ಲೂ ಮೊದಲು ಹಾಸಿಗೆ ಹಾಸಿದ ಮುತ್ತೈದೆಯವರು ಮಾತ್ರ ಹಾಸಿಗೆಯ ಕೆಳಗೆ ಇರಿಸಿರುವ ದಕ್ಷಿಣೆಯನ್ನು ತೆಗೆದುಕೊಳ್ಳಲು ಅರ್ಹರು.

ವರನ ಮನೆಯಲ್ಲಿ ಮಲಗುವ ಶಾಸ್ತ್ರ ನೆರವೇರುತ್ತಿದ್ದರೆ, ಮದುವೆಯಾದ ಮೂರರಿಂದ ಐದು ದಿನಗಳು ಕಳೆಯುವುದರೊಳಗೆ ವಧು ವರರನ್ನು ಒಂದು ದಿನ ಬೆಳಿಗ್ಗೆಯಿಂದ ಸಂಜೆಯವರೆಗೆ ವಧುವಿನ ತವರು ಮನೆಯಲ್ಲಿರಲು ಕಳುಹಿಸಿಕೊಡಬೇಕು. ಅಂದು ವಧುವಿನ ತವರು ಮನೆಯವರು ಎರಡೂ ಕಡೆಯ ಬಂಧು ಬಳಗಕ್ಕೆ ಊಟಕ್ಕೆ ಆಹ್ವಾನ ನೀಡಿ ಸಹಭೋಜನ ಮಾಡಿ ಆನಂದಿಸಬೇಕು. ಊಟ ಮುಗಿದ ಮೇಲೆ ವಧುವಿನ ತವರಿನ ಮನೆಯವರು ವಧುವಿನ ಮಡಿಲನ್ನು ಕಡ್ಲೆಪಪ್ಪು ಮತ್ತು ಬೆಲ್ಲದ ಗಂಟಿನೊಂದಿಗೆ ತುಂಬಿ ವಧು ವರರನ್ನು ವರನ ಮನೆಗೆ ಕಳುಹಿಸತಕ್ಕದ್ದು.

## 2. ಪುಂಸವನ

ಸ್ತ್ರೀಯು ಗರ್ಭ ಧರಿಸಿದ ಮೂರನೇ ಮಾಸದಲ್ಲಿ ಪುಂಸವನ ಶಾಸ್ತ್ರವನ್ನು ಆಚರಿಸುವ ಉದ್ದೇಶವೇನೆಂದರೆ ಗರ್ಭಸ್ಥ ವೀರ್ಯವು ಶೋಣಿತದೊಡನೆ ಕೂಡಿ ಘನರೂಪ ತಾಳಿ ಇಂದ್ರಿಯಗಳ ಉತ್ಪತ್ತಿಯ ಸಮಯವಾದ್ದರಿಂದ, ಪುತ್ರನ ಫಲಾಪೇಕ್ಷೆಯೆ ಮೂಲ ಉದ್ದೇಶವಾದರೂ, ಈ ಸಮಯದಲ್ಲಿ ಗರ್ಭಸ್ಥ ಶಿಶುವು ತನ್ನ ಹಿಂದಿನ ಕರ್ಮ ವಾಸನಾದಿಗಳನ್ನು ನೆನೆಯುವುದರಿಂದ, ಗರ್ಭವು ಸ್ಥಿರವೂ, ಪಾಪರಹಿತವೂ ಆಗಿರಬೇಕೆಂಬ ಸದಾಶಯವೇ ಈ ವಿಧಿಯ ಆಚರಣೆಯ ಗುರಿ. ಜೊತೆಗೆ ಗರ್ಭ ಧರಿಸಿದ ನಾರಿಯ ಸಹಜ ನಿರೀಕ್ಷೆಯಂತೆ ಗಂಡ ಮತ್ತು ಪರಿವಾರದವರ ಹಾರೈಕೆ ಮತ್ತು ಗರ್ಭಿಣಿಯ ಆರೈಕೆಗಳನ್ನು ಪೂರೈಸುವುದೂ ಆಗಿದೆ. ಇಂಥ ಸಮಯದಲ್ಲಿ ಗರ್ಭಿಣಿಯು ಯಾರಿಂದಾಗಲೀ, ಯಾವುದೇ ಮಾಧ್ಯಮಗಳಿಂದಾಗಲಿ ಅಸಂಬದ್ಧ, ಮನೋವಿಕಾರ ವಿಚಾರಗಳಿಂದ ದೂರವಿದ್ದು ಉತ್ತಮ ಸಾಹಿತ್ಯ, ಸಂಗೀತ ಮತ್ತು ಚರಿತ್ರಾದಿಗಳನ್ನು ಗ್ರಹಿಸಿ ಮನನ ಮಾಡಿಕೊಳ್ಳಬೇಕು.



**ವಿಧಾನ:**

ಈ ಸಂಸ್ಕಾರವು ಗಂಡನ ಮನೆಯಲ್ಲಿ ನಡೆಸುವ ಅತ್ಯಂತ ಸರಳ ಮತ್ತು ಸಂಕ್ಷಿಪ್ತವಾದ ಕಾರ್ಯ. ನಾಂದೀಶಾಸ್ತ್ರವನ್ನು ಆಚರಿಸಿದ ಮೇಲೆ ಗರ್ಭಸ್ಥ ಶಿಶುವಿಗೆ ಪುರುಷತ್ವ, ದ್ವಿಜತ್ವ ಮತ್ತು ಜ್ಞಾನೋದಯದ ಸಿದ್ಧಿಗೆ ಸಂಕಲ್ಪವನ್ನು ಮಾಡಿ ಪುಂಸವನ ಹೋಮವನ್ನು ಪೂರೈಸಬೇಕು. ಆನಂತರ ಆಜ್ಯಶೇಷವನ್ನು ಪತ್ನಿಗೆ ಪ್ರಾಶನ ಮಾಡಿಸಬೇಕು. ತದನಂತರ ಗರ್ಭಿಣಿಯು ಪ್ರಸವ ಪರ್ಯಂತ ತುಪ್ಪ ಮಿಶ್ರಿತ ಅನ್ನವನ್ನು ಹೆಚ್ಚು ಸೇವಿಸುವುದಲ್ಲದೇ ಯಥಾಶಕ್ತಿ ಸದಾ ಚಟುವಟಿಕೆಯಿಂದ ಇರುವುದು ಸುಖಪ್ರಸವಕ್ಕೆ ಪೂರಕ.

## 3. ಸೀಮಂತೋನ್ನಯನ (ಹೂ ಮುಡಿಸುವ ಶಾಸ್ತ್ರ)

ಗರ್ಭಿಣಿಯ ಮನಸ್ಸು ಸಂತುಷ್ಟವೂ, ಆರೋಗ್ಯವೂ ಮತ್ತು ಗರ್ಭವು ಯಾವುದೇ ರೋಗಗಳಿಂದ ಮುಕ್ತವಾಗಿ ಸ್ಥಿರವೂ, ಉತ್ಕೃಷ್ಟವೂ ಆಗಿ ದಿನೇ ದಿನೇ ವೃದ್ಧಿಯಾಗಲೆಂದು ಬಯಸಿ ಆಚರಿಸುವ ಕಾರ್ಯವಿದು. ಇದೇ "ಹೂ ಮುಡಿಸುವ ಶಾಸ್ತ್ರ"ವೆಂದೂ ಪ್ರಚಲಿತವಾಗಿದೆ. ಗರ್ಭಧಾರಣೆಯಾದ ನಾಲ್ಕು, ಆರು ಅಥವಾ ಎಂಟನೇ ಮಾಸದಲ್ಲಿ ಆಚರಿಸುವ ಈ ಶುಭ ಕಾರ್ಯವು ದಂಪತಿಗಳಲ್ಲಿ, ಮುಖ್ಯವಾಗಿ ಗರ್ಭಿಣಿಯಲ್ಲಿನ ಮನಸ್ಸಿನಲ್ಲಿ ಅವಿಚ್ಛಿನ್ನವಾಗಿ ಬರುವ ನಕಾರಾತ್ಮಕ ಭಾವನೆಗಳನ್ನು ನಿವಾರಿಸಿ, ಉದಾರಿಗಳೂ, ದಾನಶೀಲರೂ, ವೀರ್ಯವಂತರೂ ಮತ್ತು ಪೂರ್ಣ ಆಯಸ್ಸು ಉಳ್ಳವರೂ ಆದ ಸಂತಾನವನ್ನು ಪಡೆಯುವುದೇ ಈ ಸಂಸ್ಕಾರದ ಮೂಲ ಉದ್ದೇಶ. ಪಿಂಡರೂಪದಲ್ಲಿದ್ದ ಶಿಶುವಿನ ಅಂಗಾಂಗಗಳು ಪ್ರಕಟಗೊಂಡು ನಾಲ್ಕನೆಯ ತಿಂಗಳಿನ ಹೊತ್ತಿಗೆ ಮನಸ್ಸು ರೂಪುಗೊಳ್ಳಲು ಆರಂಭಿಸುತ್ತದೆ. ಐದನೆಯ ತಿಂಗಳಿನಲ್ಲಿ ಮನಸ್ಸು ಪ್ರಬುದ್ಧವಾಗುತ್ತದೆ. ಆರನೆಯ ತಿಂಗಳಿನಲ್ಲಿ ಬುದ್ಧಿಯ ಬೆಳವಣಿಗೆಯ ಕಾರ್ಯ ಆರಂಭವಾಗುತ್ತದೆ. ಹೀಗೆ ವೃದ್ಧಿಸುತ್ತಿರುವ ಶಿಶುವನ್ನು ಗರ್ಭದಲ್ಲಿ ಬಚ್ಚಿಟ್ಟುಕೊಂಡ ಮಗುವಿನ ತಾಯಿಗೆ ತನ್ನ ತಾಯ್ತನದ ಹಿರಿಮೆ ಅರಿವಾಗಬೇಕಾದದ್ದು ಅತ್ಯವಶ್ಯಕ. ಆಕೆಯ ಮನಸ್ಸು ಸದಾ ಕಾಲ ಪ್ರಸನ್ನವಾಗಿರಬೇಕು, ಹೃದಯ ಹಿಗ್ಗಿನಿಂದ ತುಂಬಿರಬೇಕು. ಹಿರಿಯರ ಹರಸುವಿಕೆಯಿಂದ ಪ್ರಾಣಶಕ್ತಿಯ ಪ್ರವಾಹವು ಹರಿದುಬಂದು ಮಗುವಿನ ರಕ್ಷಣೆಗೆ ಅಭೇದ್ಯ ಕವಚವಾಗಿರಬೇಕು. ಪುಷ್ಕಳವಾದ ಘೃತಮಿಶ್ರಿತ ಅನ್ನ ಮತ್ತು ರುಚಿಕರವಾದ ಖಾದ್ಯ, ಪೇಯಗಳಿಂದ ಇಂದ್ರಿಯಗಳು ತೃಪ್ತವಾಗಿ

ಆರೋಗ್ಯವು ವರ್ಧಿಸಿ ಗರ್ಭಸ್ಥ ಶಿಶುವು ಸ್ವಸ್ಥವಾದ ದೇಹ ಮತ್ತು ಮನಸ್ಸುಗಳನ್ನು ಪಡೆದುಕೊಂಡು ಭೂಮಿಗೆ ಬರಲಿ ಎನ್ನುವ ಮಹದಭಿಪ್ರಾಯ ಈ ಸಂಸ್ಕಾರದ ಹಿನ್ನೆಲೆಯಲ್ಲಿದೆ.

ರೂಢಿಯಂತೆ, ಗಂಡನ ಮನೆಯಲ್ಲಿ ನೆರವೇರಿಸುವ ಈ ಶಾಸ್ತ್ರಕ್ಕೆ ಗರ್ಭಿಣಿಯ ತವರು ಮನೆಯವರು ಕಡ್ಲೆ ಬೆಲ್ಲದ ಗಂಟಿನ ಸಾಮಗ್ರಿಯೊಂದಿಗೆ ಮಗಳಿಗೋಸ್ಕರ ಒಂದು ಹಸಿರು ಬಣ್ಣದ ರೇಷ್ಮೆಸೀರೆ, ಹಸಿರು ಬಣ್ಣದ ರವಿಕೆ ಮತ್ತು ಎರಡು ಡಝನ್ ಹಸಿರು ಬಣ್ಣದ ಗಾಜಿನ ಬಳೆಗಳ ಜೊತೆಗೆ ತವರಿನ ಮನೆಯವರ ಸ್ಥಿತಿಗತಿಯ ಮೇರೆಗೆ ಒಡವೆಗಳನ್ನು ತರಬೇಕು.

**ತವರಿನ ಮನೆಯವರು ತರಬೇಕಾದ ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳು:**

- ಹುರಿಗಡಲೆ (ಕಡ್ಲೆ ಪಪ್ಪು) 2½ ಕೆ.ಜಿ., ಅರಿಶಿನ, ಕುಂಕುಮ – ತಲಾ ಎರಡು ಪೊಟ್ಟಣಗಳು, ತಳದ ಕೊಬ್ಬರಿ ಬಟ್ಟಲು – 2, ವೀಳೆಯದೆಲೆ – 11, ಅಡಿಕೆ – 100 ಗ್ರಾಂ, ಬಿಳಿ ಬಣ್ಣದ ಕಟ್ಟಿದ ಹೂವು – 1 ಮೊಳ, ಬಾಳೆಹಣ್ಣು – 11, ಖರ್ಜೂರ 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು (ಕವಲಿರುವುದು) – 5, ಹಸಿರು ಬಣ್ಣದ ರವಿಕೆ ಬಟ್ಟೆ – 1 ಮತ್ತು ಈ ಸಾಮಗ್ರಿಗಳನ್ನು ಕಟ್ಟಲು 1½ ಮೀಟರ್ ಉದ್ದದ ಬಿಳಿ ಬಟ್ಟೆ ಮತ್ತು ಅವುಗಳನ್ನೆಲ್ಲ ಸುತ್ತಿ ಗಂಟು ಹಾಕಲು ಬಿಳಿ ದಾರ.

**ಸಿದ್ಧತೆ:**

ಮುಹೂರ್ತ ನಿಗದಿಪಡಿಸಿದ ಶುಭದಿನದಂದು ನೆರವೇರಿಸುವ ಸೀಮಂತೋತ್ಸವ ಶಾಸ್ತ್ರಕ್ಕೆ ಗಂಡನ ಮನೆಯವರು ಮಾಡಿಕೊಳ್ಳಬೇಕಾದ ಸಿದ್ಧತೆಯೆಂದರೆ:

- ಮನೆಯನ್ನು ಸಂಪೂರ್ಣ ಶುಚಿಗೊಳಿಸಿ ಮಾವಿನ ತಳಿರು ತೋರಣ ಹಾಗೂ ಹೂಗಳಿಂದ ಅಲಂಕರಿಸಬೇಕು
- ಒಂದು ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು, ಬಿಳಿಹೂವಿನ ಹಾರ ಮತ್ತು ಬಿಡಿ ಹೂವುಗಳನ್ನು ಇಡಬೇಕು.
- ಒಂದು ತಟ್ಟೆಯಲ್ಲಿ ಸಾಕಷ್ಟು ವೀಳೆಯದೆಲೆ ಮತ್ತು ಅಡಿಕೆಗಳು – ತಾಂಬೂಲಕ್ಕೆಂದು
- ಒಂದು ತಟ್ಟೆಯಲ್ಲಿ ಗರ್ಭಿಣಿಯ ತವರಿನವರು ತಂದಿರುವ ಕಡ್ಲೆ ಬೆಲ್ಲದ ಗಂಟಿನ ಸಾಮಗ್ರಿಗಳು



- 6 ತಟ್ಟೆಗಳಲ್ಲಿ 6 ತರಹದ ಸಿಹಿತಿಂಡಿಗಳು
- 6 ತಟ್ಟೆಗಳಲ್ಲಿ 6 ತರಹದ ಖಾರದ ತಿನಿಸುಗಳು
- 6 ತಟ್ಟೆಗಳಲ್ಲಿ 6 ತರಹದ ಹಣ್ಣುಗಳು
- ಒಂದು ಲೋಟದಲ್ಲಿ ನೀರು
- ಒಂದು ತಟ್ಟೆಯಲ್ಲಿ ಕೆಂಪುನೀರಿನ ಆರತಿ

**ಶಾಸ್ತ್ರದ ವಿಧಾನ:**

- ತವರು ಮನೆಯಿಂದ ಬಳುವಳಿಯಾಗಿ ಬಂದ ಸೀರೆ, ರವಿಕೆ ಮತ್ತು ಒಡವೆಗಳನ್ನು ಧರಿಸಿ ಅಲಂಕೃತಳಾಗಿರುವ ಗರ್ಭಿಣಿಯು ಪೂರ್ವ ಅಥವಾ ಉತ್ತರಾಭಿಮುಖವಾಗಿ ಹಾಕಿರುವ ಆಸನದ ಮೇಲೆ ಕುಳಿತುಕೊಳ್ಳಬೇಕು.
- ಮೇಲೆ ತಿಳಿಸಿದ ಎಲ್ಲಾ ಸಾಮಗ್ರಿಗಳಿರುವ 21 ತಟ್ಟೆಗಳನ್ನು ಆಕೆಯ ಮುಂದೆ ಇರಿಸಿರುವ ಒಂದು ವಿಶಾಲವಾದ ಮೇಜಿನ ಮೇಲೆ ಓರಣವಾಗಿ ಜೋಡಿಸಬೇಕು.
- ಮೇಜಿನ ಎರಡು ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ನಂತರ, ಐದು, ಒಂಭತ್ತು ಅಥವಾ ಹನ್ನೊಂದು ಮುತ್ತೈದೆಯರು ಕ್ರಮವಾಗಿ ಬಂದು, ಮೊದಲು ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.
- ನಂತರ ಗರ್ಭಿಣಿಯ ಕೆನ್ನೆ ಹಾಗೂ ಕೈಗಳಿಗೆ ಅರಿಶಿನವನ್ನು ಹಚ್ಚಿ, ಎರಡು ಬಾರಿ ಆಕೆಯ ಹಣೆಗೆ ಕುಂಕುಮವನ್ನಿಟ್ಟು ಮುಡಿಗೆ ಹೂವನ್ನು ಮುಡಿಸಬೇಕು.
- ಆಮೇಲೆ, ಆಕೆಯ ಎರಡೂ ಕೈಗಳಿಗೆ ಎರಡೆರಡು ಹಸಿರು ಬಳೆಗಳನ್ನು ತೊಡಿಸಿದ ನಂತರ ಆಕೆಯಿಂದ ತಾಂಬೂಲವನ್ನು ಸ್ವೀಕರಿಸಿ ಅಕ್ಷತೆಯ ಸಮೇತವಾದ ಆಶೀರ್ವಾದ ಮಾಡಬೇಕು. ಅಂದ ಹಾಗೆ ಮೊದಲನೆಯ ಮುತ್ತೈದೆಯು ಗರ್ಭಿಣಿಯ ಕೊರಳಿಗೆ ಬಿಳಿ ಹೂವಿನ ಹಾರವನ್ನು ಹಾಕಬೇಕು.
- ಮುಂದೆ ಆಕೆಯ ಮಡಿಲನ್ನು ಗಂಟಿನ ಸಾಮಗ್ರಿಗಳೊಂದಿಗೆ ತುಂಬಿಸಬೇಕು.

- ನಂತರ, ಮೂವರು ಮುತ್ತೈದೆಯರು ಕೆಂಪುನೀರಿನ ಆರತಿಯನ್ನು ಆರತಿ ಹಾಡು ಹೇಳುತ್ತಾ ಮಾಡಿ, ಆಕೆಯ ಹಣೆಗೆ ತಿಲಕವನ್ನಿಡಬೇಕು.
- ಆರತಿ ಬೆಳಗಿದ ಕೆಂಪು ನೀರನ್ನು ಮನೆಯ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿಯಬೇಕು.

ತರುವಾಯ, ಕಾರ್ಯಕ್ರಮಕ್ಕೆ ಆಗಮಿಸಿ ಶುಭ ಕೋರಿದ ಬಂಧು ಮಿತ್ರರಿಗೆ ಹಬ್ಬದಡುಗೆಯನ್ನು ಬಡಿಸಿ ಅವರೊಂದಿಗೆ ಸಹಭೋಜನ ಮಾಡಿ ಫಲತಾಂಬೂಲವನ್ನು ನೀಡಿ ಆನಂದಿಸುವುದು.

**ಕಡ್ಲೆಬೆಲ್ಲದ ಗಂಟನ್ನು ಕಟ್ಟುವ ವಿಧಾನ:**

- ಗಂಟು ಕಟ್ಟಲು ತಂದಿರುವ ಎಲ್ಲಾ ಸಾಮಗ್ರಿಗಳನ್ನು ಒಂದು ಬೇಸಿನ್ನಲ್ಲಿ ಇಟ್ಟುಕೊಳ್ಳಬೇಕು.
- ಆಸನದಲ್ಲಿ ಕುಳಿತಿರುವ ಗರ್ಭಿಣಿಯ ಮುಂದೆ ಸಾಕಷ್ಟು ಜಾಗ ಮಾಡಿಕೊಂಡು ಅಲ್ಲಿ ಮತ್ತೊಂದು ಮೇಜನ್ನಿರಿಸಿ ಬಿಳೀ ಬಟ್ಟೆಯನ್ನು ಆಕೆಯ ತೊಡೆಗಳನ್ನು ಸಂಪೂರ್ಣ ಆವರಿಸುವಂತೆ ಹರಡಿ ಉಳಿದ ಬಿಳಿ ಬಟ್ಟೆಯನ್ನು ಮೇಜಿನ ಮೇಲೆ ಹರಡಬೇಕು.
- ನಂತರ ಕ್ರಮವಾಗಿ,
- ಅರಿಶಿನ ಕುಂಕುಮದ ಪೊಟ್ಟಣಗಳನ್ನು ಆಕೆಯ ತೊಡೆಗಳ ಮೇಲಿರುವಂತೆ ಇರಿಸಬೇಕು.
- ವೀಳೆಯದೆಲೆ, ಅಡಿಕೆ ಮತ್ತು ಬಾಳೆಹಣ್ಣುಗಳನ್ನಿಡಬೇಕು.
- ಅರಿಶಿನದ ಕೊಂಬು, ಬೆಲ್ಲದ ಉಂಡೆಗಳು, ಖರ್ಜೂರ ಮತ್ತು ಕೊಬ್ಬರಿ ಬಟ್ಟಲುಗಳನ್ನಿಡಬೇಕು.
- ಹಸಿರು ಬಣ್ಣದ ರವಿಕೆ ಬಟ್ಟೆಯನ್ನಿಡಬೇಕು.
- ಎರಡು ಹಸ್ತಗಳನ್ನು ಸೇರಿಸಿ ಬೊಗಸೆ ಮಾಡಿಕೊಂಡು ಬೇಸಿನ್ನಲ್ಲಿರುವ ಕಡ್ಲೆಪಪ್ಪನ್ನು ಬೊಗಸೆಯಿಂದ ಮೂರು ಬಾರಿ ಮಡಿಲಿಗೆ ಹಾಕಬೇಕು.
- ನಂತರ, ಉಳಿದ ಎಲ್ಲಾ ಕಡ್ಲೆಪಪ್ಪನ್ನು ಮಡಿಲಿಗೆ ಸುರಿಯಬೇಕು.
- ಮುಂದೆ ಮೊದಲನೆ ಬಾರಿ ಎಡಗೈಯಲ್ಲಿ ಬೇಸಿನ್ ಹಿಡಿದುಕೊಂಡು ಬಲಗೈನಿಂದ ಗಂಟಿನಲ್ಲಿರುವ ಕಡ್ಲೆಪಪ್ಪಿನಲ್ಲಿ ಕೆಲವು ಕಾಳುಗಳನ್ನು ಮೂರು ಬಾರಿ ತೆಗೆದು ಬೇಸಿನ್ಗೆ ಹಾಕಿಕೊಳ್ಳಬೇಕು.
- ಬೇಸಿನ್ನಲ್ಲಿರುವ ಎಲ್ಲಾ ಕಡ್ಲೆಪಪ್ಪನ್ನು ಮಡಿಲಿಗೆ ಸುರಿಯಬೇಕು.



- ಎರಡನೇ ಬಾರಿ ಎಡಗೈಯಲ್ಲಿ ಬೇಸಿನ್ ಹಿಡಿದುಕೊಂಡು ಬಲಗೈನಿಂದ ಗಂಟಿನಲ್ಲಿರುವ ಕಡ್ಲೆಪಪ್ಪಿನಲ್ಲಿ ಕೆಲವು ಕಾಳುಗಳನ್ನು ಮೂರು ಬಾರಿ ತೆಗೆದು ಬೇಸಿನ್ಗೆ ಹಾಕಿಕೊಳ್ಳಬೇಕು.
- ಬೇಸಿನ್ನಲ್ಲಿರುವ ಎಲ್ಲಾ ಕಡ್ಲೆಪಪ್ಪನ್ನು ಮಡಿಲಿಗೆ ಸುರಿಯಬೇಕು.
- ಕಡೆಗೆ ಮೂರನೇ ಬಾರಿ ಎಡಗೈಯಲ್ಲಿ ಬೇಸಿನ್ ಹಿಡಿದುಕೊಂಡು ಬಲಗೈನಿಂದ ಗಂಟಿನಲ್ಲಿರುವ ಕಡ್ಲೆಪಪ್ಪಿನಲ್ಲಿ ಕೆಲವು ಕಾಳುಗಳನ್ನು ಮೂರು ಬಾರಿ ತೆಗೆದು ಬೇಸಿನ್ಗೆ ಹಾಕಿಕೊಂಡು ಅದನ್ನು ಮನೆಯ ದೇವರ ಕೋಣೆಯಲ್ಲಿ ಇರಿಸಬೇಕು. ಮುಂದೆ ಆ ಕಡ್ಲೆಪಪ್ಪನ್ನು ಅಡುಗೆಯಲ್ಲಿ ಬಳಸಿಕೊಳ್ಳಬೇಕು.
- ಆಮೇಲೆ, ಗರ್ಭಿಣಿಯ ಮಡಿಲಿನಲ್ಲಿರುವ ಎಲ್ಲಾ ಗಂಟಿನ ಸಾಮಗ್ರಿಗಳನ್ನು ಒಪ್ಪವಾಗಿ ಜೋಡಿಸಿ ಬಿಳಿಯ ಬಟ್ಟೆಯನ್ನು ಮುದುಡಿ ಗಂಟಿನಾಕಾರ ಮಾಡಿಕೊಂಡು ದಾರದ ಸಹಾಯದಿಂದ ಭದ್ರವಾಗಿ ಬಿಗಿದು ಕಟ್ಟಬೇಕು.

**ಗಂಟು ಕಟ್ಟುವಿಕೆಯ ಹಿನ್ನೆಲೆ:**

ಅಪರೂಪಕ್ಕೊಮ್ಮೆ ಜರಗುವ ಶುಭ ಕಾರ್ಯಗಳಲ್ಲಿ ಕೇಂದ್ರ ಬಿಂದುವಾದ ವ್ಯಕ್ತಿಯ ಅಥವಾ ವ್ಯಕ್ತಿಗಳ ಮನಸ್ಸನ್ನು ಮುದಗೊಳಿಸಿ ಅವರಲ್ಲಿ ಸಮೃದ್ಧಿಯ ಭಾವನೆಯು ಅರಳಲು ಪೂರಕವಾದ ಆಚರಣೆಯೇ ಗಂಟುಕಟ್ಟುವಿಕೆ ಅಥವಾ ಮಡಿಲು ತುಂಬುವ ಕಾರ್ಯಕ್ರಮದ ಮೂಲೋದ್ದೇಶ.

ಗಂಟು ಕಟ್ಟುವಿಕೆಯಲ್ಲಿ ಬಳಸುವ ವಸ್ತುಗಳನ್ನು ಗಮನಿಸಿದಾಗ ಕೆಲವು ಚೇತೋಹಾರಿಯಾದ ವಿಚಾರಗಳು ತಂತಾನೇ ತೆರೆದುಕೊಳ್ಳುತ್ತದೆ. ಉದಾಹರಣೆಗೆ ಅಕ್ಕಿ ಅಥವಾ ಕಡ್ಲೆಪಪ್ಪು ತೃಪ್ತಿಯನ್ನು ಬೆಲ್ಲವು ಜೀವನದಲ್ಲಿ ಹಾಸುಹೊಕ್ಕಾಗ ಬೇಕಾದ ಮಧುರವನ್ನು ವೀಳ್ಯದೆಲೆ ಮತ್ತು ಅಡಿಕೆಗಳು ಧನದ ವೃದ್ಧಿಯನ್ನು ಅರಿಶಿನ ಕುಂಕುಮ ಶುಭವನ್ನು, ಕೊಬ್ಬರಿ ಬಟ್ಟಲು ದೀರ್ಘ ಕಾಲದ ತಾಜಾತನದ ಸಂಕೇತವನ್ನು, ಹೂವು ಆಕರ್ಷಣೆ ಮತ್ತು ಪರಿಮಳವನ್ನು, ಹಣ್ಣುಗಳು ಪೂರ್ಣ ಜೀವನ ಸಫಲತೆಯನ್ನು, ಅರಿಶಿನದ ಕೊಂಬು ಆರೋಗ್ಯವೃದ್ಧಿ ಮತ್ತು ಸಂಪತ್ತಿನ ವೃದ್ಧಿಯನ್ನು ಬಿಂಬಿಸುತ್ತವೆ. ಮಡಿಲನ್ನು ತುಂಬಿಸಿಕೊಂಡ ವ್ಯಕ್ತಿ ಅಥವಾ, ವ್ಯಕ್ತಿಗಳಲ್ಲಿ ಸಮೃದ್ಧತೆಯ ಭಾವದೊಂದಿಗೆ ತನ್ಮೂಲಕ ತಾನೂ ಬದುಕಿ ಇತರರನ್ನೂ ಬದುಕಲು ಅವಕಾಶವನ್ನು ಕೊಡುವ ಉದಾತ್ತ ಮನೋಭಾವನೆಯ ವಿಕಾಸಕ್ಕೆ ಅಡಿಪಾಯವನ್ನು ಹಾಕಿದಂತಾಗುತ್ತದೆ.

***ಸೂಚನೆ :*** ಅಕ್ಕಿಯ ಸಮೇತವಾದ ಗಂಟನ್ನು ಕಟ್ಟಿಸಿಕೊಂಡ ವ್ಯಕ್ತಿಯು ತನ್ನ ಕುಟುಂಬದವತಿಯಿಂದ ಋಣ ಪರಿಹಾರಾರ್ಥ ಗಂಟು ಕಟ್ಟಿದ ಕುಟುಂಬಕ್ಕೆ ಸಕಾಲದಲ್ಲಿ ಆದರಾತಿಥ್ಯದೊಡನೆ ಭೋಜನ ವ್ಯವಸ್ಥೆ ಮಾಡಬೇಕು. ಕುಟುಂಬಗಳು ಒಬ್ಬರಿಗೊಬ್ಬರು ದೂರದ ಊರುಗಳಲ್ಲಿ ನೆಲೆಸುವಂಥ ಸಂದರ್ಭಕ್ಕೆ ಮನ್ನಣೆಯಿಟ್ಟು ಅಕ್ಕಿಯ ಬದಲಿಗೆ ಕಡ್ಲೆಪಪ್ಪು ಗಂಟನ್ನು ಕಟ್ಟುವುದು ವಾಡಿಕೆಯಾಗಿದೆ.

## 4. ಜಾತಕರ್ಮ (ಹುಟ್ಟನ್ನು ಕೊಂಡಾಡುವುದು)

ಶಿಶುವಿನ ಜನನವಾದ ಮೇಲೆ ನಡೆಸುವ ಮೊಟ್ಟ ಮೊದಲನೆಯ ಸಂಸ್ಕಾರ ಇದಾಗಿರುವುದರಿಂದ ಈ ಸಂಸ್ಕಾರಕ್ಕೆ ಹೆಚ್ಚಿನ ಮಹತ್ವವಿದೆ. ಪ್ರತಿಯೊಬ್ಬ ಮಾನವರು ಹುಟ್ಟುತ್ತಾ ದೇವಋಣ, ಋಷಿಋಣ ಹಾಗೂ ಪಿತೃಋಣಗಳೆಂಬ ಮೂರು ವಿಧವಾದ ಋಣಗಳನ್ನು ಹೊತ್ತುಕೊಂಡೇ ಈ ಭೂಮಿಗೆ ಬರುವುದು. ಯಜ್ಞ, ಯಾಗಾದಿಗಳನ್ನು ಆಚರಿಸುವುದರಿಂದ ದೇವಋಣವನ್ನು, ಅಧ್ಯಯನದ ಮೂಲಕ ಋಷಿಋಣವನ್ನು ಮತ್ತು ಸಂತಾನೋತ್ಪಾದನೆಯ ಮೂಲಕ ಪಿತೃಋಣವನ್ನು ತೀರಿಸಬೇಕೆನ್ನುವುದು ಶಾಸ್ತ್ರಗಳ ಸಾರ. ಈ ಸಂಸ್ಕಾರದ ಆಶಯವೆಂದರೆ ಶಿಶುವಿಗೆ ಜನನ ದೋಷದ ನಿವಾರಣೆಯ ಜೊತೆಗೆ ಆರೋಗ್ಯ ಮತ್ತು ಮೇಧಾ (ಬುದ್ಧಿ) ಶಕ್ತಿಯ ಬೆಳವಣಿಗೆ.

**ವಿಧಾನ:**

ಶಿಶುವು ಜನಿಸಿದ ಕೂಡಲೇ ಒಂದು ಹನಿ ಜೇನುತುಪ್ಪವನ್ನು ಶುದ್ಧ ತುಪ್ಪದೊಂದಿಗೆ ಬೆರೆಸಿ ಯಾವುದಾದರು ಆರೋಗ್ಯವರ್ಧಕ ಮಂತ್ರದೊಂದಿಗೆ ಮಗುವಿನ ನಾಲಿಗೆಯ ಮೇಲೆ ಸವರಬೇಕು. ಏಕೆಂದರೆ ತುಪ್ಪವು ಬಲವರ್ಧಕವಾಗಿದ್ದು ಜೇನುತುಪ್ಪವು ರಕ್ತಶುದ್ಧಿಗೆ ಸಹಕಾರಿಯಾಗಿದೆ. ನಂತರ ಮತ್ತಷ್ಟು ಜೇನುತುಪ್ಪವನ್ನು ಶುದ್ಧ ತುಪ್ಪದೊಂದಿಗೆ ಬೆರೆಸಿ, ಹಸುಳೆ ಕಂದನ ಜೀವನಾಧಾರದ ಕೇಂದ್ರಗಳೆನಿಸಿದ ತಾಯಿಯ ಎರಡೂ ಮೊಲೆ ತೊಟ್ಟುಗಳಿಗೆ ಸವರಿ, ಹಾಲು ಸಮೃದ್ಧವಾಗಿರಲಿ ಮತ್ತು ಹಿತದಾಯಕವಾಗಿರಲಿ ಎಂಬ ಹಾರೈಕೆಯೊಂದಿಗೆ ಮಗುವಿಗೆ ಹಾಲುಣಿಸಲು ಪ್ರಯತ್ನಿಸಬೇಕು ಬಲ ಮೊಲೆಯಿಂದ ಮೊದಲ್ಗೊಂಡು. ಹೀಗೆ ಮಾಡುವುದರಿಂದ ಎಳೆಯ ಕೂಸು ತನ್ನ ತಾಯಿಯ ಹಾಲನ್ನುಣ್ಣುತ್ತಾ ಸಂತೋಷಿಸುವುದಲ್ಲದೇ ತಾಯಿಗೆ ಅತ್ಯಂತ ಆನಂದದಿಂದ ತೃಪ್ತಿ



ಉಂಟಾಗುವುದು. ಜೊತೆಗೆ ತಾಯಿ ಮತ್ತು ಮಗುವಿನ ನಡುವೆ ಅವಿನಾಭಾವ ಆಕರ್ಷಣೆ ಮತ್ತು ಅನುರಾಗವು ಪುಟಿದೇಳಲು ಸಹಕಾರಿಯಾಗುವುದು. ನಮಗರಿವಿರುವಂತೆ, ಶಿಶುವಿನ ಬೆಳವಣಿಗೆಗೆ ತಾಯಿಯ ಎದೆಹಾಲು ಅತ್ಯಂತ ಶ್ರೇಷ್ಠ.

**ಪುರುಡು :**

ಮಗುವಿನ ಜನನವಾದ ಕುಟುಂಬದವರು ಮತ್ತು ಅವರ ದಾಯಾದಿಗಳು ಹತ್ತು ರಾತ್ರಿಗಳ ಸೂತಕಕ್ಕೆ ಒಳಗಾಗುವುದೇ ಅಲ್ಲದೇ ಬಾಣಂತಿಯು ಅಸ್ಪೃಶ್ಯಳೆನಿಸುವ ಹಿನ್ನೆಲೆಯನ್ನು ಗಮನಿಸಿದರೆ, ಮಗುವನ್ನು ಹಡೆದಾಗ ತಾಯಿಯ ಗರ್ಭಾಶಯದಲ್ಲಿ ಮಲವತ್ತು ಅಂಟಿಕೊಂಡ ಭಾಗದಿಂದ ಅದು ಬೇರ್ಪಟ್ಟು ವ್ರಣವಾಗುತ್ತದೆ. ರಕ್ತವಾಹಿನಿಗಳನ್ನು ಹೊಂದಿರುವ ಗರ್ಭಾಶಯವು ರಕ್ತದ ಮಡುವೇ ಆಗಿರುತ್ತದೆ. ಇಂತಹ ಸ್ಥಿತಿಯಲ್ಲಿ ಯಾವುದೇ ರೋಗಾಣುವಿನ ಸೋಂಕು ಉಂಟಾದಲ್ಲಿ ಅಪಾಯ ತಪ್ಪಿದಲ್ಲ. ಹಾಗಾಗಿ, ಜನನಾ ನಂತರ ತಾಯಿ ಮತ್ತು ಮಗುವು ಅತ್ಯಂತ ಸೂಕ್ಷ್ಮ ಸ್ಥಿತಿಯಲ್ಲಿರುವುದರಿಂದ, ಅವರನ್ನು ಜನಸಂಪರ್ಕದಿಂದ ದೂರವಿರಿಸಿದರೆ ಆರೋಗ್ಯದ ದೃಷ್ಟಿಯಿಂದ ಒಳಿತು ಎನ್ನುವ ವಾಸ್ತವತೆಯ ಅರಿವಾಗುವುದು. ಗರ್ಭಾಶಯದಲ್ಲಿ ಸೋಂಕೇನಾದರು ಉಂಟಾದರೆ ಐದರಿಂದ ಹತ್ತು ದಿನಗಳೊಳಗೆ ಅದರ ಪರಿಣಾಮ ಕಾಣಿಸಿಕೊಳ್ಳುವುದು ಸಹಜ. ಪರಿಣಾಮಗಳೇನು ಇಲ್ಲದಿದ್ದರೆ, ಹತ್ತು ದಿನಗಳು ಕಳೆಯುವಷ್ಟರಲ್ಲಿ ಗರ್ಭಾಶಯದಲ್ಲಿನ ವ್ರಣವು ಮಾಯುತ್ತಾ ಬಂದಿರುತ್ತದೆ. ಬಾಣಂತಿಯು ಸಹ ತಕ್ಕಮಟ್ಟಿಗೆ ಚೇತರಿಸಿಕೊಂಡಿರುತ್ತಾಳೆ. ಆಮೇಲೆ ರೋಗಾಣುಗಳ ಸೋಂಕಿನಿಂದ ಅಂಥ ಭಯವೇನೂ ಇಲ್ಲದ ಕಾರಣವೆಂದರೆ ಅವುಗಳೊಂದಿಗೆ ಹೋರಾಡಲು ಶರೀರದಲ್ಲಿನ ರಕ್ತವು ಸಜ್ಜಾಗಿರುತ್ತವೆ. ಜೊತೆಗೆ ನವಜಾತ ಶಿಶುವೂ ಇಲ್ಲಿನ ವಾತಾವರಣಕ್ಕೆ ತಕ್ಕಮಟ್ಟಿಗೆ ಹೊಂದಿಕೊಂಡಿರುತ್ತದೆ ಎಂಬುದು ಸೂತಕದ ಮತ್ತೊಂದು ಆಯಾಮದ ದೃಷ್ಟಿಕೋನ. ಸೂತಕದ ಸಂಕೇತವನ್ನು ಭಾವನಾತ್ಮಕ ದೃಷ್ಟಿಯಲ್ಲಿ ಗಮನಿಸಿದಾಗ ಕುಟುಂಬದವರು ಮತ್ತು ಅವರ ದಾಯಾದಿಗಳು ಎಷ್ಟೇ ದೂರದಲ್ಲಿದ್ದರೂ ಅನುಬಂಧ ಮತ್ತು ಬಾಂಧವ್ಯದ ಸೆಲೆ ಬತ್ತುವುದಿಲ್ಲ ಜೊತೆಗೆ ಜನನ ಶೌಚವು ಆತಂಕಸೂಚಕವೂ ಆಗಿರುತ್ತದೆ.

***ಸೂಚನೆ:*** ಶಿಶುವು ಜನಿಸುವಾಗ ಹೊಕ್ಕುಳ ಬಳ್ಳಿಯನ್ನು ಸುತ್ತಿ ಕೊಂಡಿದ್ದರೆ ಮಗುವಿನ ಸೋದರಮಾವನವರಿಗೆ ಅಶುಭ ಎಂಬ ನಂಬಿಕೆ ಇರುವುದರಿಂದ

ಮಗುವಿನ ನಾಮಕರಣ ಶಾಸ್ತ್ರ ಆಗುವವರೆಗೂ ಸೋದರಮಾವನವರು ಮಗುವಿನ ಮುಖವನ್ನು ನೇರವಾಗಿ ನೋಡಬಾರದು. ನಾಮಕರಣ ಶಾಸ್ತ್ರದ ದಿನ ಶಾಸ್ತ್ರ ಮುಗಿದ ಮೇಲೆ ಮಗುವಿನ ತಾಯಿಯ ತವರು ಮನೆಯಿಂದ ತಂದಿರುವ ಕೊಬ್ಬರಿ, ಬೆಳ್ಳಿ ಅಥವಾ ಪಂಚಲೋಹದ ಬಟ್ಟಲಿನಲ್ಲಿ ಎಳ್ಳಿನ ಎಣ್ಣೆಯನ್ನು ಸುರಿದು ಬಟ್ಟಲನ್ನು ಮನೆಯ ಮಹಾದ್ವಾರದ ಹೊಸ್ತಿಲಿನ ಮಧ್ಯದಲ್ಲಿ ಇಟ್ಟು ಹೊಸ್ತಿಲಿನ ಒಳಗೆ ತಾಯಿಯು ಮಗುವನ್ನು ಬೋರಲಾಗಿ ಹಿಡಿದುಕೊಂಡು ಮಗುವಿನ ಮುಖದ ಪ್ರತಿಬಿಂಬವು ಬಟ್ಟಲಿನಲ್ಲಿರುವ ಎಣ್ಣೆಯಲ್ಲಿ ಕಾಣುವಂತೆ ನಿಲ್ಲಬೇಕು. ನಂತರ ಮತ್ತೊಬ್ಬರು ತಾಯಿ ಮತ್ತು ಮಗುವಿನ ಮುಂದೆ ಬಟ್ಟೆಯ ಪರದೆಯನ್ನು ಹಿಡಿಯಬೇಕು. ಮುಂದೆ ಮಗುವಿನ ಸೋದರಮಾವನವರು ಹೊಸ್ತಿಲಿನ ಆಚೆ ಬದಿಯಲ್ಲಿ ನಿಂತು ಬಟ್ಟಲ್ಲಿನಲ್ಲಿರುವ ಎಣ್ಣೆಯಲ್ಲಿ ಕಾಣುತ್ತಿರುವ ಮಗುವಿನ ಮುಖದ ಪ್ರತಿಬಿಂಬವನ್ನು ವೀಕ್ಷಿಸಿದ ನಂತರ ನೇರವಾಗಿ ಮಗುವಿನ ಮುಖವನ್ನು ನೋಡಬೇಕು ನಂತರ, ಬಟ್ಟಲನ್ನು ಮಗುವಿಗೆ ಉಡುಗೊರೆಯಾಗಿ ಕೊಟ್ಟು ಅದರಲ್ಲಿರುವ ಎಣ್ಣೆಯನ್ನು ಸಮೀಪದ ಯಾವುದಾದರೂ ದೇವಸ್ಥಾನಕ್ಕೆ ಆರ್ಪಿಸಬೇಕು.

## 5. ನಾಮಕರಣ

ವ್ಯಕ್ತಿಯೊಬ್ಬರನ್ನು ನಿರ್ದಿಷ್ಟವಾಗಿ ಗುರುತಿಸಲು ಮತ್ತು ವ್ಯವಹಾರದ ದೃಷ್ಟಿಯಿಂದ ನಾಮಧೇಯ ಎಂಬುದು ಬಹಳ ಅವಶ್ಯಕವಾದದ್ದು. ನಾಮವನ್ನು ಎರಡು ರೀತಿಗಳಲ್ಲಿ ಅರ್ಥೈಸಬಹುದು, ಹೆಸರು ಮತ್ತು ಕೀರ್ತಿ. ಇದನ್ನು ಪುರಸ್ಕರಿಸುವಂತೆ ಮಗುವು ಭವಿಷ್ಯತ್ತಿನಲ್ಲಿ ಒಳ್ಳೆಯ ಹೆಸರನ್ನು ಸಂಪಾದಿಸಿ ಕೀರ್ತಿವಂತರಾಗಿ ಬಾಳಲಿ ಎಂಬ ಬಯಕೆಯೆ ನಾಮಕರಣ ಸಂಸ್ಕಾರದ ಉದ್ದೇಶ. ಗಂಡು ಶಿಶುವಿನ ಜನನವಾದ ಹನ್ನೊಂದನೆಯ ದಿವಸ, ಹೆಣ್ಣು ಶಿಶುವು ಜನನವಾದ ಹನ್ನೆರಡನೆಯ ದಿವಸ ಈ ಸ್ನಾನಕ್ಕೆ ಶುಭವಾದದ್ದು. ಇಂದಿನ ಜೀವನ ಶೈಲಿಯಲ್ಲಿ ಎಲ್ಲಾ ಕುಟುಂಬಗಳಲ್ಲಿ ಕಾರಣಾಂತರಗಳಿಂದ ಮಗುವಿಗೆ ವರ್ಷ ತುಂಬಿದ ಮೊದಲ ದಿನ ನಾಮಕರಣ ನೆರವೇರಿಸುತ್ತಾರೆ. ಅಂತಹ ಕಾರ್ಯಕ್ರಮಕ್ಕೆ ಶಾಸ್ತ್ರದ ಮಹತ್ವವೇನು ಅನ್ವಯವಾಗದೆ ಯಾಂತ್ರಿಕ ಆಚರಣೆ ಎಂದೆನಿಸಿಕೊಳ್ಳುತ್ತದೆ. ನಾಮಕರಣ ಪ್ರಕ್ರಿಯೆಯಲ್ಲಿ ದೇವತಾನಾಮ, ಮಾಸನಾಮ, ನಕ್ಷತ್ರನಾಮ ಮತ್ತು ವ್ಯಾವಹಾರಿಕಾ ನಾಮಗಳೆಂಬ ಕನಿಷ್ಠ ನಾಲ್ಕು ಹೆಸರುಗಳನ್ನಿಡುತ್ತಾರೆ. ಮಗುವಿನ ಹೆಸರು ಶುದ್ಧವೂ, ಅರ್ಥಪೂರ್ಣವೂ ಹಾಗೂ ಅನ್ವರ್ಥಕವೂ ಆಗಿರಬೇಕು ಎನ್ನುವುದು ಈ



ಸಂಸ್ಕಾರದ ಬಯಕೆಯಲ್ಲದೇ ಮಗುವಿನ ಆಯಸ್ಸು, ತೇಜಸ್ಸು ವೃದ್ಧಿಸಿ ವ್ಯವಹಾರದಲ್ಲಿ ಸಿದ್ಧಿ ಪ್ರಾಪ್ತಿಯಾಗಲೆಂಬ ಆಶಯ. ರೂಢಿಯಂತೆ ಗಂಡು ಮಕ್ಕಳಿಗೆ ಸಮ ಸಂಖ್ಯಾಕ್ಷರಗಳ ಹೆಸರು ಹಾಗೂ ಹೆಣ್ಣು ಮಕ್ಕಳಿಗೆ ಬೆಸ ಸಂಖ್ಯಾಕ್ಷರಗಳ ಹೆಸರು ಇಡುವುದು ಪ್ರತೀತಿ.

**ನಾಮಕರಣದ ದಿನ ಹಸುಗೂಸಿನ ತಾಯಿಗೆ ಎಣ್ಣೆ (ಹಾಲು ಮೆಣಸು) ಶಾಸ್ತ್ರ:**

**ಸಿದ್ಧತೆ:**

ಶಾಸ್ತ್ರದ ಸಂಭ್ರಮವನ್ನು ಆಚರಿಸಿ ಕೊಂಡಾಡಲು ಮತ್ತು ಜನನ ಶೌಚವನ್ನು ಹೋಗಲಾಡಿಸಲು ಇಡೀ ಮನೆಯನ್ನು ಶುಚಿಗೊಳಿಸಿ, ಮಾವಿನ ತಳಿರು ತೋರಣ, ಹೂವು ಹಾಗೂ ಇತರ ಅಲಂಕಾರಿಕ ವಸ್ತುಗಳಿಂದ ಅಲಂಕರಿಸಬೇಕು.

- ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು.
- ಮಣೆಯ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ಮಣೆಯ ಎದುರಿಗೆ; ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು, ಬಿಳಿಯ ಬಿಡಿ ಹೂವುಗಳು ಮತ್ತು ಒಂದು ಬಿಳಿ ಹೂವಿನ ಹಾರ.
- ಇನ್ನೊಂದು ತಟ್ಟೆಯಲ್ಲಿ ಸಾಕಷ್ಟು ವೀಳೆಯದೆಲೆಗಳು ಮತ್ತು ಅಡಿಕೆಗಳು
- ಮತ್ತೊಂದು ತಟ್ಟೆಯಲ್ಲಿ ಐದು ತಾಂಬೂಲ (ಪ್ರತೀ ತಾಂಬೂಲದಲ್ಲಿ ವೀಳೆಯದೆಲೆ –2 ಮತ್ತು ಅಡಿಕೆ –2 ಇರಬೇಕು).
- ಮಗದೊಂದು ತಟ್ಟೆಯಲ್ಲಿ ಕೆಂಪು ನೀರಿನ ಆರತಿ.
- ಒಂದು ಲೋಟದಲ್ಲಿ ಕರಿಮೆಣಸಿನ ಪುಡಿ ಮಿಶ್ರಿತ ಹಾಲು ಮತ್ತೊಂದು ಲೋಟದಲ್ಲಿ ಬಿಸಿ ನೀರು.
- ಮಣೆಯ ಬಲಭಾಗದಲ್ಲಿ ಒಂದು ಬೇವಿನ ಕಡ್ಡಿ ಹಾಗೂ ಸಣ್ಣ ಚಾಕುವನ್ನಿಡಬೇಕು (ಬಾಣಂತಿಗೆ ಯಾವುದೇ ವಿಘ್ನಗಳು ಮತ್ತು ಭಯವು ಕಾಡದಿರಲಿ ಎನ್ನುವ ನಂಬಿಕೆ).

**ವಿಧಾನ:**

- ಇನ್ನೂ ಸ್ನಾನ ಮಾಡಿರದ ಬಾಣಂತಿಯನ್ನು ಮಣೆಯ ಬಲಭಾಗದಿಂದ ಕರೆತಂದು ಕೂರಿಸಿ, ಒಂದು ಬಿಳೀ ಚೌಕ (ಟವಲ್) ವನ್ನು ದಾರದಂತೆ ಮುದುಡಿ ಜನಿವಾರದಂತೆ ಮೈಮೇಲೆ ಹಾಕಿ ಬಲಗಡೆಗೆ ಗಂಟು ಹಾಕತಕ್ಕದ್ದು.

1 ನಂತರ ಮೂವರು ಮುತ್ತೈದೆಯರು ಕ್ರಮವಾಗಿ ಬಂದು ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.

1 ಲೋಟದಲ್ಲಿರುವ ಬಿಸಿನೀರಿಗೆ ತಮ್ಮ ಬೆರಳುಗಳನ್ನು ಅದ್ದಿ ಸ್ವಲ್ಪ ಅರಿಶಿನ ಪುಡಿಯನ್ನು ತೆಗೆದುಕೊಂಡು ಅರಿಶಿನದ ಕೈ ಮಾಡಿಕೊಂಡು ಬಾಣಂತಿಯ ಕೆನ್ನೆ, ಕೈ ಹಾಗೂ ಪಾದಗಳಿಗೆ ಹಚ್ಚಬೇಕು.

1 ನಂತರ, ಆಕೆಯ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಹೂವನ್ನು ಕೊಡಬೇಕು.

1 ಆಮೇಲೆ, ಆಕೆಯ ನೆತ್ತಿಯ ಮೇಲೆ ಕರಿಮೆಣಸಿನ ಪುಡಿ ಮಿಶ್ರಿತವಾದ ಹಾಲಿನಿಂದ ಮೂರು ಬಾರಿ ಮೆದುವಾಗಿ ತಟ್ಟಿದ ಮೇಲೆ ಆಕೆಯ ಜಡೆಯ ಬುಡಕ್ಕೆ ಹಾಲು ಮೆಣಸನ್ನು ಮೂರುಬಾರಿ ಹಚ್ಚಿ ಆಕೆಯಿಂದ ತಾಂಬೂಲವನ್ನು ಪಡೆಯಬೇಕು.

1 ನಂತರ, ಆಕೆಗೆ ಆರತಿ ಹಾಡು ಹೇಳುತ್ತಾ ಕೆಂಪು ನೀರಿನ ಆರತಿಯನ್ನು ಮಾಡಿ ಆಕೆಯ ಹಣೆಗೆ ಎರಡು ಸಲ ತಿಲಕವನ್ನಿಟ್ಟ ಬಳಿಕ ಕೆಂಪು ನೀರನ್ನು ಮನೆಯ ಮುಂಬಾಗಿಲಿನ ಮುಂದೆ ಅಡ್ಡಲಾಗಿ ಸುರಿದ ಮೇಲೆ ಬಾಣಂತಿಯನ್ನು ಸ್ನಾನಕ್ಕೆ ಕಳುಹಿಸಬೇಕು.

***ಸೂಚನೆ:*** ಬಾಣಂತಿಯ ಸ್ನಾನಕ್ಕೆ ಕಾಯಿಸುವ ನೀರಿನಲ್ಲಿ ಬೇವಿನ ಸೊಪ್ಪು, ನಿಂಬೆ ಸೊಪ್ಪು, ಎರಳೀ ಸೊಪ್ಪು ಮತ್ತು ಚೌಡಂಗಿ ಸೊಪ್ಪನ್ನು ಹಾಕಿರಬೇಕು. ಜೊತೆಗೆ ಆಕೆಯು ತನ್ನ ಮೈಗೆ ಹಚ್ಚಿಕೊಳ್ಳಲು ಬೇವಿನ ಸೊಪ್ಪು ಮತ್ತು ಅರಿಶಿನದ ಪುಡಿಯನ್ನು ಬೆರೆಸಿ ಅರೆದ ಮಿಶ್ರಣವನ್ನು ಸಿದ್ಧಪಡಿಸಬೇಕು. ಬಾಣಂತಿಯು ಸ್ನಾನ ಮಾಡುವಾಗ ಓಮು ಕಾಳಿನ ಪುಡಿಯನ್ನು ತನ್ನ ಕೈ, ಕಾಲು, ಬೆರಳುಗಳ ಮಧ್ಯೆ, ಮೊಣಕೈ ಮೇಲ್ಭಾಗ, ಮೊಣಕಾಲಿನ ಹಿಂಭಾಗ ಮತ್ತು ಕಂಕುಳುಗಳಲ್ಲೆಲ್ಲಾ ಚೆನ್ನಾಗಿ ಉಜ್ಜಿಕೊಂಡು ನೀರನ್ನು ಎರೆದುಕೊಂಡು ಸ್ನಾನ ಮಾಡಬೇಕು. ಬಾಣಂತಿಯ ಸ್ನಾನ ಮುಗಿದ ಬಳಿಕ, ಒದ್ದೆಯಾದ ತಲೆಗೂದಲನ್ನು ಒಣಗಿಸಿಕೊಳ್ಳಲು ಕೆಂಡದ ಮೇಲೆ ಸಾಂಬ್ರಾಣಿ, ಬೆಳ್ಳುಳ್ಳಿಯ ಸಿಪ್ಪೆ ಮತ್ತು ರಾಗಿ ಹಿಟ್ಟನ್ನು ಉದುರಿಸಿ ಅದರಿಂದ ಬರುವ ಹೊಗೆಯನ್ನು ಉಪಯೋಗಿಸುವುದು.

**ಮಗುವಿನ ತಂದೆಯ ಜನಿವಾರದ ಬದಲಾವಣೆ:**

**ಸಿದ್ಧತೆ:**

1 ನಿಗದಿ ಪಡಿಸಿದ ಮುಹೂರ್ತಕ್ಕೂ ಮುನ್ನ ಮಗುವಿನ ತಂದೆಯು ಶುಚೀರ್ಭೂತನಾಗಿ ಬಿಳಿಯ ಪಂಚೆ ಮತ್ತು ಶಲ್ಯವನ್ನು ಧರಿಸಿರಬೇಕು.



1 ಮಗುವಿನ ತಂದೆ ತಾಯಿಯರು ಕುಳಿತುಕೊಳ್ಳಲು ಪೂರ್ವ ಅಥವಾ ಉತ್ತರಾಭಿಮುಖವಾಗಿ ಎರಡು ಮಣೆಗಳನ್ನು ಹಾಕಿ ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು.

1 ಮಣೆಗಳ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

1 ನಂತರ, ಎರಡು ಮಣೆಗಳ ಎದುರಿಗೆ ಪುರೋಹಿತರು ಕುಳಿತುಕೊಳ್ಳುವ ಸಲುವಾಗಿ ಮತ್ತೊಂದು ಮಣೆಯನ್ನು ಹಾಕಬೇಕು.

1 ಪುರೋಹಿತರ ಮಣೆಯ ಪಕ್ಕದಲ್ಲಿ ಒಂದು ತಟ್ಟೆಯಲ್ಲಿ ಪೂಜಾ ಸಾಮಗ್ರಿಗಳಾದ ಪಂಚಪತ್ರೆ, ಉದ್ಧರಣೆ, ಗಂಟೆ ಇಡಬೇಕು.

1 ಮತ್ತೊಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು, ಬಿಳಿಯ ಬಿಡಿ ಹೂವುಗಳ ಜೊತೆಗೆ ಕರ್ಪೂರ ಮತ್ತು ಕಟ್ಟಿದ ಬಿಳಿ ಹೂವುಗಳನ್ನಿಡಬೇಕು.

1 ಆರತಿ ತಟ್ಟೆಯನ್ನು ಕೆಂಪು ನೀರಿನೊಡನೆ ಸಿದ್ಧಗೊಳಿಸಿ ಇರಿಸಬೇಕು.

**ವಿಧಾನ:**

ಮಗುವಿನ ತಂದೆಯು ಮಣೆಯ ಬಲಗಡೆಯಿಂದ ಬಂದು ಮಣೆಯ ಮೇಲೆ ಕುಳಿತುಕೊಂಡು ತನ್ನ ಜನಿವಾರವನ್ನು ಬದಲಾಯಿಸಿಕೊಳ್ಳಬೇಕು.

ಆಮೇಲೆ ಶುಚೀರ್ಭೂತಳಾದ ಮಗುವಿನ ತಾಯಿಯು ಮಣೆಗಳ ಬಲಗಡೆಯಿಂದ ಬಂದು ಪತಿಯ ಬಲ ಪಕ್ಕದಲ್ಲಿರುವ ಮಣೆಯ ಮೇಲೆ ಕುಳಿತುಕೊಂಡ ಮೇಲೆ ಪರಸ್ಪರರು ಹೂವಿನ ಹಾರಗಳನ್ನು ಬದಲಾಯಿಸಿಕೊಳ್ಳಬೇಕು.

**ನವಗ್ರಹ ಪೂಜೆಗೆ ಸಿದ್ಧತೆ:**

1 ಎರಡು ಇಸ್ತ್ರಿ ಎಲೆಗಳು, ಅಕ್ಕಿ 1½ ಸೇರು, ಕಳಸಕ್ಕೆಂದು ಒಂದು ಚೊಂಬು. ಚೊಂಬಿನ ನಡುಭಾಗಕ್ಕೆ ಸುಣ್ಣದಿಂದ ಲೇಪನವನ್ನು ಮಾಡಿ, ಕಳಸಕ್ಕೆ ನೀರನ್ನು ತುಂಬಿ ಮಾವಿನ ಕೆಲವು ಕುಡಿಗಳನ್ನಿಟ್ಟು ಅದರ ಮೇಲೆ ನಾರಿರುವ ತೆಂಗಿನಕಾಯಿಯನ್ನು ಇಟ್ಟು ಅದರ ಮೇಲೆ ಬಿಳಿ ಹೂವಿನ ಮಾಲೆಯನ್ನು ಹಾಕಬೇಕು ಜೊತೆಗೆ ಒಂದು ಬಿಳಿಯ ಕೈವಸ್ತ್ರವನ್ನು ಕಳಸಕ್ಕೆ ಹಾರದ ರೀತಿ ಹೊದಿಸಬೇಕು.

1 ಸ್ವಲ್ಪ ನವಧಾನ್ಯಗಳು (ಕಡಲೇಕಾಳು, ಉದ್ದಿನಕಾಳು, ಹೆಸರುಕಾಳು, ಹುರಳೀಕಾಳು, ತೊಗರಿಕಾಳು, ಭತ್ತ, ಗೋಧಿ, ಎಳ್ಳು, ಅವರೇಕಾಳು), ಕಲ್ಲುಪ್ಪು –1 ಕೆ.ಜಿ., ದೊನ್ನೆಗಳು –12, ದಕ್ಷಿಣೆ ಕಾಸು, ಬೆಲ್ಲದ ಉಂಡೆ

–1/2 ಕೆ.ಜಿ, ವೀಳೆಯದೆಲೆ, ಅಡಿಕೆ, ಖರ್ಜೂರ –1/4 ಕೆ.ಜಿ, ಒಣದ್ರಾಕ್ಷಿ –1/2 ಕೆ.ಜಿ, ಬಾಳೆಹಣ್ಣು – 24, ಗಂಧದ ಕಡ್ಡಿ ಮತ್ತು ತುಪ್ಪದ ಬತ್ತಿಗಳು.

- ಪಂಚಗವ್ಯಕ್ಕೆ: ಹಾಲು, ಮೊಸರು, ತುಪ್ಪ, ಹಸುವಿನ ಗಂಜಲ ಮತ್ತು ಸ್ವಲ್ಪ ಹಸುವಿನ ಸಗಣಿ.

**ನಾಂದಿ ಶಾಸ್ತ್ರ (ಪುಣ್ಯಾಃ)ಕ್ಕೆ ಸಿದ್ಧತೆ :**

- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು, ಬಿಳಿ ಬಿಡಿ ಹೂವುಗಳು ಮತ್ತು ಕರ್ಪೂರ ಮತ್ತು ಕಟ್ಟಿದ ಬಿಳಿ ಹೂವುಗಳನ್ನಿಡಬೇಕು.
- ಎರಡು ಇಸ್ತ್ರಿಎಲೆಗಳನ್ನು ಒಂದರ ಮೇಲೊಂದು ಇರಿಸಿ ಅವುಗಳ ಮೇಲೆ ಒಂದೂವರೆ ಸೇರು ಅಕ್ಕಿಯನ್ನು ಹರಡಿ ಅಕ್ಕಿಯ ಮೇಲೆ ಒಂದು ಚೊಂಬು ಮತ್ತು ಎರಡು ಲೋಟಗಳನ್ನು ಅವುಗಳ ನಡುಭಾಗದಲ್ಲಿ ಸುಣ್ಣವನ್ನು ಲೇಪಿಸಿ ಇರಿಸಿ, ಅವುಗಳಲ್ಲಿ ನೀರನ್ನು ಹಾಕಬೇಕು.
- ಕಳಸದ ಚೊಂಬಿನಲ್ಲಿ ಮಾವಿನಕುಡಿಗಳು ಮತ್ತು ನಾರಿರುವ ಒಂದು ತೆಂಗಿನಕಾಯಿಯನ್ನು ಇರಿಸಬೇಕು ಮತ್ತು ಲೋಟಗಳಲ್ಲಿ ನೀರಿನ ಜೊತೆಗೆ ಮಾವಿನ ಕುಡಿಗಳನ್ನಿಡಬೇಕು.
- ನಂತರ, ವೀಳೆಯದೆಲೆ, ಅಡಿಕೆ, ಬಾಳೆಹಣ್ಣು, ಬಟ್ಟಲು ಅಡಿಕೆ, ಗಂಧದ ಕಲ್ಲು ಮತ್ತು ಗಂಧದ ಚಕ್ಕೆ, ಗಂಧದ ಕಡ್ಡಿ, ತುಪ್ಪದ ಬತ್ತಿ, ಕರ್ಪೂರ, ಬೆಲ್ಲದ ಉಂಡೆ, ಖರ್ಜೂರ, ಒಣದ್ರಾಕ್ಷಿ, ಪೂಜೆಗೆ ತೆಂಗಿನಕಾಯಿ ಮತ್ತು ದಕ್ಷಿಣೆ ಕಾಸನ್ನು ಸಿದ್ಧಪಡಿಸಿಕೊಳ್ಳಬೇಕು.
- ಒಂದು ತಟ್ಟೆಯಲ್ಲಿ ಅಕ್ಕಿ, ಕೊಬ್ಬರಿ ಬಟ್ಟಲು ಮತ್ತು ನಾರಿರುವ ಒಂದು ತೆಂಗಿನಕಾಯಿಗೆ ಬಿಳಿ ಹೂವನ್ನು ಸುತ್ತಿರಬೇಕು. ಜೊತೆಗೆ ವೀಳೆಯದೆಲೆ –2, ಅಡಿಕೆ –2, ಬೆಲ್ಲದ ಉಂಡೆ –2, ಖರ್ಜೂರ –2 ಮತ್ತು ದಕ್ಷಿಣೆ ಕಾಸು.

**ನಾಮಕರಣ ಶಾಸ್ತ್ರಕ್ಕೆ ಸಿದ್ಧಪಡಿಸಿಕೊಳ್ಳಬೇಕಾದ ವಸ್ತುಗಳು ಮತ್ತು ವಿಧಾನ:**

- ಎರಡು ಇಸ್ತ್ರಿಎಲೆಗಳನ್ನು ಹಾಕಿ ಅದರ ಮೇಲೆ ಒಂದೂವರೆ ಸೇರು ಅಕ್ಕಿಯನ್ನು ಹರಡಿ ಅದರ ಮೇಲೆ ಕಳಸವನ್ನಿರಿಸಿ ಕಳಸದ ಮುಂದೆ ಐದು ಬೆಲ್ಲದ ಉಂಡೆಗಳ ಮೇಲೆ ಒಂದು ತಳದ ಕೊಬ್ಬರಿ ಬಟ್ಟಲನ್ನಿಟ್ಟು ಅದರಲ್ಲಿ ಜೇನುತುಪ್ಪವನ್ನು ಸುರಿಯಬೇಕು.



- ಇಸ್ತ್ರಿಎಲೆಯ ಮೇಲಿರುವ ಅಕ್ಕಿಯಲ್ಲಿ ನಾಲ್ಕು ಹೆಸರುಗಳನ್ನು ದೇವತಾನಾಮ, ಮಾಸನಾಮ, ನಕ್ಷತ್ರನಾಮ ಮತ್ತು ವ್ಯಾವಹಾರಿಕಾನಾಮಗಳನ್ನು ಬರೆದು ಮಗುವಿನ ಬಲಕಿವಿಯಲ್ಲಿ ಅಪ್ಪನು ಮಗುವಿನ ಹೆಸರನ್ನು ಮೂರು ಬಾರಿ ಹೇಳಬೇಕು.
- ಜೇನುತುಪ್ಪದಲ್ಲಿ ಅದ್ದಿದ ಚಿನ್ನದ ಉಂಗುರದಿಂದ ಮಗುವಿನ ನಾಲಿಗೆಯ ಮೇಲೆ "ಶ್ರೀ" ಎಂದು ಮೂರು ಬಾರಿ ಅಪ್ಪನು ಬರೆಯಬೇಕು.

**ಪೂರ್ಣಾಹುತಿಗೆ ಸಿದ್ಧಪಡಿಸಿಕೊಳ್ಳಬೇಕಾದ ವಸ್ತುಗಳು:**

- ಹೋಮಕ್ಕೆ: ಹೋಮದ ಕುಂಡ, ಅಕ್ಕಿ ಹಿಟ್ಟು, ದರ್ಬೆ, ಹೋಮದ ಕಡ್ಡಿಗಳು (ಮುತ್ತುಗ, ಎಕ್ಕ, ಅಶ್ವತ್ಥ, ಬನ್ನಿ ಮತ್ತು ಉತ್ತರಾಯನ ಪತ್ರ) ಮತ್ತು ತುಪ್ಪ
- ಪೂರ್ಣಾಹುತಿಗೆ ಅರ್ಪಿಸಲೆಂದು ಒಂದು ತಟ್ಟೆಯಲ್ಲಿ ಸ್ವಲ್ಪ ಅರಿಶಿನ ಕುಂಕುಮ, ಕೊಬ್ಬರಿ ಬಟ್ಟಲು –1, ವೀಳೆಯದೆಲೆ –2, ಅಡಿಕೆ –2, ಬಿಳಿಯ ಹೂವು ಸ್ವಲ್ಪ, ಖರ್ಜೂರ ಮತ್ತು ಒಣದ್ರಾಕ್ಷಿ ಸ್ವಲ್ಪ, ರೇಷ್ಮೆ ವಸ್ತ್ರದ ಒಂದು ತುಂಡು, ನೆಲ್ಲು ಅವಲು ಮತ್ತು ತುಪ್ಪ.
- ಪುರೋಹಿತರ ಮಾರ್ಗದರ್ಶನದಲ್ಲಿ ಹೋಮ ಕಾರ್ಯವನ್ನು ಮುಗಿಸಬೇಕು.
- ಹೋಮದ ಕುಂಡಕ್ಕೆ ಕೆಂಪುನೀರಿನ ಆರತಿಯನ್ನು ಮಾಡಿದ ಮೇಲೆ, ಆರತಿ ನೀರಿಗೆ ಹೂವನ್ನು ಅದ್ದಿ ಅದರಿಂದ ಹೋಮದ ಕುಂಡಕ್ಕೆ ತಿಲಕವನ್ನು ಮೂರು ಬಾರಿ ಇಡಬೇಕು.
- ನಂತರ, ಮೂವರು ಮುತ್ತೈದೆಯರು ಒಬ್ಬೊಬ್ಬರಾಗಿ ಬಂದು, ದೀಪಸ್ತಂಭಗಳಿಗೆ, ಮಗುವಿನ ತಂದೆ, ತಾಯಿ ಮತ್ತು ಮಗುವಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು,
- ಅರಿಶಿನದ ಪುಡಿಯನ್ನು ನೀರಿನಲ್ಲಿ ಅದ್ದಿ ಅರಿಶಿನದ ಕೈ ಮಾಡಿಕೊಂಡು, ಮಗುವಿನ ತಂದೆ, ತಾಯಿಯವರ ಕೆನ್ನೆ, ಕೈ ಹಾಗೂ ಪಾದಗಳಿಗೆ ಹಚ್ಚಬೇಕು.
- ನಂತರ, ಅರಿಶಿನ ಕುಂಕುಮದ ತಟ್ಟೆಗೆ ದಂಪತಿಗಳಿಂದ ನಮಸ್ಕಾರ ಮಾಡಿಸಿ, ಅವರಿಂದ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳನ್ನು ತಾಂಬೂಲ ರೂಪದಲ್ಲಿ ತಮ್ಮ ಸೆರಗೊಡ್ಡಿ ಪಡೆದು ಮಗುವಿಗೆ ಅಕ್ಷತೆಯ ಸಮೇತ ಆಶೀರ್ವಾದ ಮಾಡಬೇಕು.

- ಆಮೇಲೆ ಕೆಂಪುನೀರಿನ ಆರತಿಯನ್ನು ದಂಪತಿ ಸಮೇತ ಮಗುವಿಗೆ ಮಾಡಿ ಎರಡು ಬಾರಿ ತಿಲಕವನ್ನು ಮೂವರ ಹಣೆಗಳಿಗೆ ಇಟ್ಟು, ಆರತಿ ಮಾಡಿದ ಕೆಂಪು ನೀರನ್ನು ಮನೆಯ ಮುಂಬಾಗಿಲಿನಿಂದಾಚೆ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು ಒಳ ಬಂದು ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳನ್ನು ದಕ್ಷಿಣೆಕಾಸಿನ ಸಮೇತ ತಾಂಬೂಲ ರೂಪದಲ್ಲಿ ಆರತಿ ತಟ್ಟೆಯನ್ನು ಒಡ್ಡಿ ಪಡೆಯಬೇಕು.

**ನಾಮಕರಣ ಶಾಸ್ತ್ರಕ್ಕೆ ಮಗುವಿನ ತಾಯಿಯ ತವರಿನ ಮನೆಯಿಂದ ತರಬೇಕಾದ ಸಾಮಗ್ರಿಗಳು:**

- ಮೊದಲನೆಯ ಬೇಸಿನ್ನಲ್ಲಿ ಕಡ್ಲೆ ಪಪ್ಪು – 2½ ಸೇರು, ತಳದ ಕೊಬ್ಬರಿ ಬಟ್ಟಲು – 2, ಅರಿಶಿನ ಕುಂಕುಮದ ಪೊಟ್ಟಣ – ತಲಾ ಎರಡು, ವೀಳೆಯದೆಲೆ – 11, ಅಡಿಕೆ – 100 ಗ್ರಾಂ, ಬಿಡಿ ಹೂವುಗಳು ಸ್ವಲ್ಪ, ಕಟ್ಟಿದ ಬಿಳಿ ಹೂವು – 1 ಮೊಳ, ಬಾಳೆಹಣ್ಣು – 11, ಸೀರೆ ಮತ್ತು ರವಿಕೆ ಬಟ್ಟೆ – 1, ಮಗುವಿನ ಬಟ್ಟೆ – 1 ಜೊತೆ, ತಾಯಿ ಮತ್ತು ಮಗುವಿಗೆ ಸ್ವೆಟ್ಟರ್ – ತಲಾ ಒಂದು ಮತ್ತು ತವರಿನ ಸ್ಥಿತಿಗತಿಗಳ ಮೇರೆಗೆ ಒಡವೆಗಳು.
- ಎರಡನೆಯ ಬೇಸಿನ್ನಲ್ಲಿ ಅಕ್ಕಿ – 2½ ಸೇರು, ತಳದ ಕೊಬ್ಬರಿ ಬಟ್ಟಲು – 2, ಅರಿಶಿನ ಕುಂಕುಮದ ಪೊಟ್ಟಣ – ತಲಾ ಎರಡು, ವೀಳೆಯದೆಲೆ – 11, ಅಡಿಕೆ – 100 ಗ್ರಾಂ, ಕಟ್ಟಿದ ಬಿಳಿಯ ಹೂವು – 1 ಮೊಳ, ಬಾಳೆಹಣ್ಣು – 11, ತುಪ್ಪ – 1/2 ಕೆ.ಜಿ, ಬವು – 100 ಗ್ರಾಂ, ಬಜೆ – 4, ಮೆಣಸು – 100 ಗ್ರಾಂ, ಬೆಳ್ಳುಳ್ಳಿ – 100 ಗ್ರಾಂ, ಜಾಯಿಕಾಯಿ – 2, ಜೇನುತುಪ್ಪ – 50 ಗ್ರಾಂ, ಕಾಶೀದಾರ – 1 ಮೀಟರ್

**ಬಾವಿ ಪೂಜೆಗೆ ಸಿದ್ಧತೆ:**

- ಬಾಣಂತಿಯು ತನ್ನ ಸೆರಗಿನ ಮಡಿಲಲ್ಲಿ ಮಗುವಿನ ಲಂಗೋಟಿ ಬಟ್ಟೆಗಳು –5 ಮತ್ತು ಅನ್ನದ ಬುತ್ತಿಯನ್ನು (ಬುತ್ತಿಯ ಬುಡಕ್ಕೆ ಮಸಿ ಬಳಿದಿರಬೇಕು) ಇಟ್ಟುಕೊಂಡು ಬಾವಿಯ ಹತ್ತಿರ ಬರಬೇಕು.
- ಒಬ್ಬ ಮುತ್ತೈದೆಯು ಒಂದು ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು, ಮತ್ತು ಬಿಡಿ ಹೂವುಗಳು.
- ಇನ್ನೊಬ್ಬರು ಒಂದು ತಟ್ಟೆಯಲ್ಲಿ ವೀಳೆಯದೆಲೆ ಹಾಗೂ ಅಡಿಕೆಯ ಮತ್ತು ಬಾಳೆಹಣ್ಣಿನ ಐದು ತಾಂಬೂಲವನ್ನು ತರಬೇಕು.



- ಮತ್ತೊಬ್ಬರು ಒಂದು ತಟ್ಟೆಯಲ್ಲಿ ಪೂಜಾಸಾಮಗ್ರಿಗಳಾದ ತೆಂಗಿನಕಾಯಿ –1, ಗಂಧದ ಕಡ್ಡಿ –2, ತುಪ್ಪದ ಬತ್ತಿಗಳು, ಕರ್ಪೂರ, ಬೆಂಕಿಪೊಟ್ಟಣ, ಆರತಿ ತಟ್ಟೆ, ಘಂಟೆ ಜೊತೆಗೆ ವೀಳೆಯದೆಲೆ –2, ಅಡಿಕೆ –2 ಹಾಗೂ ಬಾಳೆಹಣ್ಣು–2
- ಮಗದೊಬ್ಬರು ಒಂದು ತಟ್ಟೆಯಲ್ಲಿ ಚೊಂಬುಗಳು –5, ಸಣ್ಣ ಗುಂಡುಕಲ್ಲುಗಳು –5, ಒಂದು ಬಟ್ಟಲಿನಲ್ಲಿ ಸ್ವಲ್ಪ ನವಧಾನ್ಯಗಳು ಮತ್ತು ಬೆರಣಿ (ಒಣಗಿದ ಹಸುವಿನ ಸಗಣಿ) ಪುಡಿ.

**ವಿಧಾನ:**

- ಶುಚೀರ್ಭೂತಳಾದ ಬಾಣಂತಿಯು, ಬಾವಿಯ ಬಳಿ ಬಂದು ಬಾವಿಯ ಮುಂಭಾಗದಲ್ಲಿ ಸ್ವಲ್ಪ ನೀರನ್ನು ಚಿಮುಕಿಸಿ ಶುಭ್ರ ಮಾಡಿ ಸಣ್ಣದಾಗಿ ರಂಗೋಲಿಯನ್ನು ಬಿಡಿಸಬೇಕು
- ಬಿಡಿಸಿದ ರಂಗೋಲಿಯ ಮೇಲೆ ತಂದಿರುವ ಐದು ಸಣ್ಣ ಗುಂಡುಕಲ್ಲುಗಳನ್ನು ಸಾಲಾಗಿ ಇಡಬೇಕು (ಐದು ಸಣ್ಣ ಗುಂಡು ಕಲ್ಲುಗಳನ್ನು ಗುಂಡಪ್ಪ ದೇವರುಗಳೆಂದು ಭಾವಿಸಬೇಕು. ಐದು ಕಲ್ಲುಗಳ ಸಂಕೇತವೆಂದರೆ ಪಂಚಭೂತಗಳು, ಮಾನವನ ಶರೀರವು ಪಂಚಭೂತಗಳಿಂದ ನಿರ್ಮಿತವಾಗಿರುವುದರಿಂದ ಆ ಪಂಚಭೂತಗಳ ದೆಸೆಯು ಮಗುವಿನ ಆರೋಗ್ಯ ಮತ್ತು ಆಯುಷ್ಯಕ್ಕೆ ಪೂರಕವಾಗಿರಲಿ ಎಂಬ ಆಶಯ)
- ನಂತರ ಅವುಗಳಿಗೆ ಅರಿಶಿನ ಕುಂಕುಮ ಹಚ್ಚಿ ಮತ್ತು ಹೂವುಗಳನ್ನು ಅರ್ಪಿಸಬೇಕು
- ಆಮೇಲೆ ಆ ಗುಂಡುಕಲ್ಲುಗಳ ಮುಂದೆ ಬೆರಣಿ ಪುಡಿ ಹಾಗೂ ನವಧಾನ್ಯಗಳನ್ನು ಸಮನಾಗಿ ಹರಡಿ ತಂದಿರುವ ಬುತ್ತಿಯನ್ನು ಅದರ ಮೇಲಿಡಬೇಕು.
- ಆಮೇಲೆ ಮಗುವಿನ ಐದು ಲಂಗೋಟಿ ಬಟ್ಟೆಗಳನ್ನು ನೆನೆಸಿ ಗುಂಡಪ್ಪ ದೇವರುಗಳ ಪಾದದಲ್ಲಿ ಇಡಬೇಕು.
- ನಂತರ ಗಂಧದ ಕಡ್ಡಿಗಳನ್ನು ಹಚ್ಚಿ, ಬಾಳೆಹಣ್ಣಿನ ನೈವೇದ್ಯ ಮಾಡಿ ತೆಂಗಿನಕಾಯಿ ಒಡೆದು ತುಪ್ಪದ ಬತ್ತಿಯ ಆರತಿ ಮಾಡಬೇಕು.
- ಆಮೇಲೆ, ಬಾವಿಯೊಳಕ್ಕೆ ಒಂದು ವೀಳೆಯದೆಲೆ, ಒಂದು ಅಡಿಕೆ, ಒಂದು ಹೂವು ಮತ್ತು ಸ್ವಲ್ಪ ಅರಿಶಿನ ಕುಂಕುಮವನ್ನು ಹಾಕಬೇಕು.

1 ನಂತರ, ಒಂದು ಚೊಂಬಿಗೆ ಹಗ್ಗವನ್ನು ಕಟ್ಟಿ ಮೂರು ಬಾರಿ ಬಾವಿಯಿಂದ ನೀರನ್ನು ಸೇದಿ ಆ ನೀರನ್ನು ಮತ್ತೆ ಬಾವಿಗೇ ಸುರಿಯುತ್ತಾ ಗಂಗಾದೇವಿಗೆ "ಈ ನೀರನ್ನು ತೆಗೆದುಕೊಂಡು ನನ್ನ ಮಗುವಿಗೆ ಹಾಲನ್ನು ಕೊಡು ತಾಯಿ" ಎಂದು ಬೇಡಿಕೊಳ್ಳಬೇಕು.

1 ಆಮೇಲೆ, ಬಾವಿಯ ಮುಂದೆ ಇಟ್ಟಿರುವ ಐದು ಚೊಂಬುಗಳಿಗೆ ಬಾವಿಯಿಂದ ನೀರನ್ನು ಸೇದಿ ತುಂಬಿಸಿಕೊಳ್ಳಬೇಕು.

1 ಪೂಜಾ ಸಮಯದಲ್ಲಿ ನೆರೆದಿರುವವರಿಗೆಲ್ಲಾ ಅರಿಶಿನ, ಕುಂಕುಮ, ಹೂವು ಮತ್ತು ಅಕ್ಷತೆಯನ್ನು ಕೊಡಬೇಕು.

1 ಬಾಣಂತಿಯು ತನ್ನ ಸೀರೆಯ ಸೆರಗನ್ನು ತನ್ನ ತಲೆಯ ಮೇಲೆ ಹೊದ್ದುಕೊಂಡು, ನೀರು ತುಂಬಿದ ಒಂದು ತಂಬಿಗೆಯನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡು ನೆನೆಸಿದ ಐದು ಮಗುವಿನ ಲಂಗೋಟಿ ಬಟ್ಟೆಗಳನ್ನು ತನ್ನ ಮಡಿಲಿನಲ್ಲಿ ಹಾಕಿಕೊಂಡು ಹೊರಡಬೇಕು.

1 ಉಳಿದ ನಾಲ್ವರು ಮುತ್ತೈದೆಯರು ತಮ್ಮ ತಲೆಯ ಮೇಲೆ ಸೆರಗನ್ನು ಹೊದ್ದು ಅದರ ಮೇಲೆ ನೀರು ತುಂಬಿದ ಚೊಂಬುಗಳನ್ನು ಇಟ್ಟುಕೊಂಡು ತಂದಿದ್ದ ಪೂಜಾಸಾಮಗ್ರಿಗಳೊಂದಿಗೆ ಎಲ್ಲರೊಡನೆ ಮನೆಗೆ ಹಿಂದಿರುಗಿ, ದೇವರ ಕೋಣೆಯಲ್ಲಿ ಇರಿಸಬೇಕು.

**ನಂತರ ಊಟದ ಸಮಯ**

***ಸೂಚನೆ:*** ವಾಸಿಸುವ ಮನೆಯ ಹತ್ತಿರ ಎಲ್ಲೂ ಬಾವಿಗಳಿಲ್ಲದಿದ್ದರೆ, ಮನೆಯಲ್ಲಿಯೇ ನೀರನ್ನು ಒಂದು ಪಾತ್ರೆಯಲ್ಲಿಟ್ಟು ಆ ಜಲಕ್ಕೆ ಗಂಗೆಯನ್ನು ಆವಾಹನೆ ಮಾಡಿಕೊಂಡು ಮಿಕ್ಕೆಲ್ಲಾ ಶಾಸ್ತ್ರಗಳನ್ನು ನೆರವೇರಿಸಬಹುದು.

**ತೊಟ್ಟಿಲು ಪೂಜೆಗೆ ಸಿದ್ಧತೆ:**

1 ಸಂಜೆಯ ವೇಳೆಗೆ, ಮನೆಯವರ ಅನುಕೂಲಕ್ಕನುಸಾರವಾಗಿ ಒಂದು ತೊಟ್ಟಿಲು, ತೊಟ್ಟಿಲಿಗೆ ಸೀರೆ ಹೊದಿಸಿ ಹೂವುಗಳಿಂದ ಅಲಂಕರಿಸಬೇಕು.

1 ತೊಟ್ಟಿಲಿನ ಎದುರು ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿಟ್ಟು ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

1 ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಬಿಳಿಯ ಬಿಡಿ ಹೂವುಗಳಿರಬೇಕು.

1 ಮತ್ತೊಂದು ತಟ್ಟೆಯಲ್ಲಿ ಪೂಜೆಗೆ ತೆಂಗಿನಕಾಯಿ–2, ವೀಳೆಯದೆಲೆ–2, ಅಡಿಕೆ–2, ಹೂವು, ಬಾಳೆಹಣ್ಣು–2, ಗಂಧದಕಡ್ಡಿ, ತುಪ್ಪದ ಬತ್ತಿ, ಕರ್ಪೂರ, ಗಂಟೆ ಜೊತೆಗೆ ಆರತಿ ತಟ್ಟೆಯನ್ನು ಸಿದ್ಧಪಡಿಸಿಕೊಳ್ಳಬೇಕು.



1 ಮಗುವನ್ನು ಮಲಗಿಸುವ ತೊಟ್ಟಿಲಿನಲ್ಲಿ ಒಂದು ಸೌತೆಕಾಯಿಗೆ ಅಂಗುದಾರ ಮತ್ತು ಹೂವನ್ನು ಸುತ್ತಿ ಗುಂಡಪ್ಪನೆಂದು ಭಾವಿಸಿ ಅದರಲ್ಲಿರಿಸಬೇಕು.

**ವಿಧಾನ:**

1 ಮೊದಲಿಗೆ ಒಬ್ಬ ಮುತ್ತೈದೆಯು ಬಂದು ದೀಪಸ್ತಂಭಗಳಿಗೆ, ತೊಟ್ಟಿಲಿನ ನಾಲ್ಕು ಅಂಚಿಗೆ ಮತ್ತು ಗುಂಡಪ್ಪನಿಗೆ ಅರಿಶಿನ ಕುಂಕುಮ ಹಚ್ಚಿ ಹೂವನ್ನಿಡಬೇಕು.

1 ಗಂಧದಕಡ್ಡಿಗಳನ್ನು ಬೆಳಗಿ, ಬಾಳೆಹಣ್ಣಿನ ನೈವೇದ್ಯವನ್ನು ಮಾಡಿ, ತೆಂಗಿನಕಾಯಿ ಒಡೆದು ಕರ್ಪೂರದ ಆರತಿಯನ್ನು ಮಾಡಬೇಕು.

1 ಆರತಿಯನ್ನು ತಾನು ಮೊದಲು ತೆಗೆದುಕೊಂಡು ನಂತರ ನೆರೆದ ಎಲ್ಲರಿಗೂ ಆರತಿಯನ್ನು ಅರ್ಪಿಸಬೇಕು.

1 ತೊಟ್ಟಿಲ ಪೂಜೆಯ ಹಾಡನ್ನು ಹಾಡುತ್ತಾ ತೊಟ್ಟಿಲನ್ನು ತೂಗಿದ ಮೇಲೆ ಗುಂಡಪ್ಪನನ್ನು ತೆಗೆದು ದೇವರಕೋಣೆಯಲ್ಲಿ ಇರಿಸಬೇಕು.

1 ನಂತರ, ಮಗುವನ್ನು ತೊಟ್ಟಿಲಿನಲ್ಲಿ ಮಲಗಿಸಿ ತೊಟ್ಟಿಲು ತೂಗಬೇಕು.

1 ತೊಟ್ಟಿಲು ಪೂಜೆಯಾದ ಬಳಿಕ, ತೊಟ್ಟಿಲಿನ ಮುಂದೆ ಬಲ ಭಾಗದಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳೀವಸ್ತ್ರವನ್ನು ಹಾಸಬೇಕು.

1 ಆಮೇಲೆ ಮಗುವಿನೊಂದಿಗೆ ಅಮ್ಮನನ್ನು ಮಣೆಯ ಬಲಗಡೆಯಿಂದ ಕರೆತಂದು ಮಣೆಯ ಮೇಲೆ ಕೂರಿಸಬೇಕು.

1 ಆಕೆಯ ಎದುರಿಗೆ, ಬಲಗಡೆಗೆ ಒಂದು ದೀಪಸ್ತಂಭವನ್ನಿಟ್ಟು ಅದರಲ್ಲಿ ಎರಡು ಜ್ಯೋತಿಗಳನ್ನು ಬೆಳಗಿಸಬೇಕು.

1 ಮಗುವಿನ ಅಮ್ಮನ ತವರು ಮನೆಯಿಂದ ತಂದಿರುವ ಸಾಮಗ್ರಿಗಳ ಬೇಸಿನ್ಗಳು ಮತ್ತು ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಹೂವು, ಮತ್ತೊಂದು ತಟ್ಟೆಯಲ್ಲಿ ವೀಳ್ಯೆದೆಲೆಗಳು ಮತ್ತು ಅಡಿಕೆಯನ್ನು ಜೋಡಿಸಬೇಕು.

1 ನಂತರ, 3. 5 ಅಥವಾ 9 ಮುತ್ತೈದೆಯರು ಬಂದು ಕ್ರಮವಾಗಿ ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.

- ಆಮೇಲೆ ಮಗುವಿಗೆ, ಮಗುವಿನ ಅಮ್ಮನ ಕೆನ್ನೆಗೆ, ಕೈ ಹಾಗೂ ಪಾದಗಳಿಗೆ ಅರಿಶಿನ ಹಚ್ಚಿ ಅವರ ಹಣೆಗಳಿಗೆ ಕುಂಕುಮ ಇಟ್ಟು ಹೂವನ್ನು ಕೊಡಬೇಕು
- ನಂತರ, ಅರಿಶಿನ ಕುಂಕುಮದ ತಟ್ಟೆ ಮತ್ತು ಬೇಸಿನ್ಗಳಿಗೆ ನಮಸ್ಕಾರ ಮಾಡಿಸಿ ತಮ್ಮ ಗಂಡನ ಮನೆತನದ ಹೆಸರು ಮತ್ತು ಗಂಡನ ಹೆಸರನ್ನು "ಮಾಮ" ಪದದೊಂದಿಗೆ ಸೇರಿಸಿ ತಿಳಿಸಿ ಎರಡು ವೀಳ್ಯೆದೆಲೆ, ಅಡಿಕೆಯ ತಾಂಬೂಲವನ್ನು ಮಗುವಿನ ಅಮ್ಮನಿಂದ ತಮ್ಮ ಸೆರಗೊಡ್ಡಿ ಪಡೆಯಬೇಕು.
- ನಂತರ ನೆರೆದಿರುವ ಎಲ್ಲಾ ಮುತ್ತೈದೆಯರಿಗೆ ತಾಂಬೂಲವನ್ನು ಕೊಟ್ಟು ಮಗು ಮತ್ತು ತಾಯಿಗೆ ಕೆಂಪು ನೀರಿನ ಆರತಿಯನ್ನು ಆರತಿ ಹಾಡನ್ನು ಹಾಡುತ್ತಾ ಮಾಡಬೇಕು. ನಂತರ, ತಾಯಿ ಮಗುವಿಗೆ ತಿಲಕವನ್ನಿಡಬೇಕು.
- ಆರತಿ ಬೆಳಗಿದ ಕೆಂಪು ನೀರನ್ನು ಮನೆಯ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು ಹಿಂದಿರುಗಿ ಬಂದು ಆರತಿ ತಟ್ಟೆಯನ್ನೊಡ್ಡಿ ದಕ್ಷಿಣೆಸಹಿತವಾದ ತಾಂಬೂಲವನ್ನು ತಾಯಿಯಿಂದ ಪಡೆಯಬೇಕು.
- ನಂತರ, ಮಗುವಿನ ಸೋದರತ್ತೆಯವರು ಬಂದು ಎಣ್ಣೆಯ ದೀಪದಲ್ಲಿ ಒಂದು ಬಜೆಯನ್ನು ಸುಟ್ಟು ಅದನ್ನು ಗಂಧದ ಕಲ್ಲಿನಲ್ಲಿ ಒಂದು ತೊಟ್ಟು ಜೇನುತುಪ್ಪ ಮತ್ತು ತುಪ್ಪದೊಂದಿಗೆ ತೇಯ್ದು ಬಂದ ತಿರುಳನ್ನು ಮಗುವಿನ ನಾಲಿಗೆಯ ಮೇಲೆ ಎರಡು ಬಾರಿ ಸವರಬೇಕು.
- ಮಗುವಿನ ಸೋದರತ್ತೆಯವರು ತವರಿನಿಂದ ತಂದಿರುವ ಕಾಶೀದಾರವನ್ನು ಮಗುವಿನ ಕೈಗಳು, ಕಾಲುಗಳು ಹಾಗೂ ಸೊಂಟಕ್ಕೆ ಕಟ್ಟಬೇಕು. ರಾತ್ರಿಗೆ, ಆಹ್ವಾನಿತ ಬಂಧುಮಿತ್ರರ ಒಡಗೂಡಿ ಸಹಭೋಜನವನ್ನು ಸವಿಯತಕ್ಕದ್ದು.
- ಕುಟುಂಬದ ಸ್ಥಿತಿಗೆ ಅನುಸಾರ ಫಲತಾಂಬೂಲವನ್ನು ನೀಡಬೇಕು.

**ಬಾಣಂತಿ ಮತ್ತು ಮಗುವನ್ನು ತವರಿಗೆ ಕರೆದೊಯ್ಯುವುದು:**

ಗರ್ಭಾವಸ್ಥೆ, ಹೆರಿಗೆ ಮತ್ತು ಬಾಣಂತೀತನವೆಂಬುದು ಹೆಣ್ಣಿಗೆ ಪ್ರಕೃತಿಯು ದಯಪಾಲಿಸಿದ ಒಂದು ಅದ್ಭುತ ಮತ್ತು ರೋಮಾಂಚಕ ಅನುಭವ. ತನ್ನ ಕರುಳಿನ ಬಳ್ಳಿಯನ್ನು ನೋಡುತ್ತಿದ್ದರೆ ವರ್ಣಿಸಲಾಗದ ಆನಂದದ ಜೊತೆಗೆ ಆತಂಕ ಕೂಡ. ಪ್ರಥಮ ಬಾರಿಗೆ ಅನುಭವಿಸುತ್ತಿರುವ ಅನುಭವಗಳು ಆಕೆಯನ್ನು



ಗೊಂದಲಕ್ಕೀಡು ಮಾಡುವುದು ಸಹಜ. ತನಗಿರುವ ಪ್ರಶ್ನೆ ಹಾಗೂ ಸಂಶಯಗಳಿಗೆ ತಕ್ಕುದಾದ ಪರಿಹಾರ ಸೂಚಿಸುವ ಮತ್ತು ಅನ್ನಿಸಿದ್ದನ್ನೆಲ್ಲಾ ಹೇಳಿಕೊಳ್ಳಲು ಹೆತ್ತ ತಾಯಿಯಲ್ಲದೇ ಮತ್ಯಾವ ವ್ಯಕ್ತಿಯು ಸೂಕ್ತ ಆಕೆಗೆ? ಈ ಕಾರಣದಿಂದಲೇ ಇರಬೇಕು, ಪ್ರಾಚೀನರು ಹಸೀ ಬಾಣಂತಿ ಮತ್ತು ಮಗುವಿನ ಆರೈಕೆಯನ್ನು ತವರಿನಲ್ಲಿ ನೆರವೇರಿಸಲು ಅವಕಾಶ ಕಲ್ಪಿಸಿದ್ದು.

**ವಿಧಾನ:**

- ಬೀಗರುಗಳ ಪೂರ್ವ ನಿರ್ಧಾರಿತ ಮಾತುಕತೆಯಂತೆ, ನಾಮಕರಣ ಶಾಸ್ತ್ರವನ್ನು ಗಂಡನ ಮನೆಯಲ್ಲಿ ನೆರವೇರಿಸಿದ ದಿವಸ ಅಥವಾ ಮಾರನೆಯ ದಿವಸ ಬಾಣಂತಿ ಮತ್ತು ಮಗುವನ್ನು ತೊಟ್ಟಿಲ ಸಮೇತ ತವರಿಗೆ ತವರು ಮನೆಯವರು ಆಕೆಯ ಗಂಡನ ಮನೆಗೆ ಬಂದು ತಮ್ಮ ಮನೆಗೆ ಕರೆದೊಯ್ಯಬೇಕು.
- ತವರಿಗೆ ಆಗಮಿಸಿದ ಬಾಣಂತಿ ಮತ್ತು ಮಗುವಿಗೆ ಮನೆಯ ಮುಂಬಾಗಿಲಿನಲ್ಲಿ ಕೆಂಪುನೀರಿನ ಆರತಿಯನ್ನು ಮಾಡಿ ತಾಯಿ ಮತ್ತು ಮಗುವಿನ ಹಣೆಗೆ ಎರಡು ಬಾರಿ ತಿಲಕವನ್ನಿಟ್ಟು ಕೆಂಪು ನೀರನ್ನು ಅಲ್ಲೇ ಮುಂಬಾಗಿಲಿನೆದುರು ಅಡ್ಡಲಾಗಿ ಸುರಿದು ಬಾಣಂತಿಯ ಪಾದಗಳನ್ನು ಬಿಸಿನೀರಿನಿಂದ ತೊಳೆದು ಮನೆಯೊಳಕ್ಕೆ ಬರಮಾಡಿಕೊಳ್ಳಬೇಕು.
- ಬಾಣಂತಿ ಮತ್ತು ಮಗುವು ತವರಿಗೆ ಬಂದ ದಿನ ನೆಂಟರು ಇಷ್ಟರಿಗೆ ಆಹ್ವಾನವನ್ನಿತ್ತು ಹಬ್ಬದಡುಗೆಯೊಂದಿಗೆ ಭೋಜನವನ್ನು ಮಾಡಿ ಆನಂದಿಸುವುದು.

***ಸೂಚನೆ:*** ಎರಡೂ ಕುಟುಂಬಗಳ ಒಪ್ಪಂದದ ಮೇರೆಗೆ, ಬಾಣಂತಿ ಮತ್ತು ಮಗುವನ್ನು 5, 9 ಅಥವಾ 11 ತಿಂಗಳ ಕಾಲ ತವರು ಮನೆಯಲ್ಲಿ ಇರಿಸಿಕೊಂಡು ಯಥಾಶಕ್ತಿ ಆರೈಕೆ ಮಾಡುವುದು.

**ಬಾಣಂತಿ ಮತ್ತು ಮಗುವನ್ನು ಗಂಡನ ಮನೆಗೆ ಕಳುಹಿಸುವಿಕೆ :**

ತವರಿನಲ್ಲಿ ಪೋಷಕರೊಂದಿಗೆ ಕಳೆದ ಸಮಯದಲ್ಲಿ ತನ್ನ ಮನದಲ್ಲಿದ್ದ ದುಗುಡ, ದುಮ್ಮಾನ, ಪ್ರಶ್ನೆ ಮತ್ತು ಸಂಶಯಗಳ ನಿವಾರಣೆ ತಕ್ಕ ಮಟ್ಟಿಗೆ ಆಗಿದ್ದು ಮಗುವಿನ ಆರೈಕೆಯ ವಿಧಾನವವನ್ನು ಸಾಧ್ಯವಾದಷ್ಟು ಕರಗತ

ಮಾಡಿಕೊಂಡಿರುವ ಬಾಣಂತಿಯು ತನ್ನ ಮತ್ತು ಮಗುವಿನ ಬೇಡಿಕೆಗಳನ್ನು ಸ್ವತಃ ಪೂರೈಸಿಕೊಳ್ಳಲು ಶಕ್ತಳಾಗಿರುವುದರಿಂದ ಮರಳಿ ಗಂಡನ ಮನೆಗೆ ತಲುಪಿಸುವುದು ಈ ಶಾಸ್ತ್ರದ ತಿರುಳು.

**ಸಿದ್ಧತೆ:**

- ತವರಿನ ಆರ್ಥಿಕ ಸ್ಥಿತಿಗನುಗುಣವಾಗಿ ತಾಯಿ ಮತ್ತು ಮಗುವಿಗೆ ಒಡವೆ, ವಸ್ತ್ರಗಳನ್ನು ಕೊಡಬೇಕು.
- ನಿಗದಿ ಪಡಿಸಿದ ದಿನದಂದು ಶುಚೀರ್ಭೂತರಾದ ತಾಯಿ ಮತ್ತು ಮಗುವು ಹೊಸ ಉಡುಪುಗಳನ್ನು ಧರಿಸಿ ಸಿದ್ಧರಾಗಬೇಕು.
- ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು.
- ಮಣೆಯ ಎದುರಿಗೆ ಎರಡು ದೀಪಸ್ತಂಭಗಳನ್ನು ಇರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು ಸ್ವಲ್ಪ ಬಿಡಿ ಹೂವುಗಳು ಮತ್ತು ಕಟ್ಟಿದ ಹೂವನ್ನಿಡಬೇಕು.
- ಮತ್ತೊಂದು ತಟ್ಟೆಯಲ್ಲಿ ವೀಳೆಯದೆಲೆ ಅಡಿಕೆ ಮತ್ತು ಬಾಳೆಹಣ್ಣಿರುವ ತಾಂಬೂಲಗಳು ಇರಬೇಕು.
- ಒಂದು ಬೇಸಿನ್‌ನಲ್ಲಿ ಕೆಳಕಂಡ ಗಂಟಿನ ಸಾಮಗ್ರಿಗಳನ್ನಿರಿಸಬೇಕು.
- ಹುರಿಗಡಲೆ (ಕಡ್ಲೆ ಪಪ್ಪು) 2½ ಕೆ.ಜಿ., ಅರಿಶಿನ, ಕುಂಕುಮ – ತಲಾ ಎರಡು ಪೊಟ್ಟಣಗಳು, ತಳದ ಕೊಬ್ಬರಿ ಬಟ್ಟಲು – 2, ವೀಳೆಯದೆಲೆ – 11, ಅಡಿಕೆ – 100 ಗ್ರಾಂ, ಬಿಳಿ ಬಣ್ಣದ ಕಟ್ಟಿದ ಹೂವು – 1 ಮೊಳ, ಬಾಳೆಹಣ್ಣು – 11, ಖರ್ಜೂರ – 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು (ಕವಲಿರುವುದು) – 5, ಹಸಿರು ಬಣ್ಣದ ರವಿಕೆ ಬಟ್ಟೆ – 1 ಮತ್ತು ಇವೆಲ್ಲಾ ಸಾಮಗ್ರಿಗಳನ್ನು ಕಟ್ಟಲು 1½ ಮೀಟರ್ ಉದ್ದದ ಬಿಳಿ ಬಟ್ಟೆ ಮತ್ತು ಸುತ್ತಿ ಗಂಟು ಹಾಕಲು ಬಿಳಿ ದಾರ.

**ವಿಧಾನ:**

- ನಿರ್ಧಾರಿತ ಮುಹೂರ್ತಕ್ಕನುಸಾರವಾಗಿ ಸಿದ್ಧರಾದ ತಾಯಿ ಮತ್ತು ಮಗುವನ್ನು ಮಣೆಯ ಬಲಭಾಗದಿಂದ ಬರಮಾಡಿಕೊಂಡು ಮಣೆಯ ಮೇಲೆ ಕೂರಿಸಬೇಕು
- ನಂತರ, ಮುತ್ತೈದೆಯೊಬ್ಬರು ಕ್ರಮವಾಗಿ ದೀಪಸ್ತಂಭಗಳಿಗೆ ಅರಿಶಿನ



ಕುಂಕುಮ ಮತ್ತು ಹೂವನ್ನಿಟ್ಟು, ತಾಯಿ ಮತ್ತು ಮಗುವಿನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನವನ್ನು ಹಚ್ಚಿ ಅವರ ಹಣೆಗಳಿಗೆ ಎರಡು ಸಲ ಕುಂಕುಮವನ್ನಿಟ್ಟು ಹೂವನ್ನು ಕೊಡಬೇಕು

- ಮುಂದೆ ಅರಿಶಿನ ಕುಂಕುಮದ ತಟ್ಟೆ, ತಾಂಬೂಲದ ತಟ್ಟೆ ಮತ್ತು ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳಿರುವ ಬೇಸನ್ಗೆ ಅವರಿಂದ ಮೂರು ಬಾರಿ ನಮಸ್ಕಾರ ಮಾಡಿಸಬೇಕು.
- ಆಮೇಲೆ ತಾಯಿಯ ಮಡಿಲಲ್ಲಿ ಬಿಳಿಯ ವಸ್ತ್ರವನ್ನು ಹಾಸಿ ಗಂಟಿನ ಸಾಮಗ್ರಿಗಳನ್ನು ಜೋಡಿಸಿ ಗಂಟು ಕಟ್ಟಬೇಕು.
- ಮಣೆಯ ಎಡಭಾಗದಿಂದ ತಾಯಿ ಮತ್ತು ಮಗುವನ್ನು ಎಬ್ಬಿಸಿ ನೆರೆದಿರುವವರೆಲ್ಲರಿಗೂ ಹೋಗಿಬರುವೆವು ಎಂದು ತಿಳಿಸಿ ಹೊರಡಬೇಕು.
- ಗಂಡನ ಮನೆಗೆ ತಲುಪಿಸಲು ತವರಿನ ಕೆಲ ಬಂಧುಗಳು ಜೊತೆಯಲ್ಲಿ ಇದ್ದು ತವರು ಮನೆಯ ಬಳುವಳಿಯಾಗಿ ತಿಂಡಿ, ತಿನಿಸು, ಹಣ್ಣು ಜೊತೆಗೆ ತೊಟ್ಟಿಲನ್ನು ಸಹ ಒಯ್ಯಬೇಕು.

ಗಂಡನ ಮನೆಗೆ ಆಗಮಿಸಿದ ತಾಯಿ ಮಗುವಿಗೆ ಮನೆಯ ಮುಂಬಾಗಿಲಿನಲ್ಲಿ ತಡೆದು ಕೆಂಪುನೀರಿನ ಆರತಿಯನ್ನು ಮಾಡಿ ತಾಯಿ ಮತ್ತು ಮಗುವಿನ ಹಣೆಗೆ ಎರಡು ಬಾರಿ ತಿಲಕವನ್ನಿಟ್ಟು ಕೆಂಪು ನೀರನ್ನು ಅಲ್ಲೇ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು ಬಾಣಂತಿಯ ಪಾದಗಳನ್ನು ಬಿಸಿನೀರಿನಿಂದ ತೊಳೆದು ಮನೆಯೊಳಕ್ಕೆ ಬರಮಾಡಿಕೊಳ್ಳಬೇಕು.

ನಂತರ, ನೆಂಟರು ಇಷ್ಟರಿಗೆ ಆಹ್ವಾನವನ್ನಿತ್ತು ಹಬ್ಬದಡುಗೆಯೊಂದಿಗೆ ಭೋಜನವನ್ನು ಮಾಡಿ ಆನಂದಿಸುವುದು. ತಾಯಿ ಮಗುವು ಮಾತ್ರ ಆ ದಿನ ಗಂಡನ ಮನೆಯಲ್ಲಿನ ಊಟ ಮಾಡದೆ ತವರಿನಿಂದ ಅಥವಾ ಉಪಹಾರ ಮಂದಿರದಿಂದ ತಂದ ಆಹಾರವನ್ನು ಸೇವಿಸಬೇಕು.

## 6. ನಿಷ್ಕ್ರಮಣೆ (ಮೊದಲ ಬಾರಿಗೆ ಮಗುವನ್ನು ಮನೆಯಿಂದ ಹೊರ ಒಯ್ಯುವುದು)

ಶಿಶುವಿನ ಆರೋಗ್ಯ ಮತ್ತು ಆಯುಷ್ಯಾಭಿವೃದ್ಧಿಗೆಂದು ನಿಷ್ಕ್ರಮಣೆ ಸಂಸ್ಕಾರವನ್ನು ಆಚರಿಸಲಾಗುತ್ತದೆ. ಶಿಶುವು ಜನಿಸಿದ ಕೆಲವು ತಿಂಗಳುಗಳು ತುಂಬಾ ಹೊತ್ತಿನವರೆಗೂ ನಿದ್ರೆ ಮಾಡುವುದರಿಂದ, ಆರಂಭದ ಬೆಳವಣಿಗೆಯ ಮೇಲೆ ಪರಿಸರದ ಯಾವುದೇ ಪ್ರಭಾವ ಬೀಳದಂತೆ ಆ ಕೆಲವು ತಿಂಗಳುಗಳು

ಬಾಣಂತಿ ಮತ್ತು ಮಗುವನ್ನು ಮಂದ ಬೆಳಕಿನ, ಬೆಚ್ಚನೆಯ ಕೋಣೆಯಲ್ಲಿ, ತಿಳಿಗಾಳಿ ಬೀಸುವೆಡೆ, ಜನಸಂಚಾರ ಕಡಿಮೆ ಇದ್ದು ಧೂಳು, ಗಾಳಿ, ಶಬ್ದ ಮುಂತಾದ ಮಾಲಿನ್ಯಗಳಿಂದ ದೂರವಿಟ್ಟು ಬೆಳೆಸಿದ ಮೇಲೆ ಪ್ರಕೃತಿಯ ವಾತಾವರಣಕ್ಕೆ ಕ್ರಮೇಣ ಹೊಂದಿಕೊಂಡ ಮಗುವನ್ನು ಎರಡು ತಿಂಗಳು ತುಂಬಿ ಮೂರು ತಿಂಗಳು ಆಗುವುದರೊಳಗೆ ಪ್ರಥಮ ಬಾರಿಗೆ ಮನೆಯಿಂದ ಹೊರಗೆ ಸೂರ್ಯನ ನೇರ ಬೆಳಕಿಗೆ ಒಡ್ಡುವ ಸಲುವಾಗಿ ಕರೆದೊಯ್ಯುವಿಕೆಯೇ ನಿಷ್ಕ್ರಮಣ. ಕೇವಲ ಮನೆಯ ಆವರಣಕ್ಕೆ ಸೀಮಿತಗೊಳಿಸದೆ ಮಗುವಿನ ಎಳೆಯ ದೇಹವನ್ನು ಸೂರ್ಯನ ಕಿರಣಗಳಿಗೆ ಮತ್ತು ಚಂದ್ರನ ಶೀತಲತೆಗೆ ಒಡ್ಡಿ ನಿಸರ್ಗದ ಮಡಿಲಿನಲ್ಲಿ ಬೆಳೆಯಲು ಅವಕಾಶವನ್ನು ಕಲ್ಪಿಸುವ ಆಚರಣೆ.

**ವಿಧಾನ:**

ಪ್ರಸ್ತುತ ಜೀವನ ಶೈಲಿಯಲ್ಲಿ ಹೆರಿಗೆಯು ಆರೋಗ್ಯಕೇಂದ್ರದಲ್ಲಿ ಆಗುವುದರಿಂದ ಮತ್ತು ನಗರದ ಪರಿಸರದಲ್ಲಿ ಮಗುವು ಬೆಳೆಯುವ ಪರಿಸ್ಥಿತಿಯಿಂದಾಗಿ ಅನಿವಾರ್ಯವಾಗಿ ತಾಯಿ ಮತ್ತು ಮಗುವು ಆಗಿಂದಾಗ್ಗೆ ಹೊರ ವಾತವರಣಕ್ಕೆ ತಮ್ಮನ್ನು ಒಡ್ಡಿಕೊಳ್ಳುವುದರಿಂದ ನಿಷ್ಕ್ರಮಣ ವಿಧಿಯು ಮೂಲೆಗುಂಪಾಗಿದೆ. ಆದರೂ ನಿಷ್ಕ್ರಮಣಕ್ಕೆ, ಸೂಕ್ತವಾದ ದಿನವನ್ನು ಗೊತ್ತುಪಡಿಸಿದ ಮೇಲೆ ಮಗುವಿನ ತಂದೆ ಮತ್ತು ತಾಯಿಯವರ ಮನೆಯ ಅಥವಾ ತಾಯಿಯ ತವರಿನ ಬಂಧು ಮಿತ್ರರೊಡಗೂಡಿ ಸನಿಹದ ದೇವಸ್ಥಾನಕ್ಕೆ ತೆರಳಿ ದೇವರ ಪೂಜೆಯನ್ನು ಮಾಡಿಸಿಕೊಂಡು ಪ್ರಸಾದವನ್ನು ಅವರ ಶಕ್ತ್ಯಾನುಸಾರ ಮಾಡಿಸಿ ನೆರೆದವರಿಗೆಲ್ಲಾ ಹಂಚಿ, ಮುತ್ತೈದೆಯರಿಗೆಲ್ಲಾ ಅರಿಶಿನ ಕುಂಕುಮ ಹೂವು ಮತ್ತು ತಾಂಬೂಲವನ್ನು ವಿತರಿಸಬೇಕು.

## 7. ಅನ್ನಪ್ರಾಶನ

ಗರ್ಭಾದಾನ ಸಂಸ್ಕಾರದ ನಂತರ ಅತ್ಯಂತ ಪ್ರಭಾವಶಾಲಿಯಾದ ಸಂಸ್ಕಾರವೇ ಅನ್ನಪ್ರಾಶನ. ಬೆಳೆಯುತ್ತಿರುವ ಮಗುವಿಗೆ ತಾಯಿಯ ಹಾಲು ಮಾತ್ರ ಸಾಕಾಗುವುದಿಲ್ಲ. ಮಗುವು ಗಟ್ಟಿಯಾದ ಆಹಾರವನ್ನು ತಿಂದು ಜೀರ್ಣಿಸಿಕೊಳ್ಳುವಂತಾದಲ್ಲಿ ಮಾತ್ರ ಬೆಳವಣಿಗೆಯ ವೇಗವನ್ನು ಪಡೆದುಕೊಂಡೀತು. ಈ ಸಂಸ್ಕಾರದ ಮತ್ತೊಂದು ಮಹತ್ವವೆಂದರೆ, ಬೆಳೆವ ಮಗುವು ತಾಯಿಯಿಂದ ಸ್ವತಂತ್ರವಾಗಬೇಕೆನ್ನುವುದು, ಸ್ತನ್ಯಪಾನದ ಅವಲಂಬನೆ



ಕಡಿಮೆಯಾಗಿ ಗಟ್ಟಿಯಾದ ಆಹಾರದ ಸೇವನೆಯನ್ನು ರೂಢಿಸಬೇಕು ಎಂಬುದು. ಗಂಡು ಮಗುವಾದರೆ ಆರು ಅಥವಾ ಎಂಟು ತಿಂಗಳಿಗೆ, ಹೆಣ್ಣು ಮಗುವಾದರೆ ಐದು ಅಥವಾ ಏಳನೇ ಮಾಸದಲ್ಲಿ ಅನ್ನಪ್ರಾಶನವನ್ನು ಆಚರಿಸಬೇಕು. ತಿಳಿದವರು ಹೇಳುವಂತೆ, ಅನ್ನವೇ ಜೀವನದ ಆಧಾರ. ಅನ್ನವೇ ಬ್ರಹ್ಮ. ಉಣ್ಣುವ ಅನ್ನವು ಶುದ್ಧವಿದ್ದಷ್ಟೂ ಆರೋಗ್ಯಕ್ಕೆ ಒಳ್ಳೆಯದು ಅಲ್ಲದೇ ಶುದ್ಧ ಅನ್ನವನ್ನು ಸೇವಿಸುವವರ ಸತ್ವಗಳೂ ಕೂಡ ಶುದ್ಧವಾಗಿರುತ್ತದೆ. ಮಗುವಿಗೆ ಅನ್ನಪ್ರಾಶನವನ್ನು ಸಾತ್ವೀಕ, ಸದ್ವಿಚಾರದ, ದಯಾಪರಳಾದ, ಪ್ರೀತಿ ವಾತ್ಸಲ್ಯಗಳಿಂದ ಕೂಡಿದ ಹಿರಿಯ ಮಹಿಳೆಯ ಕೈಯಿಂದ ಮಾಡಿಸುವುದು ಉತ್ತಮ. ಯಾವ ಆಹಾರವು ರುಚಿಕರವಾಗಿದೆಯೋ, ಸ್ನಿಗ್ಧವಾಗಿದೆಯೋ, ಸ್ಥಿರವಾಗಿದೆಯೋ, ಗುಣದಿಂದ ಮನೋಹರವಾಗಿದೆಯೋ ಅಂತಹವುಗಳನ್ನು ಸೇವಿಸುವುದರಿಂದ ಆಯಸ್ಸು ವೃದ್ಧಿಸಿ, ಸಾತ್ವೀಕ ಬುದ್ಧಿ ವಿಕಸನಗೊಂಡು, ಶರೀರದಲ್ಲಿ ಬಲ ತುಂಬಿ, ಜೀವಕ್ಕೆ ಸುಖವುಂಟಾಗಿ, ಆರೋಗ್ಯಮಯವಾಗಿ ಮಾನಸಿಕ ತೃಪ್ತಿ ಹೊಂದಲೆಂದು ಆಶಿಸಿ ಆಚರಿಸುವ ಸಂಸ್ಕಾರವೇ ಅನ್ನಪ್ರಾಶನ.

**ಮಗುವು ಪ್ರಥಮ ಬಾರಿಗೆ ಹೊಸ್ತಿಲು ದಾಟಿದಾಗ ನೆರವೇರಿಸುವ ಶಾಸ್ತ್ರ :**

ಮಗುವಿಗೆ 5 ತಿಂಗಳು ಕಳೆದು 9 ತಿಂಗಳು ತುಂಬುವುದರೊಳಗೆ ತಾನೇ ತೆವಳುತ್ತಾ ಅಂಬೆಗಾಲನ್ನಿಡಲು ಆರಂಭಿಸುತ್ತದೆ. ಸಾಮಾನ್ಯವಾಗಿ ಆ ವಯಸ್ಸಿನಲ್ಲಿ ಮಗುವನ್ನು ಮನೆಯ ಯಾರಾದರೊಬ್ಬರು ತಮ್ಮ ತೆಕ್ಕೆಯಲ್ಲಿರಿಸಿಕೊಂಡು ಒಂದು ಕೋಣೆಯಿಂದ ಮತ್ತೊಂದು ಕೋಣೆಗೆ ಸಂಚರಿಸುವುದು ಸ್ವಾಭಾವಿಕ ಇಂತಹ ಸಂದರ್ಭದಲ್ಲಿ ತೆವಳುವ ಅಥವಾ ಅಂಬೆಗಾಲನ್ನಿಡುವ ಮಗುವು ತಾನೇ ತಾನಾಗಿ ಯಾರ ಸಹಾಯವೂ ಇಲ್ಲದೆ ಯಾವುದಾದರೂ ಕೋಣೆಯ ಹೊಸ್ತಿಲನ್ನು ದಾಟಿದರೆ ಅದು ಆ ಮಗುವಿನ ಬೆಳವಣಿಗೆಯ ಮಜಲಿನಲ್ಲಿ ಒಂದು ಮಹತ್ವದ ಘಟನೆ ಎಂದು ಗುರುತಿಸ್ಪಡುತ್ತದೆ. ಮತ್ತೊಬ್ಬರ ಸಹಾಯವಿಲ್ಲದೆ ಸ್ವಯಂ ಒಂದು ಎಲ್ಲೆಯನ್ನು ಮೀರುವ ದಾರ್ಷ್ಟ್ಯವು ಮಗುವಿನ ಸುಪ್ತ ಮನಸ್ಸಿನಲ್ಲಿ ಮೊಳಕೆಯೊಡೆದು ದೈಹಿಕವಾಗಿ ಅದನ್ನು ನಿರೂಪಿಸಿದ್ದಕ್ಕೆ ಸಂತಸದಿಂದ ಮನೆಮಂದಿಯೆಲ್ಲ ಹರುಷವನ್ನು ಬಂಧುಮಿತ್ರರಲ್ಲಿ ಹಂಚಿಕೊಂಡು ಆಚರಿಸುವ ಸಡಗರದ ಕಾರ್ಯವೇ ಮಗುವು ಹೊಸ್ತಿಲು ದಾಟಿದ ಶಾಸ್ತ್ರದ ಸಾರಾಂಶ. ಅಲ್ಲದೆ ಹೊಸ್ತಿಲಿನ ಮೇಲ್ಭಾಗದ ಅಧಿದೇವತೆ ರಾಹು ಮತ್ತು ಕೆಳಭಾಗದ ಅಧಿದೇವತೆ

ಕೇತುವಾಗಿದ್ದು ಅವರಿಬ್ಬರ ಆಶೀರ್ವಾದದಿಂದ ಮುಂದೆ ಮಗುವಿಗೆ ಯಾವುದೇ ಬಾಧಕವಿಲ್ಲದೆ ಬೆಳವಣಿಗೆಯು ಆಗಲಿ ಎಂಬ ಅಭಿಲಾಷೆ.

**ಸಿದ್ಧತೆ :**

- ಒಂದು ತಟ್ಟೆಯಲ್ಲಿ ಅರಿಶಿನ–ಕುಂಕುಮ ಅಕ್ಷತೆಯ ಬಟ್ಟಲುಗಳು, ಬಿಡಿ ಹೂ ಸ್ವಲ್ಪ, ಬಿಳಿಹೂವಿನ ಹಾರ ಮಗುವಿನ ಕೊರಳಿಗೆ ಹಾಕಲು.
- ಒಂದು ತಟ್ಟೆಯಲ್ಲಿ 2 ವೀಳ್ಯೆದೆಲೆ, 2 ಅಡಿಕೆ, 2 ಬಾಳೆಹಣ್ಣು (ತಾಂಬೂಲಕ್ಕೆ) 1 ತೆಂಗಿನಕಾಯಿ, ಬೆಂಕಿಪೊಟ್ಟಣ, 2 ಗಂಧದ ಕಡ್ಡಿಗಳು, ಕರ್ಪೂರ ಮತ್ತು ಆರತಿ ತಟ್ಟೆ.
- ಒಂದು ತಟ್ಟೆಯಲ್ಲಿ 21 ಸಣ್ಣ ಸಣ್ಣ ಸಿಹಿ ಕಡುಬುಗಳು.
- ಮಗುವಿಗೆ ತೊಡಿಸಲು ಹೊಸ ಬಟ್ಟೆ.

**ವಿಧಾನ :**

- ಮೊದಲು ಮನೆಯ ಹೆಣ್ಣುಮಗಳು ಅಥವಾ ಸೋದರತ್ತೆಯು ಮನೆಯ ಮುಂಬಾಗಿಲಿನ ಹೊಸ್ತಿಲನ್ನು ಶುಭ್ರವಾಗಿ ತೊಳೆಯಬೇಕು.
- ಹೊಸ್ತಿಲ ಬಲ ಎಡ ಮತ್ತು ಮಧ್ಯಭಾಗದಲ್ಲಿ 2 ಬಾರಿ ಅರಿಶಿನ, 2 ಬಾರಿ ಕುಂಕುಮ ಮತ್ತು ಒಂದೊಂದು ಹೂವನ್ನಿಡಬೇಕು.
- ಗಂಧದ ಕಡ್ಡಿಗಳಿಂದ ಬೆಳಗಿಸಿ ತಾಂಬೂಲವನ್ನು ಚಿವುಟಿ ತೆಂಗಿನ ಕಾಯಿಯನ್ನು ಒಡೆಯಬೇಕು.
- ಕರ್ಪೂರದ ಆರತಿಯನ್ನು ಮಾಡಿ ಮೊದಲು ತಾನು ಪಡೆದು ನಂತರ ಅಲ್ಲಿರುವವರಿಗೆಲ್ಲಾ ಕೊಡಬೇಕು.
- ಹೊಸ್ತಿಲ ಒಳಗೆ ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಒಂದು ಬಿಳಿಯ ವಸ್ತ್ರವನ್ನು ಹಾಸಬೇಕು.
- ಅಮ್ಮ ಮತ್ತು ಮಗುವನ್ನು ಮಣೆಯ ಬಲಗಡೆಯಿಂದ ಕರೆತಂದು ಕೂರಿಸಬೇಕು.
- ಮಗುವಿನ ಸೋದರತ್ತೆಯು ಮಗುವಿನ ಹಣೆಗೆ 2 ಬಾರಿ ಕುಂಕುಮವಿಟ್ಟು ಕೊರಳಿಗೆ ಬಿಳಿಹೂವಿನ ಹಾರವನ್ನು ಹಾಕಬೇಕು.



- ಮಗುವಿನ ತಲೆಯ ಮೇಲೆ ಸಿಹಿ ಕಡುಬುಗಳನ್ನು ಮುಂದೆ ಬರುವಂತೆ ಸುರಿಯಬೇಕು.
- ಕೆಂಪು ನೀರಿನ ಆರತಿಯನ್ನು ಮಾಡಿ ತಿಲಕವಿಟ್ಟು ಮನೆಯ ಮುಂಬಾಗಿಲಿಗೆ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿಯಬೇಕು. ನೆರೆದಿರುವವರಿಗೆಲ್ಲಾ ಅರಿಶಿನ – ಕುಂಕುಮ ಕೊಟ್ಟು ತಾಂಬೂಲವನ್ನು ಕೊಡಬೇಕು.
- ಆ ದಿನದಂದು ಮನೆಯಲ್ಲಿ ತಮ್ಮ ಬಂಧುಬಳಗದವರಿಗೆ ಊಟದ ವ್ಯವಸ್ಥೆ ಮಾಡಬೇಕು.

***ಸೂಚನೆ :*** ಮಗುವು ಮನೆಯ ಹೊಸ್ತಿಲನ್ನು ದೀಪ ಹಚ್ಚುವುದಕ್ಕಿಂತ ಮುಂಚೆ ದಾಟಿದರೆ ಅಂದೆ ಮಾಡಬಹುದು. ಇಲ್ಲವಾದರೆ 3, 5, 9 ನೇ ದಿನದಲ್ಲಿ ಮಾಡಬಹುದು.

**ಶಿಶುವಿಗೆ ಹಲ್ಲು ಮೂಡುವಿಕೆ:**

ಶಿಶುವಿಗೆ ಮೊದಲ ಹಲ್ಲುಗಳು ಸಾಮಾನ್ಯವಾಗಿ ಕೆಳ ಒಸಡಿನಲ್ಲಿ ಮೂಡುವುದು ಸ್ವಾಭಾವಿಕ, ಆದರೆ ಕೆಲವು ಮಕ್ಕಳಿಗೆ ಮೇಲಿನ ಒಸಡಿನಲ್ಲಿ ಹಾಲು ಹಲ್ಲುಗಳು ಮೂಡುತ್ತವೆ. ಆ ಸಂದರ್ಭದಲ್ಲಿ ಮಗುವಿನ ಸೋದರಮಾವನವರಿಗೆ ಅಶುಭ ಎಂಬ ಪ್ರತೀತಿ ಇದೆ. ಹೀಗೆ ಅಶುಭ ಎನಿಸುವ ವಿದ್ಯಾಮಾನವನ್ನು ಶುಭಗೊಳಿಸಲು, ಮೇಲಿನ ಒಸಡಿನಲ್ಲಿ ಹಾಲು ಹಲ್ಲು ಮೂಡಿದ ಮಗುವಿನ ಮುಖವನ್ನು ಸೋದರಮಾವನವರು ನೇರವಾಗಿ ನೋಡದೆ ಮನೆಯವರ ಅನುಕೂಲಕ್ಕೆ ತಕ್ಕಂತೆ ಒಂದು ಶುಭ ದಿನವನ್ನು ನಿಗದಿ ಪಡಿಸಿ ಮಗುವಿನ ತಾಯಿಯ ತವರು ಮನೆಯವರಿಂದ ತಂದಿರುವ ಕೊಬ್ಬರಿ, ಬೆಳ್ಳಿ ಅಥವಾ ಪಂಚಲೋಹದ ಬಟ್ಟಲಿನಲ್ಲಿ ಎಳ್ಳಿನ ಎಣ್ಣೆಯನ್ನು ಸುರಿದು ಬಟ್ಟಲನ್ನು ಮನೆಯ ಮಹಾದ್ವಾರದ ಹೊಸ್ತಿಲಿನ ಮಧ್ಯದಲ್ಲಿ ಇಟ್ಟು ಹೊಸ್ತಿಲಿನ ಒಳಗೆ ತಾಯಿಯು ಮಗುವನ್ನು ಬೋರಲಾಗಿ ಹಿಡಿದುಕೊಂಡು ಮಗುವಿನ ಮುಖದ ಪ್ರತಿಬಿಂಬವು ಬಟ್ಟಲಿನಲ್ಲಿರುವ ಎಣ್ಣೆಯಲ್ಲಿ ಕಾಣುವಂತೆ ನಿಲ್ಲಬೇಕು. ನಂತರ ಮತ್ತೊಬ್ಬರು ತಾಯಿ ಮತ್ತು ಮಗುವಿನ ಮುಂದೆ ಬಟ್ಟೆಯ ಪರದೆಯನ್ನು ಹಿಡಿಯಬೇಕು ಮುಂದೆ ಮಗುವಿನ ಸೋದರಮಾವನವರು ಹೊಸ್ತಿಲಿನ ಆಚೆ ಬದಿಯಲ್ಲಿ ನಿಂತು ಬಟ್ಟಲಿನಲ್ಲಿರುವ ಎಣ್ಣೆಯಲ್ಲಿ ಕಾಣುತ್ತಿರುವ ಮಗುವಿನ ಮುಖದ ಪ್ರತಿಬಿಂಬವನ್ನು ವೀಕ್ಷಿಸಿದ

ನಂತರ ನೇರವಾಗಿ ಮಗುವಿನ ಮುಖವನ್ನು ನೋಡಬೇಕು. ನಂತರ ಬಟ್ಟಲನ್ನು ಮಗುವಿಗೆ ಉಡುಗೊರೆಯಾಗಿ ಕೊಟ್ಟು ಅದರಲ್ಲಿರುವ ಎಣ್ಣೆಯನ್ನು ಸಮೀಪದ ಯಾವುದಾದರೂ ದೇವಸ್ಥಾನಕ್ಕೆ ಅರ್ಪಿಸಬೇಕು.

## 8. **ಚೂಡಾಕರ್ಮ** (ತಲೆಗೂದಲನ್ನು ತೆಗೆಯುವಿಕೆ)

ಮಗುವಿನ ಮೊದಲ, ಮೂರನೇ ಅಥವಾ ಐದನೇ (ಬೆಸ) ವರ್ಷದಲ್ಲಿ ಜರುಗಿಸುವ ಚೂಡಾಕರ್ಮ ಸಂಸ್ಕಾರದಿಂದ ಮಗುವಿಗೆ ಬಲ, ಜ್ಞಾನ, ತೇಜೋವೃದ್ಧಿ ಮತ್ತು ಮುಂಬರುವ ಕೇಶದ ಸೌಂದರ್ಯ ವರ್ಧನೆಯ ಜೊತೆಗೆ ಶಾರೀರಿಕ ಸ್ವಾಸ್ಥತೆ ಲಭ್ಯವಾಗುತ್ತದೆ. ತಲೆಯಲ್ಲಿರುವ ಸುಳಿಯಲ್ಲಿ ಸಮಸ್ತ ನಾಡಿ ಮತ್ತು ಸಂಧಿಗಳ ಸಮಾಗಮವಿರುವುದರಿಂದ ಇದನ್ನು ಮರ್ಮಸ್ಥಾನ, ಬ್ರಹ್ಮರಂಧ್ರ, ಎನ್ನುತ್ತಾರೆ. ಈ ಜಾಗವನ್ನು ಬಲು ಜೋಪಾನವಾಗಿ ಇರಿಸಿಕೊಳ್ಳುವ ದೆಸೆಯಿಂದ ಮುಂಡನಕರ್ಮ ಮಾಡುವುದರ ಮೂಲಕ ಮಾತೃ ಗರ್ಭದಿಂದ ಹೊರ ಬಂದ ಶಿಶುವಿನ ತಲೆಯ ಮೇಲೆ ಇರುವ ಕೂದಲು ಗರ್ಭಾಶಯದ ಮಲದಿಂದ ಬೆಳೆದಿದ್ದದನ್ನು ಸಂಪೂರ್ಣ ತೆಗೆದರೆ ಮುಂಬರುವ ಕೂದಲು ಹುಲುಸಾಗಿ ಬೆಳೆದು ಸುಳಿಗೆ ರಕ್ಷಣೆಯನ್ನು ಒದಗಿಸುತ್ತದೆ.

**ಮಗುವಿನ ಹುಟ್ಟು ಕೂದಲು ಕೊಡುವ ಶಾಸ್ತ್ರ:**

**ಸಿದ್ಧತೆ:**

- ನಿಶ್ಚಿತ ಮಾಡಿದ ಶುಭ ದಿನದಂದು, ಮಗುವಿನ ಹುಟ್ಟು ಕೂದಲನ್ನು ತೆಗೆಯುವ ಕ್ಷೌರಿಕನಿಗೆ ಮಗುವಿನ ತಾಯಿಯ ತವರು ಮನೆಯವರು "ಸೈನ್ಪಾಕ"ದ ಸಾಮಗ್ರಿಗಳನ್ನು (ಸ್ವಯಂ ಪಾಕ) ಕೊಡಬೇಕು.
- ಮಗುವಿನ ತಂದೆಯ ಮನೆಯವರು ತಮ್ಮ ಮನೆದೇವರಿಗೆ ಅಭಿಷೇಕಕ್ಕೆ ಕೊಟ್ಟು ಪೂಜೆ ಮಾಡಿಸಿ ಆಹ್ವಾನಿಸಿದ ಎಲ್ಲಾ ಬಂಧು ಬಳಗದವರಿಗೆ ಊಟದ ವ್ಯವಸ್ಥೆಯನ್ನು ಮಾಡಬೇಕು.
- ಕಾರ್ಯಕ್ರಮಕ್ಕೆ ತವರು ಮನೆಯಿಂದ ತರಬೇಕಾದ ಗಂಟಿನ ಸಾಮಗ್ರಿಗಳು:
- ಕಡ್ಲೆಪಪ್ಪು – 2½ ಸೇರು, ಅರಿಶಿನ ಕುಂಕುಮದ ಪೊಟ್ಟಣಗಳು – ತಲಾ ಎರಡು, ಕೊಬ್ಬರಿ ಬಟ್ಟಲು – 2, ಖರ್ಜೂರ – 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು – 5, ಬಾಳೆಯ ಹಣ್ಣು – 11, ವೀಳೆಯದೆಲೆ – 11, ಅಡಿಕೆ – ಸ್ವಲ್ಪ, ಬಿಡಿ ಹೂವುಗಳು ಸ್ವಲ್ಪ ಮತ್ತು ಕಟ್ಟಿದ ಹೂವು ಒಂದು ಮೊಳ, ತಾಯಿಗೆಂದು ಸೀರೆ ಮತ್ತು ರವಿಕೆ



ಬಟ್ಟೆ, ಮಗುವಿಗೆಂದು ಒಂದು ಜೊತೆ ಹೊಸ ಬಟ್ಟೆ ಹಾಗೂ ಮನೆಯವರ ಅನುಕೂಲಕ್ಕೆ ತಕ್ಕಂತೆ ಒಡವೆಗಳು

- ಸೈನ್ಪಾಕದ (ಸ್ವಯಂ ಪಾಕ) ಸಾಮಗ್ರಿಗಳು: ಅಕ್ಕಿ – 1 ಸೇರು, ತೊಗರಿ ಬೇಳೆ – 1 ಪಾವು, ಖಾರದ ಪುಡಿ – 1 ಪಾವು, ಒಣಮೆಣಸಿನಕಾಯಿ – 100 ಗ್ರಾಂ, ಬೆಲ್ಲ – 1/4 ಕೆ.ಜಿ, ತರಕಾರಿಗಳು (ಬದನೆಕಾಯಿಯನ್ನು ಹೊರತು ಪಡಿಸಿ) ½ ಕೆ.ಜಿ, ವೀಳೆಯದೆಲೆ –2, ಅಡಿಕೆ –2, ಬಾಳೆಹಣ್ಣು –2, ಸ್ವಲ್ಪ ಹೂವು ಮತ್ತು ದಕ್ಷಿಣೆ ಕಾಸು.

**ವಿಧಾನ:**

- ಎಲ್ಲರ ಊಟವಾದ ಬಳಿಕ, ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳಿ ವಸ್ತ್ರವನ್ನು ಹಾಸಬೇಕು.
- ಮಣೆಯ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ಮಣೆಯ ಮುಂದೆ ತವರು ಮನೆಯಿಂದ ತಂದಿರುವ ಸಾಮಗ್ರಿಗಳನ್ನು ಒಂದು ತಟ್ಟೆಯಲ್ಲಿಡಬೇಕು.
- ಜೊತೆಗೆ ವೀಳೆಯದೆಲೆ, ಅಡಿಕೆಯ ತಟ್ಟೆ ಮತ್ತು ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು ಹಾಗೂ ಹೂವಿರುವ ಇನ್ನೊಂದು ತಟ್ಟೆಯನ್ನಿಡಬೇಕು.
- ನಂತರ, ತವರಿನಿಂದ ತಂದಿರುವ ವಸ್ತ್ರ, ಒಡವೆಗಳನ್ನು ಧರಿಸಿರುವ ತಾಯಿ ಮಗುವನ್ನು ಮಣೆಯ ಬಲಭಾಗದಿಂದ ಬರಮಾಡಿಕೊಂಡು ಮಣೆಯ ಮೇಲೆ ಕೂರಿಸಬೇಕು.
- ಆಮೇಲೆ ಮೂವರು ಮುತ್ತೈದೆಯರು ಕ್ರಮವಾಗಿ ಬಂದು ದೀಪಸ್ತಂಭಗಳಿಗೆ, ಮಗುವಿಗೆ ಹಾಗೂ ತಾಯಿಗೆ ಅರಿಶಿನ ಕುಂಕುಮ ಇಟ್ಟು ಹೂವನ್ನು ಕೊಡಬೇಕು
- ಅವರಿಬ್ಬರ ಮುಂದೆ ಇರಿಸಿರುವ ಅರಿಶಿನ ಕುಂಕುಮ ಮತ್ತು ಅಕ್ಷತೆಯಿರುವ ತಟ್ಟೆಯನ್ನು ಒಡ್ಡಿ ಅವರಿಂದ ನಮಸ್ಕಾರ ಮಾಡಿಸಬೇಕು.
- ಆಮೇಲೆ, ತಾಯಿ ಮತ್ತು ಮಗುವು ಸೇರಿ ಕೊಡುವ ತಾಂಬೂಲವನ್ನು ತಮ್ಮ ಸೆರಗಿನಲ್ಲಿ ಸ್ವೀಕರಿಸಬೇಕು.
- ಅಂದ ಹಾಗೇ, ಮೊದಲನೆ ಮುತ್ತೈದೆಯು ತಾಯಿ ಮತ್ತು ಮಗುವಿನ ಕೊರಳಿಗೆ ಹೂವಿನ ಹಾರಗಳನ್ನು ಹಾಕತಕ್ಕದ್ದು.

1 ನಂತರ, ತಾಯಿ ಮತ್ತು ಮಗುವಿಗೆ ಕೆಂಪು ನೀರಿನ ಆರತಿಯನ್ನು ಆರತಿ ಹಾಡಿನೊಂದಿಗೆ ಮಾಡಿ ಅವರಿಬ್ಬರ ಹಣೆಗಳಿಗೆ 2 ಬಾರಿ ತಿಲಕವನ್ನಿಡಬೇಕು.

1 ಆರತಿ ತಟ್ಟೆಯಲ್ಲಿರುವ ಕೆಂಪು ನೀರನ್ನು ಮನೆಯ ಮುಂಬಾಗಿಲಿನ ಮುಂದೆ ಅಡ್ಡಲಾಗಿ ಸುರಿದು ಹಿಂದಿರುಗಿ ಖಾಲಿಯಾದ ಆರತಿ ತಟ್ಟೆಯೊಡ್ಡಿ 2 ವೀಳೆಯದೆಲೆ ಮತ್ತು 2 ಅಡಿಕೆಗಳನ್ನು ದಕ್ಷಿಣೆಯೊಂದಿಗೆ ಪಡೆಯತಕ್ಕದ್ದು.

***ಸೂಚನೆ:*** ಈ ಕಾರ್ಯಕ್ರಮವನ್ನು ಮನೆಯಲ್ಲೋ ಅಥವಾ ಮನೆದೇವರ ಸನ್ನಿಧಿಯಲ್ಲೋ ಬಂಧು ಮಿತ್ರರೊಡಗೂಡಿ ನೆರವೇರಿಸಬಹುದು.

## 9. **ಕರ್ಣವೇಧ** (ಕಿವಿ ಚುಚ್ಚುವುದು)

ಕರ್ಣವೇಧ ಮಾಡುವುದರಿಂದ ಅಂಡಾಶಯದ ಅತೀವೃದ್ಧಿಯನ್ನು ತಡೆಗಟ್ಟಿ ಆರೋಗ್ಯದಿಂದಿರಿಸಲು ಅನುಕೂಲವಾಗಿರುತ್ತದೆ. ಅಲ್ಲದೆ ಮೂರ್ಛಾದಿ ರೋಗಗಳನ್ನು ತಡೆಗಟ್ಟುವ ಶಕ್ತಿ ಇದೆ. ಜೊತೆಗೆ ಮಾನಸಿಕ ಏಕಾಗ್ರತೆ, ಸೂಕ್ಷ್ಮ ಜ್ಞಾನವನ್ನು ಹೊಂದಲು, ಸಮಯೋಚಿತ ವಿಚಾರ ಮಂಥನಕ್ಕೂ ಹಾಗೂ ಶ್ರವಣಶಕ್ತಿಯಲ್ಲಿ ತೀವ್ರತೆಯನ್ನು ತುಂಬುವುದಕ್ಕೆ ಸಹಕಾರಿಯಾಗಿದೆ. ಜೊತೆಗೆ, ಮಗುವಿನ ಕಿವಿಗಳು ಸದಾ ಕಾಲ ಮಂಗಳಕರವಾದ ವಿಚಾರಗಳನ್ನು ಆಲಿಸುವಂತಾಗಲಿ ಎಂಬ ಮಹದಾಶಯ ಕೂಡ ಈ ಸಂಸ್ಕಾರದ್ದು.

**ವಿಧಾನ:**

ಮಗುವು ಹುಟ್ಟಿದ ಮೂರು ಅಥವಾ ಐದನೇ ವರ್ಷದಲ್ಲಿ ಕರ್ಣವೇಧ ಸಂಸ್ಕಾರವನ್ನು ನುರಿತ ಅಕ್ಕಸಾಲಿಗ ಅಥವಾ ವೈದ್ಯರಿಂದ ನೆರವೇರಿಸಬೇಕು.

ಬಾಲಕರಿಗೆ ಮೊದಲಿಗೆ ಬಲ ಕಿವಿ ನಂತರ ಎಡ ಕಿವಿಯನ್ನು, ಬಾಲಕಿಯರಿಗೆ ಮೊದಲು ಎಡ ಕಿವಿ ನಂತರ ಬಲ ಕಿವಿಯನ್ನು ಚುಚ್ಚಿ ಮುರವನ್ನಿಡಬೇಕು.

ಅಕ್ಕಸಾಲಿಗರು ಅಥವಾ ವೈದ್ಯರ ಸಹಾಯದಿಂದ ಕರ್ಣವೇಧ ಸಂಸ್ಕಾರವು ಸುಸೂತ್ರವಾಗಿ ಮುಗಿದ ಬಳಿಕ, ಕರ್ಣವೇಧ ಮಾಡಿದವರಿಗೆ ಕೃತಜ್ಞತೆಯನ್ನು ಸೂಚಿಸುವ ಸಲುವಾಗಿ ತಾಂಬೂಲ ರೂಪದಲ್ಲಿ 2 ಕೊಬ್ಬರಿ



ಬಟ್ಟಲುಗಳು, 2 ವೀಳೆಯದೆಲೆ, 2 ಬೆಲ್ಲದ ಅಚ್ಚುಗಳು, 2 ಅಡಿಕೆ ಮತ್ತು 2 ಬಾಳೆಹಣ್ಣಿನ ಜೊತೆಗೆ ದಕ್ಷಿಣೆಕಾಸನ್ನು ಸಮರ್ಪಿಸಬೇಕು.

## 10. **ಅಕ್ಷರಾಭ್ಯಾಸ** (ವಿದ್ಯಾರಂಭ)

ಮಗುವು ಹುಟ್ಟಿದ ಐದನೇ ವರ್ಷದ ಉತ್ತರಾಯಣ ಕಾಲದಲ್ಲಿನ ಒಂದು ಶುಭ ಮುಹೂರ್ತದಲ್ಲಿ ಅಕ್ಷರಾಭ್ಯಾಸ ಮಾಡಿಸಬೇಕು. ಕಾರಣ, ಆರೋಗ್ಯವಂತ ಮಗುವಿಗೆ ಆ ವಯಸ್ಸಿಗೆ ತಕ್ಕ ಮಟ್ಟಿಗೆ ಬೌದ್ಧಿಕ ಶಕ್ತಿ ಬೆಳೆದಿರುತ್ತದೆ. ವಿದ್ಯೆಯು ಜೀವನದ ಬೆಳಕು. ಜೀವನದ ಎಲ್ಲಾ ಅಂಗಗಳನ್ನು ತಿಳಿದುಕೊಂಡು, ಸಮಾಜದಲ್ಲಿ ಉತ್ತಮ ಬದುಕು ರೂಪಿಸಿಕೊಳ್ಳಲು ತಿಳುವಳಿಕೆ ಎಂಬುದು ಅತ್ಯಗತ್ಯ. ಇಂತಹ ತಿಳುವಳಿಕೆಯನ್ನು ಮೂಡಿಸಿಕೊಳ್ಳಲು ಪ್ರಮುಖವಾಗಿ ಸಹಾಯಕಾರಿಯಾಗಿರುವುದು ವಿದ್ಯೆ. "ಮನೆಯೆ ಮೊದಲ ಪಾಠಶಾಲೆ, ಜನನಿ ತಾನೆ ಮೊದಲ ಗುರುವು" ಎಂಬಂತೆ ಈ ಸಂಸ್ಕಾರವನ್ನು ಮನೆಯಲ್ಲಿನ ಶುಭ್ರ ವಾತಾವರಣದಲ್ಲಿ ತಾಯಿಯೇ ಅಕ್ಷರಾಭ್ಯಾಸ ಮಾಡಿಸುವುದು ವಿಧಿತ. ಇಲ್ಲವಾದಲ್ಲಿ ತಂದೆ ಆನಂತರ ಗುರು ಎಂಬುದನ್ನು ಅರಿತಿರಬೇಕು. ಅಕ್ಷರಾಭ್ಯಾಸದ ಆರಂಭದಲ್ಲಿ ಬರವಣಿಗೆಯ ದೃಢತೆ, ಸಿದ್ಧತೆ ಮತ್ತು ತಲ್ಲೀನತೆಯ ಕಡೆಗೆ ಗಮನ ಹರಿಸಿದಷ್ಟೂ ಮಕ್ಕಳ ವಿದ್ಯಾಭ್ಯಾಸಕ್ಕೆ ಒಳಿತು.

## 11. **ಉಪನಯನ**

ಉಪನಯನವೆಂದರೆ ಗುರುವಿನ ಹತ್ತಿರ ಕರೆದುಕೊಂಡು ಹೋಗುವುದು ಅಂದರೆ, ಅರಿವಿನ ಹತ್ತಿರಕ್ಕೆ ತನ್ಮೂಲಕ ಎತ್ತರಕ್ಕೆ, ಜ್ಞಾನದ ಶಿಖರಕ್ಕೇರುವುದು ಎಂದರ್ಥ. ಉಪನಯನದ ಪ್ರಕ್ರಿಯೆಯಲ್ಲಿ ಮೊದಲಿಗೆ ದೀಕ್ಷೆ ನೀಡುವ ಉಪದೇಶಕನಾದ ಗುರು ಅಥವಾ ತಂದೆ, ಎರಡನೆಯದು ದೀಕ್ಷೆಯ ಸಂದರ್ಭದಲ್ಲಿ ಬೋಧಿಸುವ ವಿಚಾರಗಳು ಮತ್ತು ಪ್ರಜ್ಞಾಪೂರ್ವಕ ಹಿತನುಡಿಗಳು. ಮೂರನೆಯದಾಗಿ ಯಜ್ಞೋಪವೀತಧಾರಣೆ ಮತ್ತು ನಾಲ್ಕನೆಯದಾಗಿ ದೀಕ್ಷಾಬದ್ಧನಾದ ವಟುವು ಮುಂದೆ ನಡೆಸಬೇಕಾದ ಆಚರಣೆಗಳು ಎಂಬ ಪ್ರಮುಖ ನಾಲ್ಕು ಅಂಶಗಳನ್ನು ಒಳಗೊಂಡಿವೆ. ಬಾಲಕನಿಗೆ ಐದು ಅಥವಾ ಎಂಟನೇ ವಯಸ್ಸಿನಲ್ಲಿ ಯಜ್ಞೋಪವೀತ ಧಾರಣೆಯಾದಾಗ ಆತನು ದ್ವಿಜನೆನಿಸಿಕೊಳ್ಳುವನು. ಈ ಅವಸ್ಥೆಯಲ್ಲಿ ಆತನು ವೇದಾಧ್ಯಯನ ಮಾಡಿ ಧಾರ್ಮಿಕಾಚರಣೆಯ ಅಧಿಕಾರ ಹೊಂದುತ್ತಾನೆ.

ವೇದಾಧ್ಯಯನದಿಂದ ವಿಪ್ರನೆನಿಸಿಕೊಂಡು ನಿರಂತರ ವ್ರತಾಚರಣೆಗಳಿಂದ ಚಿತ್ತಶುದ್ಧಿ ಹೊಂದಿದ ನಂತರ ಆತನು ಬ್ರಹ್ಮನಿಷ್ಠನೆನಿಸಿಕೊಳ್ಳುತ್ತಾನೆ. ಕರ್ಮಾನುಷ್ಠಾನಗಳಿಗೆ ಯಜ್ಞೋಪವೀತ ಧಾರಣೆಯು ಅತ್ಯವಶ್ಯಕ. ಇದನ್ನು ದೇವಲಕ್ಷ್ಯ, ಉಪವೀತ ಎಂದೂ ಕರೆಯುವರು. ಉಪವೀತ ಮೂರು ಎಳೆ ದಾರಗಳಿಂದ ಕೂಡಿದ್ದು ಮನುಷ್ಯನ ಮೂರು ಋಣಗಳನ್ನು ಸೂಚಿಸುತ್ತವೆ. ಅವುಗಳ್ಯಾವುವೆಂದರೆ ದೇವ ಋಣ, ಋಷಿ ಋಣ ಮತ್ತು ಪಿತೃ ಋಣಗಳು. ಈ ಮೂರು ಎಳೆಗಳನ್ನು ಒಂದು ಗಂಟಿನಿಂದ ಕಟ್ಟಿ ಅದನ್ನು ಬ್ರಹ್ಮ ಗ್ರಂಥಿ ಅಥವ ಬ್ರಹ್ಮ ಗಂಟು ಎಂದು ಹೆಸರಿಸಿರುವರು. ಈ ಗಂಟೇ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರನ್ನು ಸೂಚಿಸುತ್ತದೆ. ಬ್ರಹ್ಮಚಾರಿಗಳು, ಯತಿಗಳು ಒಂದೇ ಯಜ್ಞೋಪವೀತ ಧರಿಸಬೇಕು. ಸ್ನಾತಕರು, ಗೃಹಸ್ಥರು ಮತ್ತು ವಿಧುರರು ಎರಡು ಯಜ್ಞೋಪವೀತ ಧರಿಸಬೇಕು. ಯಜ್ಞೋಪವೀತ ವನ್ನು ಸಂದರ್ಭಾನುಸಾರ ಬಲಕ್ಕೆ (ದೇವತಾ ಕಾರ್ಯ, ಸಂಧ್ಯಾವಂದನೆ, ಆಚಮನ ಮತ್ತು ಪ್ರಾಣಾಯಾಮ), ಎಡಕ್ಕೆ (ಪಿತೃ ಕಾರ್ಯ, ಶ್ರಾದ್ಧ) ಮತ್ತು ನೀಳವಾಗಿ (ಮನುಷ್ಯಕರ್ಮಗಳಾದ ಶೌಚಾದಿಗಳಲ್ಲಿ) ಧರಿಸಬೇಕು.

## 12. ವೇದಾರಂಭ

ವೇದಗಳಲ್ಲಿ ಹುದುಗಿರುವ ಅಗಾಧವಾದ ಜ್ಞಾನಸಂಪತ್ತನ್ನು ಯಥಾಶಕ್ತಿ ಸಮರ್ಥವಾಗಿ ಬಳಕೆ ಮಾಡಿಕೊಂಡಲ್ಲಿ ಸಮಸ್ತ ಮಾನವಕುಲದ ಏಳ್ಗೆಯು ಸಾಧ್ಯವೆಂಬುದು ಜನಜನಿತವಾಗಿದ್ದ ಕಾಲದಿಂದ, ಪ್ರಸ್ತುತ ಕಾಲಕ್ಕನುಗುಣವಾಗಿ, ಪ್ರಾಥಮಿಕ ಶಾಲೆಯಿಂದ ಸ್ನಾತಕೋತ್ತರ ಪದವೀಧರರಾಗುವವರೆಗಿನ ವಿದ್ಯಾರ್ಥಿ ಜೀವನ ವೇದಾಭ್ಯಾಸದ ಕಾಲವೆನಿಸುತ್ತದೆ. ವಿದ್ಯಾರ್ಥಿ ಪದವನ್ನು ಬಿಡಿಸಿದರೆ, ವಿದ್ಯೆಯ ಅರ್ಥಿ ಅಂದರೆ ವಿದ್ಯೆಯನ್ನು ಗಳಿಸುವವನೆಂಬುದೇ ಆಗಿದ್ದು, ಸದಾಚಾರದಿಂದ ಸಮರ್ಥವಾಗಿ ಜೀವನ ನಿರ್ವಹಿಸುವ ಗುರಿ ಹೊಂದಿದ ಕಲಿಕೆಯ ವಿಷಯವೇನೇ ಇರಲಿ, ಅನಾದಿ ಕಾಲದಿಂದ ಉತ್ತೇಜಿಸಿ ಆಚರಿಸಿಕೊಂಡು ಬಂದಿರುವ ಹನ್ನೊಂದು ಇಂದ್ರಿಯಗಳೆಂದು ಗುರುತಿಸಿ ನಿಗ್ರಹಿಸಬೇಕೆನ್ನುವ ಜ್ಞಾನೇಂದ್ರಿಯಗಳಾದ ಕಿವಿ, ಕಣ್ಣು, ಚರ್ಮ, ನಾಲಿಗೆ, ಮೂಗು ಮತ್ತು ಕರ್ಮೇಂದ್ರಿಯಗಳಾದ ಬಾಯಿ, ಕೈ, ಕಾಲು, ಮೂತ್ರದ್ವಾರ ಮತ್ತು ಗುದದ್ವಾರದ ಜೊತೆಗೆ ಮನಸ್ಸನ್ನು ಹಿಡಿತದಲ್ಲಿರಿಸಿಕೊಂಡು ಅಧ್ಯಯನ ನಡೆಸಿದರೆ ಸಿದ್ಧಿ ಹೊಂದುವುದರಲ್ಲಿ ಯಾವುದೇ ಸಂಶಯವಿಲ್ಲ. ವ್ಯಕ್ತಿಯ



ವಿದ್ಯೆಯ ಪ್ರಗತಿಗೆ ಪ್ರಮುಖವಾಗಿ ಆತನೇ ಜವಾಬ್ದಾರಿಯಾದರೂ, ಕುಟುಂಬ ಮತ್ತು ಸಮಾಜದ ಪ್ರಭಾವವೂ ಅಷ್ಟೇ ಮಹತ್ವವನ್ನು ಹೊಂದಿರುವುದನ್ನು ಮನಗಂಡು ಸೂಕ್ತವಾಗಿ ಪ್ರೋತ್ಸಾಹಿಸಬೇಕು.

## 13. ಕೇಶಾಂತ

ಪ್ರಾಚೀನ ಕಾಲದಲ್ಲಿ ಗುರುಕುಲದಲ್ಲಿನ ವಿದ್ಯಾಭ್ಯಾಸ ಮುಗಿದ ಮೇಲೆ ತಲೆಗೂದಲನ್ನು ತೆಗೆಯುವ ಆಚರಣೆಗೆ ಕೇಶಾಂತವೆಂಬುದು ವಾಡಿಕೆ. ಈಚೆಗೆ, ಕೇಶಾಂತ ಸಂಸ್ಕಾರವು ತನ್ನ ಮಹತ್ವವನ್ನು ಕಳೆದುಕೊಂಡು ಮೂಲೆ ಗುಂಪಾಗಿದೆ. ಆದರೂ ಪ್ರತೀ ವಾರ್ಷಿಕ ಅಥವಾ ಆರು ತಿಂಗಳಿಗೆ ಒಮ್ಮೆ ನಡೆಯುವ ಪರೀಕ್ಷೆಯ ಸಲುವಾಗಿ ಅಧ್ಯಯನದ ಕಡೆಗೆ ಗಮನವಿರಿಸಿದ ಕೆಲ ವಿದ್ಯಾರ್ಥಿಗಳು, ತಲೆ ಹಾಗೂ ಮುಖ ಕ್ಷೌರ ಮಾಡಿಕೊಳ್ಳದೇ ಪರೀಕ್ಷೆಯ ನಂತರ ಕೇಶಾಂತ(?) ಮಾಡಿಕೊಳ್ಳುವುದನ್ನು ಕಾಣಬಹುದಾಗಿದೆ.

## 14. ಸಮಾವರ್ತನ

ಸಮಾವರ್ತನ ಎಂದರೆ ತಿರುಗಿ ಬರುವುದು ಎಂದರ್ಥ. ಬ್ರಹ್ಮಚರ್ಯೆಯನ್ನು ಪಾಲಿಸಿ ಜ್ಞಾನಾರ್ಜಿಸಿಕೊಂಡು ಗೃಹಸ್ಥಾಶ್ರಮಕ್ಕೆ ಮರಳಿ ಬರುವಿಕೆ ಮತ್ತು ಯೌವ್ವನಾವಸ್ಥೆಯಲ್ಲಿರುವವನು ವಿವಾಹಕ್ಕೆ ಸಿದ್ಧನೆಂಬುದು ಗಮನಾರ್ಹ. ಇಂದಿನ ಕಾಲದಲ್ಲಿ ಈ ಸಂಸ್ಕಾರವು ಮಹತ್ವಪೂರ್ಣವೆನಿಸದೆ ಇರಲು ಮುಖ್ಯ ಕಾರಣ ವಿದ್ಯಾರ್ಥಿಗಳು ಜ್ಞಾನಕ್ಕಿಂತಲೂ ವೃತ್ತಿ ಶಿಕ್ಷಣಕ್ಕೆ ಮಹತ್ವ ನೀಡುವುದೇ ಆಗಿದೆ. ಪ್ರಸ್ತುತ ವಿವಾಹದ ದಿನ, ಬ್ರಹ್ಮಚಾರಿಯು ಕಾಶೀಯಾತ್ರೆಗೆ ಹೊರಟಂತೆ ಅಣಕು ಆಚರಿಸಿ, ಆತನನ್ನು ಕರೆತಂದು ಪಾದ ಪೂಜೆ ಮುಗಿಸಿ ಗೃಹಸ್ಥಾಶ್ರಮಕ್ಕೆ ಸೇರಿಸುವ ಪದ್ಧತಿಯು ಪ್ರಚಲಿತವಾಗಿದೆ.

## 15. ವಿವಾಹ

ಮನುಷ್ಯನ ಬದುಕು ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾನಪ್ರಸ್ಥ ಹಾಗೂ ಸನ್ಯಾಸಗಳೆಂಬ ನಾಲ್ಕು ಆಶ್ರಮಗಳಲ್ಲಿ ವಿಭಕ್ತವಾಗಿದೆ. ಮನುಷ್ಯನ ಜೀವನವು ವಿಕಾಸಗೊಳ್ಳಲು ಈ ನಾಲ್ಕು ಆಶ್ರಮಗಳು ಅತ್ಯವಶ್ಯವಾದರೂ, ಗೃಹಸ್ಥಾಶ್ರಮವು ಇವುಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದದ್ದು. ಏಕೆಂದರೆ, ಮಿಕ್ಕೆಲ್ಲಾ ಮೂರು ಆಶ್ರಮಗಳು ಗೃಹಸ್ಥಾಶ್ರಮವನ್ನು ಆಶ್ರಯಿಸಿ ಬೆಳೆಯಬೇಕಾಗಿದೆ. ಮನುಷ್ಯ ಜೀವನದ ಯಾವತ್ತೂ ಕಾರ್ಯರೂಪಗಳ ಗುರಿಗಳನ್ನು ನಾಲ್ಕು ವರ್ಗಗಳಾಗಿ

ವಿಂಗಡಿಸಬಹುದು. ಅವುಗಳೆಂದರೆ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ. ಇವುಗಳಲ್ಲಿ ಧರ್ಮ, ಅರ್ಥ ಮತ್ತು ಕಾಮಗಳೆಂಬ ತ್ರಿವಿಧ ಪುರುಷಾರ್ಥಗಳ ಸಾಧನೆಗೆ ಪತ್ನಿಯು ಅತ್ಯವಶ್ಯಕ ಎಂದು ಕಾಲದಿಂದಲೂ ನಿರೂಪಿಸಲ್ಪಟ್ಟಿದೆ. ಈ ಕಾರಣದಿಂದಲೇ ವಿವಾಹವು ಇತರೆಲ್ಲಾ ಸಂಸ್ಕಾರಗಳಿಗಿಂತ ಅತೀ ಮಹತ್ವವೆನಿಸುವುದು. ಅಲ್ಲದೇ ಮಾನವನ ಮೂಲ ಪ್ರವೃತ್ತಿಗಳಾದ ಹಸಿವು, ನೀರಡಿಕೆ, ನಿದ್ರೆ ಮೊದಲಾದವುಗಳಂತೆ ಕಾಮವು ಸಹ ಪ್ರಬಲವಾಗಿದುದ್ದರ ಪರಿಣಾಮವೇ ಸಂತಾನ ರಕ್ಷೆಯೊಂದಿಗೆ ಸಂತಾನಾಭಿವೃದ್ಧಿಗೆ ಪ್ರಾಧಾನ್ಯತೆಯನ್ನೂ ನೀಡಲಾಗಿದೆ. ಕುಟುಂಬವೆನ್ನುವ ಭವನಕ್ಕೆ ವಿವಾಹವು ಅಸ್ತಿವಾರವು ಅಲ್ಲದೇ ಮಹಾದ್ವಾರವೂ ಕೂಡ. ಇದು ಕೇವಲ ಸಾಮಾಜಿಕ ಅವಶ್ಯಕತೆಯಾಗಿರದೇ ಯಜ್ಞವೆಂಬ ಭಾವನೆಯಲ್ಲಿ ಧಾರ್ಮಿಕ ಕರ್ತವ್ಯವೂ ಕೂಡ ಇದಾಗಿದ್ದು ಪಿತೃಋಣವನ್ನು ತೀರಿಸಲು ಶಕ್ಯವಾಗಿದೆ.

**ಪ್ರಾಚೀನರು ಉಲ್ಲೇಖಿಸಿರುವಂತೆ ವಿವಾಹದ ವಿಧಗಳು 8, ಅವುಗಳ್ಯಾವುವೆಂದರೆ;**

**ಬ್ರಾಹ್ಮ ವಿವಾಹ :** ಕನ್ಯೆಯ ಮಾತಾಪಿತೃಗಳು ಸ್ವಯಂಪ್ರೇರಿತರಾಗಿ ವರನ ಪೂರ್ವಾಪರಗಳನ್ನು ಅರಿತು, ಸರಳವಾಗಿ ವರನಿಗೆ ತಮ್ಮ ಪುತ್ರಿಯನ್ನು ಕನ್ಯಾದಾನ ಮಾಡುವಿಕೆ.

**ದೈವ ವಿವಾಹ :** ಪೂಜೆ, ವೇದಪಾಠ ಮತ್ತು ಯಜ್ಞಯಾಗಾದಿಗಳನ್ನು ಪಾಲಿಸುತ್ತಿರುವ ವರನಿಗೆ, ಕನ್ಯೆಯ ಮಾತಾಪಿತೃಗಳು ಸಾಲಂಕೃತಳಾದ ವಧುವನ್ನು ಕನ್ಯಾದಾನ ಮಾಡುವಿಕೆ.

**ಆರ್ಷ ವಿವಾಹ :** ವರನ ಕಡೆಯಿಂದ ಒಂದು ಜೋಡಿ ಗೋಮಿಥುನವನ್ನು ಪಡೆದು ಶಾಸ್ತ್ರಗಳಲ್ಲಿನ ವಿಧಿ ಪ್ರಕಾರ ತಮ್ಮ ಪುತ್ರಿಯ ಕನ್ಯಾದಾನ ಮಾಡುವಿಕೆ.

**ಪ್ರಾಜಾಪತ್ಯ ವಿವಾಹ :** ಯಾಗಶಾಲೆಯಲ್ಲಿ ಯೋಗ್ಯ ವಧುವರರಿಂದ ಪ್ರತಿಜ್ಞೆ ಮಾಡಿಸಿ, ನೀವಿಬ್ಬರು ಸುಖವಾಗಿ ಬಾಳಿರಿ ಎಂದು ಹರಸಿ ಮದುವೆ ಮಾಡುವಿಕೆ.

**ಅಸುರ ವಿವಾಹ :** ವರನ ಮನೆಯವರು ತಮ್ಮ ಶಕ್ತ್ಯಾನುಸಾರ ಕನ್ಯೆಯ ಮಾತಾಪಿತೃಗಳಿಗೆ, ಸಂಬಂಧಿಕರಿಗೆ ಮತ್ತು ಕನ್ಯೆಗೆ ಧನವನ್ನು ನೀಡಿ ಮದುವೆ ಮಾಡಿಕೊಳ್ಳುವಿಕೆ.

**ಗಾಂಧರ್ವ ವಿವಾಹ :** ವಧುವರರು ಪರಸ್ಪರ ಒಪ್ಪಿ ಸಂಯೋಗವಾಗಿರುವುದು.



**ರಾಕ್ಷಸ ವಿವಾಹ :** ಕನ್ಯೆಯನ್ನು ಬಲಾತ್ಕಾರವಾಗಿ ಕರೆದುಕೊಂಡು ಹೋಗಿ ಕೂಡುವುದು.

**ಪೈಶಾಚ ವಿವಾಹ :** ಮೈಮರೆತ ಅಥವಾ ಜ್ಞಾನ ತಪ್ಪಿಸಿದ ಕನ್ಯೆಯನ್ನು ಕರೆದುಕೊಂಡು ಹೋಗಿ ಕೂಡುವುದು.

**ವಿವಾಹ ಮಹೋತ್ಸವದಲ್ಲಿ ಪಾಲಿಸುವ ವಿಧಿವಿಧಾನಗಳ ಹಿನ್ನೆಲೆ:**

ವಿವಾಹ ವಿಧಿಯಲ್ಲಿ ಆಚರಿಸುವ ಆಚರಣೆಗಳೆಲ್ಲವು ಬ್ರಹ್ಮಚಾರಿಯು ಗೃಹಸ್ಥನಾಗುವಲ್ಲಿ ಬೇಕಾಗುವ ಪೂರ್ವಸಿದ್ಧತೆಗಳನ್ನು ಒಳಗೊಂಡಿದ್ದು, ಒಂದು ಶುದ್ಧ ನೈತಿಕ ನೆಲೆಗಟ್ಟನ್ನು ಅರ್ಥೈಸುವಲ್ಲಿ ವೈದೀಕದ ಪಾತ್ರವೂ ಪ್ರತೀ ಹೆಜ್ಜೆಯಲ್ಲಿ ಮಹತ್ವಪೂರ್ಣ ಸಂದೇಶಗಳನ್ನು ರವಾನಿಸುತ್ತಾ ಸಾಮಾಜಿಕ ಜೀವನದ ನೆಲೆಗಟ್ಟಿನ ಭದ್ರತೆಗಾಗಿ ಮಾಡುವ ತರಬೇತು ಅಥವಾ ಸಮಾಜದಲ್ಲಿ ಬದುಕುವ ರೀತಿಯ ಮುನ್ಸೂಚನೆಗಳು ಎನ್ನಬಹುದಾಗಿದೆ.

ಇನ್ನು, ವಿವಾಹ ಸಮಾರಂಭದಲ್ಲಿ ಪಾಲ್ಗೊಳ್ಳುವವರ ಮನೋಭಿಲಾಷೆಗಳನ್ನು ಅವಲೋಕಿಸಿದಾಗ ಗೋಚರವಾಗುವ ಸಂಗತಿಗಳೆಂದರೆ; ಏನೇ ವಿದ್ಯಾವಂತಳು, ಬುದ್ಧಿವಂತಳೂ ಆದ ಕನ್ಯೆಯು ತಾನು ವಿವಾಹವಾಗುವ ವರನ ರೂಪಕ್ಕೆ ಪ್ರಥಮ ಆದ್ಯತೆ ನೀಡುವ ಕಾರಣ ವಯೋಧರ್ಮ ಎನ್ನಬಹುದು. ಹಾಗೆಯೇ ಏನೇ ವಿದ್ಯಾವಂತನು, ಬುದ್ಧಿವಂತನೂ ಆದ ವರನು ತಾನು ವಿವಾಹವಾಗುವ ವಧುವಿನ ರೂಪಕ್ಕೆ ಪ್ರಥಮ ಆದ್ಯತೆ ನೀಡುವ ಕಾರಣ ಕೂಡ ವಯೋಧರ್ಮವೇ. ಹಡೆದ ತಾಯಿಯು, ತನ್ನ ಕರುಳ ಬಳ್ಳಿಗಳಾದ ಮಕ್ಕಳು ಉಂಡುಟ್ಟು ಸುಖವಾಗಿರಲೆಂದು ಬಯಸುತ್ತಾ ವಧುವರರ ಮುಂದಿನ ಜೀವನದ ಅನ್ನದಾಧಾರಕ್ಕೆ ಅನುಕೂಲವಾಗುವಂತಹ ಸ್ಥಿತಿಯ ಬಗ್ಗೆ ಚಿಂತಿಸುತ್ತಾಳೆ. ತಂದೆಯಾದವನು, ವರನ ವಿದ್ಯಾರ್ಹತೆ, ಜ್ಞಾನ ಹಾಗೂ ವ್ಯಾವಹಾರಿಕಾ ಜ್ಞಾನಗಳ ಬಗ್ಗೆ ಮಹತ್ವ ನೀಡುತ್ತಾನೆ. ಬಂಧು ಬಾಂಧವರುಗಳೋ ವಧುವರರ ಕುಲದ ಬಗ್ಗೆ ಚಿಂತಿಸುತ್ತಾರೆ. ಇನ್ನು ಮದುವೆಗೆ ಆಗಮಿಸಿದ ಮಿತ್ರರು ಮತ್ತು ಅತಿಥಿಗಳಿಗೆ ವಧುವರರ ವಿದ್ಯೆ, ಐಶ್ವರ್ಯ, ಕುಲ, ಗೋತ್ರಾದಿಗಳಿಂದ ಆಗಬೇಕಾದರೂ ಏನು? ಆದ್ದರಿಂದ, ಆ ಸಮಯಕ್ಕೆ ಮಾಡುತ್ತಿರುವ ಅತಿಥಿ ಸತ್ಕಾರ ಎಂಥದ್ದು? ಎಂಬುದನ್ನು ಗಮನಿಸುತ್ತಾ ಮೃಷ್ಟಾನ್ನ, ಭಕ್ಷ್ಯ ಭೋಜ್ಯಾದಿಗಳ ಕಡೆಗೆ ಮಹತ್ವವನ್ನು ಕೊಡುತ್ತಾರೆ.

ಹೀಗೆ, ಸಮಾಜದ ವ್ಯಕ್ತಿಗಳಲ್ಲಿ ಅವರವರದೇ ಆದ ಚಿಂತನೆಗಳು ಬೇರೆ ಬೇರೆಯೇ ಆಗಿರುವುದು ಸರ್ವವಿಧಿತ. ಆದುದರಿಂದ ಇಂತಹ

ಭಾವ ವೈವಿಧ್ಯತೆಯು ಹಾಸುಹೊಕ್ಕಾಗಿರುವ ಸಮಾಜದ ನಡುವೆ ಒಮ್ಮತದ ನಿಲುವಿನೊಂದಿಗೆ, ಜೀವನದ ವಾಸ್ತವತೆಯ ಕಡೆಗೆ ಕರೆದೊಯ್ಯುವ ಸಾಧನಗಳೇ ವಿವಾಹ ಸಂಸ್ಕಾರದ ಒಳಭೇದಗಳಾದ ವಿಧಿ ವಿಧಾನಗಳು.

***ಸೂಚನೆ :*** ವಿವಾಹ ನಿಶ್ಚಯ ಮಾಡುವ ಮೊದಲು ಗಂಡು ಹೆಣ್ಣಿನ ಜಾತಕಗಳನ್ನು ಸೂಕ್ತ ಪುರೋಹಿತರ ಮಾರ್ಗದರ್ಶನದಲ್ಲಿ ಪರಿಶೀಲಿಸಿ 12 ಕೂಟಗಳಾದ, ದಿನಕೂಟ, ಗಣಕೂಟ, ಮಾಹೇಂದ್ರ ಕೂಟ, ಸ್ತ್ರೀ ದೀರ್ಘಕೂಟ, ಯೋನಿಕೂಟ, ರಾಶಿಕೂಟ, ಗ್ರಹ ಮೈತ್ರಕೂಟ, ವಶ್ಯಕೂಟ, ರಜ್ಜುಕೂಟ, ವೇದಕೂಟ, ವರ್ಣಕೂಟ ಮತ್ತು ನಾಡಿಕೂಟದ ಹೊಂದಾಣಿಕೆಗೆ ತಕ್ಕಂತೆ ಲಭ್ಯವಾಗುವ ಗುಣಗಳ ಸಂಖ್ಯೆಯ ಮೊತ್ತವು 21ಕ್ಕೂ ಮೀರಿ 36ರವರೆಗೆ ದೊರಕಿದರೆ ಅವರಿಬ್ಬರ ದಾಂಪತ್ಯದ ಜೀವನವು ಸುಖಮಯವಾಗಿರುವುದೆಂಬ ನಂಬಿಕೆ ಇದೆ.

**ವಿವಾಹ ಸಮಾರಂಭದಲ್ಲಿ ಪಾಲಿಸುವ ವಿಧಿ ವಿಧಾನಗಳು :**

**ವಾಗ್ದಾನ** ವಿಧಿಯ ಉದ್ದೇಶ, ವಧುವರರ ತಾಯಿ, ತಂದೆಯರು ಪರಸ್ಪರ ಎದುರಿಗೆ ಕುಳಿತು ವಧುವಿನ ಪೋಷಕರು, ವರನ ಪೋಷಕರನ್ನು ಉದ್ದೇಶಿಸಿ, ಪತಿತಳಲ್ಲದ, ಪವಿತ್ರವಾದ ಕನ್ಯೆಯನ್ನು ನೋಡುವ ವಿಧಿಗನುಸಾರವಾಗಿ ನಮ್ಮ ಪುತ್ರಿಯನ್ನು ನೋಡಿ, ನಿಮ್ಮ ವಂಶದ ಉದ್ಧಾರಕ್ಕಾಗಿ ಆಕೆಯನ್ನು ಸ್ವೀಕರಿಸಿ ಮತ್ತು ಸಕಲ ಸುಖ, ಸಂತೋಷಗಳು ನಿಮ್ಮ ಕುಟುಂಬದಲ್ಲಿ ನೆಲೆಸಲಿ ಎಂದು ಆಶಿಸುವುದು. ಹಾಗೆಯೇ ವರನ ಪೋಷಕರು, ವಧುವಿನ ಪೋಷಕರನ್ನುದ್ದೇಶಿಸಿ, ಅವರ ಮಾತಿಗೆ ಒಪ್ಪಿಗೆ ಸೂಚಿಸಿದ ಹಾಗೂ ಪಾಲಿಸುವ ಬಗ್ಗೆ ಮಾತು ಕೊಡುವ ವಿಧಿಯೇ ವಾಗ್ದಾನ. ಇದರ ಭಾವಾರ್ಥ, ಸಮಾಜದಲ್ಲಿನ, ಇತರರ ಚಾಡಿ ಮಾತುಗಳಿಗೆ ಕಿವಿಗೊಟ್ಟು ಸಂಸಾರವನ್ನು ಹಾಳು ಮಾಡಿಕೊಳ್ಳಬಾರದು ಎಂಬುದಾಗಿದೆ.

**ವರಪೂಜೆ**ಯಲ್ಲಿ ವರನನ್ನು ಗೌರವಿಸುವಿಕೆ ಮತ್ತು ಇದರ ಹಿನ್ನೆಲೆಯಲ್ಲಿ ವರನ ಮತ್ತು ವಧುವಿನ ಮನೆತನಗಳ ಯೋಗ್ಯತಾ ಪರಾಮರ್ಶೆಯಾಗುವುದರ ಜೊತೆಗೆ ಎರಡೂ ಮನೆತನಗಳ ನಡುವೆ ಉತ್ತಮ ಮನೋಬಾಂಧವ್ಯ ಬೆಳೆಯಲು ಅನುಕೂಲವಾಗುತ್ತದೆ.

**ಧಾರಾಕಳಸ** ಸ್ಥಾಪಿಸಿ, ಅದರ ಮೇಲೆ ವಧುವರರ ಕೈಗಳನ್ನು ಒಂದರಲ್ಲಿ ಒಂದನ್ನು ಇರಿಸಿ, ಅದಕ್ಕೆ ಧಾರೆ ಎರೆಯಲು ನೀರು ಮಿಶ್ರಿತ ಹಾಲನ್ನು ಉಪಯೋಗಿಸುವ ದೃಷ್ಟಿಕೋನವೆಂದರೆ, ನೀರಿನ ಪಾವಿತ್ರ್ಯತೆ ಮತ್ತು ಹಾಲಿನ



ಮಧುರ ಗುಣಗಳೊಂದಿಗೆ ಧಾರೆ ಎರೆಯುವವರ ಮನೋಸ್ಥಿತಿಯನ್ನು ಬಿಂಬಿಸಿದರೆ, ವಧುವರರ ಮನಸ್ಥಿತಿಯೂ ಹೀಗೆ ನೀರೊಳಗೆ ಬೆರೆತ ಹಾಲಿನಂತೆ, ಸಮರಸ, ಸಮರತಿಯಾಗಿ ಬಾಳಿರೆಂಬ ಶುಭ ಹಾರೈಕೆಯು ಇಲ್ಲಿದೆ.

**ಪಂಚಕಳಸ**ಗಳನ್ನು ಪೂಜಿಸುವ ಸಾಂಕೇತಿಕವಾದರೋ ಪಂಚ ತತ್ವಗಳಾದ ಪೃಥ್ವಿ, ಜಲ, ಅಗ್ನಿ, ವಾಯು ಮತ್ತು ಆಕಾಶಗಳೆಂಬ ಪಂಚಮಹಾಭೂತಗಳ ಸಾಕ್ಷಿಯಾಗಿ ಕಾರ್ಯ ನೆರವೇರುತ್ತಿದೆ ಎಂಬುವುದು.

**ಗೌರೀಪೂಜೆ**ಯನ್ನು ವಧುವಿನ ಮೂಲಕ ಮಾಡಿಸುವ ಉದ್ದೇಶವಾದರೂ, ಜಗಜ್ಜನನಿಯಾದ ಗೌರಿಯು ವಧುವರರ ಕುಟುಂಬಕ್ಕೆ ಸಕಲ ಸೌಭಾಗ್ಯವನ್ನಿತ್ತು ಸದಾ ಕಾಪಾಡಲೆಂದು ಮಾಂಗಲ್ಯಕ್ಕೆ ಗೌರಿಯನ್ನು ಅಧಿದೇವತೆಯನ್ನಾಗಿಸಿರುವುದು.

**ಸಭಾಪೂಜೆ** ಎನ್ನುವುದು ವಿವಾಹ ಸಮಾರಂಭಕ್ಕೆ ಶುಭ ಕೋರಲು ಆಗಮಿಸಿರುವ ಬಂಧು ಮಿತ್ರರೆಲ್ಲರೂ ದೈವಸಮಾನರೆಂದು ಭಾವಿಸಿ ಅವರೆಲ್ಲರನ್ನು ವಂದಿಸಿ ಗೌರವಿಸುವ ಸಂಕೇತ.

**ಸಂಬಂಧ ಮಾಲಿಕೆ**ಯ ಅರ್ಥವೆಂದರೆ, ಹೂವು ಮತ್ತು ಗಂಧದಂತೆ ಪರಸ್ಪರರ ಮನ ಒಪ್ಪಿದುದ್ದರ ಸಂಕೇತದ ಜೊತೆಗೆ ಹೂವಿನಲ್ಲಿರುವ ಮಕರಂದವು ಹೇಗೆ ಹೂವಿನೊಂದಿಗೆ ಒಂದಕ್ಕೊಂದು ಅಂಟಿಕೊಂಡು ಜೊತೆಯಾಗಿರುವುದೋ ಹಾಗೆಯೇ ವಧುವರರು ಒಬ್ಬರನ್ನೊಬ್ಬರು ಅಗಲದೆ ಸಹಜೀವನ ನಡೆಸಲಿ ಎಂಬ ಸದುದ್ದೇಶ. ಜೊತೆಗೆ ಹೂವಿನ ಸೊಗಸು ಮತ್ತು ಮಕರಂದದ ಪರಿಮಳವು ಎಲ್ಲೆಲ್ಲೂ ಪಸರಿಸುವುದೋ ಹಾಗೆ ದಂಪತಿಗಳ ಜೀವನದ ಸುಖೀ ಸಂಬಂಧದ ವಿಚಾರವು ಎಲ್ಲೆಡೆ ತಲುಪಲಿ ಎನ್ನುವ ಆಶಯ.

**ಅಕ್ಷತಾರೋಪಣ**ದ ಮಹತ್ತರವಾದ ಉದ್ದೇಶ, ಅ–ಕ್ಷತ, ಅಂದರೆ ನಾಶವಾಗದಿರುವಿಕೆ ಎಂದರ್ಥ. ವಧುವರರ ಸಂಬಂಧ ಅನವರತ ನಾಶವಾಗದೇ ಇರಲಿ ಎಂದು ಹರಸಿ ಅಕ್ಷತೆಯೊಂದಿಗೆ ಆಶೀರ್ವಾದ ಮಾಡುವಿಕೆ. ಅಕ್ಷತೆಯಲ್ಲಿರುವ ಅಕ್ಕಿಯನ್ನು ಅನ್ನಬ್ರಹ್ಮನೆಂದೂ, ಸಕಲ ಚರಾಚರಗಳಿಗೂ ಅನ್ನವೇ ಆಧಾರವೆಂದೂ, ಅನ್ನವೇ ಸಕಲ ಜೀವೋತ್ಪತ್ತಿಗೂ ಕಾರಣವೆಂದೂ ಮತ್ತು ಉತ್ಪತ್ತಿಯಾದ ಜೀವಿಗಳಿಗೆ ಅನ್ನವೇ ಪುನಃ ಆಧಾರವಾಗಿರುವುದರಿಂದ ಇದಕ್ಕೆ ಅಕ್ಷತೆಯೆಂತಲೂ ಮಾನ್ಯತೆ ಪಡೆದಿದೆ.

**ಬ್ರಹ್ಮ ಬಂಧನ**ವು ವಧುವರರ ಸೆರಗನ್ನು ಒಟ್ಟಿಗೆ ಸೇರಿಸಿ ಬಂಧಿಸುವ ವಿಧಿ. ವಧುವರರಾದ ನೀವು, ಸಮಾಜದ ಮಧ್ಯೆ ಪರಸ್ಪರ ಒಪ್ಪಿಕೊಂಡು ಇಂದು ಒಂದಾಗಿದ್ದೀರಿ, ಸಮಾಜದ ಒಪ್ಪಿಗೆಯೇ ದೈವದೊಪ್ಪಿಗೆ, ಇದು ವಿಧಿ ನಿಯಾಮಕ ಹಾಗೂ ಬ್ರಹ್ಮನ ಸಂಕಲ್ಪ. ಆದುದರಿಂದ ನಿಮ್ಮ ಬದುಕು ಅಗಲದಿರಲಿ ಎಂದು ಹಾಕುವ ಗಂಟು. ವರನ ಮೇಲಿನ ಉತ್ತರೀಯ ಮತ್ತು ವಧುವಿನ ಮೇಲಿನ ಸೀರೆಯ ಸೆರಗು ಅರ್ಥಾತ್ ಮೇಲುಹೊದಿಕೆ, ಸ್ಪಷ್ಟೀಕರಿಸುವ ಸಂಕೇತವೆಂದರೆ, ಜೀವನದಲ್ಲಿ ಸಮಾಜವು ಪ್ರತೀ ವ್ಯಕ್ತಿಯ ಮೇಲೆ ಹೊದಿಸಿದ ನಿಯಮಾವಳಿ ಹಾಗೂ ಕಟ್ಟುಪಾಡುಗಳು. ಆ ನಿಯಮಾವಳಿಗಳನ್ನು ಜೊತೆಯಾಗಿದ್ದು ಪರಸ್ಪರ ಸಹಕರಿಸಿಕೊಂಡು ಬದ್ಧತೆಯಿಂದ ಪಾಲಿಸಬೇಕು ಎಂಬ ಆಶಯ. ಇನ್ನು ಅಕ್ಷತೆಯು ಧರ್ಮದ ಸಂಕೇತವಾದರೆ, ಅಡಿಕೆಯು ಅರ್ಥದ ಸಂಕೇತ ಮತ್ತು ಅರಿಶಿನ ಆಕಾಂಕ್ಷೆ (ಕಾಮ)ಗಳ ಸಂಕೇತವಾಗಿದ್ದೂ, ಇಂತಹ ತ್ರಿವಿಧ ಪುರುಷಾರ್ಥಗಳಾದ ಧರ್ಮ, ಅರ್ಥ ಮತ್ತು ಕಾಮಗಳು ಸಮಾಜದೊಡನೆ ಸಂಬಂಧಿತವಾಗಿದ್ದು ಶ್ರೀರಕ್ಷೆಯ ಒಳಗಿರಬೇಕು ಎಂಬ ಧ್ಯೇಯ.

**ಪಾಣಿಗ್ರಹಣ**ದಲ್ಲಿ ವರನು ವಧುವಿನ ಕೈಯನ್ನು ಹಿಡಿಯುತ್ತಾನೆ. ಅಂದರೆ, ವಧುವು ಶಕ್ತಿದೇವತೆಯ ಸಂಕೇತ ಆಗಿರುವುದರಿಂದಲೂ, ಪುರುಷನು ಜೀವನದ ಮಹಾರಥವನ್ನು ಎಳೆಯುವುದಕ್ಕೆ ಅವಶ್ಯಕವಾದ ಶಕ್ತಿಯ ಕೈ ಹಿಡಿದ ಮೇಲೆ ಆತನು ಬಲಶಾಲಿಯಾಗಿ ಜವಾಬ್ದಾರಿಗಳನ್ನು ನಿಭಾಯಿಸುವಲ್ಲಿ ಶಕ್ತನಾಗುತ್ತಾನೆ ಎಂದರ್ಥ. ಅಲ್ಲದೇ ಪತ್ನಿಯ ಕೈ ಹಿಡಿಯುವುದೆಂದರೆ, ಧರ್ಮದ ಕೈಯನ್ನು ಹಿಡಿದಂತೆಯೇ ಸರಿ. ಆದ್ದರಿಂದಲೇ ವಧುವು ಇನ್ನು ಮುಂದೆ ಪತಿಯ ಧರ್ಮಪತ್ನಿಯಾಗುತ್ತಾಳೆ. ಪುರುಷನು ಸಮಾಜದಲ್ಲಿ ಶ್ರೇಷ್ಠನೆಂದು ಪರಿಗಣಿತನಾಗುವುದೇ ಪಾಣಿಗ್ರಹಣದ ಫಲದಿಂದ ಎಂಬ ನಂಬಿಕೆಯಿದೆ.

**ವರ ಪ್ರತಿಜ್ಞಾ**"ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಿತವ್ಯಾ ತ್ವಯೇಯಮ್" ಅಂದರೆ ಧರ್ಮದಿಂದಾಗಲೀ, ದ್ರವ್ಯ(ಅರ್ಥ)ದಿಂದಾಗಲೀ ಮತ್ತು ಕಾಮದಿಂದಾಗಲೀ ನಮ್ಮ ಪುತ್ರಿಯನ್ನು ವಂಚಿಸಬೇಡ ಎಂಬ ಪೋಷಕರ ಮನವಿಗೆ ವರನು "ನಾತಿ ಚರಾಮಿ" ಎಂದು ಮೂರು ಸಲ ಪ್ರತಿಜ್ಞೆ ಮಾಡುವುದು.



**ಮಾಂಗಲ್ಯಧಾರಣ** ವಿಧಿಯಲ್ಲಿ ಮಂಗಳಸೂತ್ರವನ್ನು ವರನಿಂದ ಪೂಜಿಸಿ, ಗುರುಹಿರಿಯರೇ ಆದಿಯಾಗಿ ಆಗಮಿಸಿದ ಸಭಿಕ ಸಜ್ಜನರಿಂದ ಆ ಮಂಗಳಸೂತ್ರಕ್ಕೆ ಆಶೀರ್ವಾದವನ್ನು ಪಡೆದು ವರನ ಕೈಯಿಂದ ವಧುವಿನ ಕೊರಳಿಗೆ ಕಟ್ಟಿಸುವಿಕೆ. ಹಾಗೆ ಕಟ್ಟುವ ಹಿನ್ನೆಲೆಯೆಂದರೆ, ವರನು, ಆ ಮಂಗಳಸೂತ್ರದಲ್ಲಿನ ಮಾಂಗಲ್ಯ ನಾನೆ, ನನ್ನ ಜೀವನದ ಕಾರಣವೇ ಇದಾಗಿದೆ. ಆದ್ದರಿಂದ ಪರಿಪೂರ್ಣ ಶುದ್ಧ ಮನದವಳಾಗಿ ನನ್ನ ಜೀವನವನ್ನು ಭರಿಸು ಎಂಬುವುದರ ಜೊತೆಗೆ ಗುರುಹಿರಿಯರ ಆಶೀರ್ವಾದದ ಬಯಕೆಯಂತೆ, ವಧುವು ನೂರು ವರ್ಷಗಳ ಕಾಲ ವ್ರತನಿಷ್ಠಳಾಗಿಯೂ, ತೇಜಸ್ವಿನಿಯೂ, ಯಶಸ್ವಿನಿಯೂ ಆಗಿ ತನ್ನ ಪತಿಗೆ ಧರ್ಮಪತ್ನಿಯಾಗಿ ಪತಿವ್ರತೆಯಾಗಿ ಬಾಳುತ್ತಾ ಸಮಾಜ, ಸಜ್ಜನರು ಒಪ್ಪುವಂತಹ ಮಕ್ಕಳನ್ನು ಪಡೆಯಲಿ ಎಂಬುದಾಗಿದೆ.

**ಸಪ್ತಪದಿ** ವಿಧಿಯಲ್ಲಿ ವರನು ಅಗ್ನಿಸಾಕ್ಷಿಯಾಗಿ ವಧುವಿನ ಕೈ ಹಿಡಿದುಕೊಂಡು ಅಗ್ನಿ ಪ್ರದಕ್ಷಿಣೆ ಮಾಡುತ್ತಾ ನಡೆಯುವುದನ್ನು ಪದಿ ಎಂತಲೂ ಏಳು ಸುತ್ತು ಸುತ್ತುವುದರಿಂದ ಸಪ್ತ, ಹೀಗೆ ಎರಡೂ ಸೇರಿ ಸಪ್ತಪದಿಯಾಯಿತು. ಸಪ್ತಪದಿ ತುಳಿಯಲು ವಧುವು ತನ್ನ ಕೈಯನ್ನು ಹಿಡಿದುಕೊಂಡು ಮುನ್ನಡೆಯುತ್ತಿರುವ ವರನನ್ನು ಕುರಿತು ಕೇಳಿ ಪಡೆಯುವ ಏಳು ವಾಗ್ದಾನಗಳೆಂದರೆ;

1. ನೀವು ತೀರ್ಥಯಾತ್ರೆಗೆ ಹೋಗುವುದಿದ್ದರೆ, ಯಾವುದೇ ವ್ರತದ ಉದ್ಯಾಪನೆ ಮತ್ತು ಯಾವುದೇ ಧಾರ್ಮಿಕ ಕಾರ್ಯಕ್ರಮ ಮಾಡುತ್ತಿದ್ದರೆ ನಿಮ್ಮ ಎಡಬದಿಯಲ್ಲಿರಲು ನನಗೆ ಆಸ್ಪದ ಕೊಡಿ.

2. ನೀವು ಯಾವ ರೀತಿ ನಿಮ್ಮ ತಂದೆ, ತಾಯಿಯರಿಗೆ ಮಾನ–ಸಮ್ಮಾನವನ್ನು ಮಾಡುತ್ತಿರುವಿರೋ ಅದೇ ರೀತಿ ನನ್ನ ತಂದೆ, ತಾಯಿಯರ ಮಾನ–ಸಮ್ಮಾನವನ್ನು ಮಾಡಿ ಕುಟುಂಬದ ಮಾನ ಮರ್ಯಾದೆಯ ಅನುಗುಣವಾಗಿ ಧಾರ್ಮಿಕಾಚರಣೆಗಳನ್ನು ಆಚರಿಸುವಾಗ ನಾನು ನಿಮ್ಮ ಅರ್ಧಾಂಗಿಯಾಗಿರಲು ಎಡಭಾಗದಲ್ಲಿ ಬರುವೆ.

3. ನೀವು ಏನೇ ಆಗಿರಲಿ, ಎಲ್ಲೇ ಇರಲಿ ಸ್ವಭಾಷೆ, ಸ್ವಸಂಸ್ಕೃತಿಯನ್ನು ಪಾಲಿಸುತ್ತಾ ಸ್ವದೇಶಾಭಿಮಾನಿಯಾಗಿರಿ

4. ನೀವು ಇಲ್ಲಿಯವರೆಗೂ ನಿಮ್ಮ ಕುಟುಂಬದ ಕೃಪಾಶ್ರಯದಲ್ಲಿದ್ದಿರಿ. ಈಗ ನಿಮ್ಮ ವಿವಾಹವಾಗಿರುವುದರಿಂದ ಕುಟುಂಬದವರ ಜವಾಬ್ದಾರಿಯನ್ನು

ಹೊತ್ತುಕೊಳ್ಳಿ. ಹಾಗೇ ನೀವು ಜವಾಬ್ದಾರಿಯುತ ವ್ಯಕ್ತಿಯಾದರೆ, ನಾನು ನಿಮ್ಮ ಅರ್ಧಾಂಗಿಯಾಗಿರಲು ಬರುವೆ.

5. ನೀವು ಮನೆತನದ ವ್ಯವಸ್ಥೆಗಾಗಿ, ಯಾವುದೇ ರೀತಿಯ ಶುಭ ಕಾರ್ಯಗಳಿಗಾಗಲಿ ಖರ್ಚು ಮಾಡುವಾಗಲೆಲ್ಲಾ ನನ್ನೊಂದಿಗೆ ಸಮಾಲೋಚಿಸುವೆ ಎಂದು ಮಾತು ಕೊಟ್ಟರೆ, ನಾನು ನಿಮ್ಮ ಅರ್ಧಾಂಗಿಯಾಗಿರಲು ಬರುವೆ.

6. ನಾನು ನನ್ನ ಓರಗೆಯವರೊಂದಿಗೆ ಅಥವಾ ಇತರೆ ಸ್ತ್ರೀಯರೊಂದಿಗೆ ಇರುವಾಗ ನೀವು ಯಾವ ಯಾವುದೋ ನೆಪದಿಂದ ಅಲ್ಲಿಗೆ ಬಂದು ನನ್ನನ್ನು ಮರ್ಯಾದೆ ಹೀನಳನ್ನಾಗಿಸಬಾರದು. ನೀವು ಯಾವುದೇ ದುಶ್ಚಟ, ದುರ್ವ್ಯಸನಗಳಿಗೆ ತುತ್ತಾಗುವುದಿಲ್ಲವೆಂದು ಮಾತು ಕೊಟ್ಟರೆ, ನಾನು ನಿಮ್ಮ ಅರ್ಧಾಂಗಿಯಾಗಿರಲು ಬರುವೆ.

7. ನೀವು ಬೇರೆ ಯಾವೊಬ್ಬ ಹೆಂಗಸನ್ನು ಕೆಟ್ಟ ದೃಷ್ಟಿಯಿಂದ ನೋಡದೆ ಎಲ್ಲರನ್ನು ತಾಯಂದಿರು ಎಂದು ತಿಳಿದು ಪುತ್ರ ವಾತ್ಸಲ್ಯವನ್ನು ತೋರಿಸಿ, ನಿಮ್ಮ ಎಲ್ಲಾ ಪ್ರೀತಿಯನ್ನು ನನಗೆ ಧಾರೆ ಎರೆಯುವೆನೆಂದು ಮಾತು ಕೊಟ್ಟರೆ, ನಾನು ನಿಮ್ಮ ಅರ್ಧಾಂಗಿಯಾಗಿರಲು ಬರುವೆ.

ಹೀಗೆ, ಏಳು ವಾಗ್ದಾನಗಳನ್ನು ವರನಿಂದ ಪಡೆದ ವಧುವಿಗೆ ವರನು ಕೇಳುವ ಒಂದೇ ಒಂದು ವಾಗ್ದಾನವೆಂದರೆ; ನೀನು ಕಾಡಿಗೆ, ಮತ್ತೊಬ್ಬರ ಮನೆಗೆ ಒಂಟಿಯಾಗಿ ಹೋಗಬಾರದು, ಏಕಾಂತದಲ್ಲಿ ಪರಪುರುಷನೊಂದಿಗೆ ವಾರ್ತಾಲಾಪ ಮಾಡಬಾರದು, ಗಂಡಸರೆದುರು ಮರ್ಯಾದೆ ಮೀರಿ ವರ್ತಿಸಬಾರದು, ಕುಟುಂಬದವರೊಡನೆ ನಯ, ವಿನಯಗಳಿಂದ ಮತ್ತು ಉತ್ತಮ ಮಾತುಗಳಿಂದ ವರ್ತಿಸುತ್ತಾ ಮಾನ, ಸಮ್ಮಾನವನ್ನು ಕೊಡಬೇಕು, ಪತಿವ್ರತೆಯ ಧರ್ಮವನ್ನು ಪಾಲಿಸಬೇಕು, ದೈವಭಕ್ತೆ ಸಂಪನ್ನಳಾಗಿ ಹಿರಿಯರನ್ನು ಆದರಿಸುತ್ತಾ ಅವರ ಆಜ್ಞೆಯನ್ನು ಪಾಲಿಸುವೆನೆಂದು ಮಾತು ಕೊಟ್ಟರೆ ನಿನ್ನನ್ನು ಅರ್ಧಾಂಗಿಯಾಗಿ ಸ್ವೀಕರಿಸುವೆ ಎಂಬುದಾಗಿದೆ.

**ವಿವಾಹ ಸಮಾರಂಭದ ಶಾಸ್ತ್ರಗಳು :**

**ಅರಿಶಿನ ಎಣ್ಣೆ ಶಾಸ್ತ್ರ** (ಪ್ರತ್ಯೇಕವಾಗಿ ವಧು–ವರರ ಮನೆಗಳಲ್ಲಿ ಆಚರಿಸುವುದು):

**ಸಿದ್ಧತೆ:**

1 ಮರದ ಮಣೆ – 1 (ವಧು/ವರನನ್ನು ಕೂರಿಸಲು), ಬಿಳಿ ವಸ್ತ್ರ



(ಪಂಚೆ) ಮಣೆಯ ಮೇಲೆ ಹಾಕಲು, ದೀಪದ ಸ್ತಂಭಗಳು – 2 ಉದ್ದದ ಬತ್ತಿಗಳು, ದೀಪಕ್ಕೆ ಎಣ್ಣೆ ಮತ್ತು ಬೆಂಕಿ ಪೊಟ್ಟಣ

1 ಮೊದಲನೆ ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಬಿಡಿ ಹೂಗಳು

1 ಎರಡನೆಯ ತಟ್ಟೆಯಲ್ಲಿ ವೀಳೆಯದೆಲೆ ಮತ್ತು ಅಡಿಕೆ

1 ಮೂರನೆಯ ತಟ್ಟೆಯಲ್ಲಿ ಐವರು ಮುತ್ತೈದೆಯರಿಗೋಸ್ಕರ ಸಿದ್ಧಪಡಿಸಿದ ತಾಂಬೂಲ (ಪ್ರತೀ ತಾಂಬೂಲದಲ್ಲಿ ವೀಳ್ಯೆದೆಲೆ–2, ಅಡಿಕೆ–2)

1 ಸ್ಟೀಲ್ ಬಟ್ಟಲು – 2

1 ಹಾರ – ಬಿಳಿಯ ಬಣ್ಣದ ಹೂವಿನಿಂದ ಕಟ್ಟಿದ್ದು (ವಧು ವರರ ಕೊರಳಿಗೆ), ಬಿಳಿಯ ಬಣ್ಣದ ಬಿಡಿ ಹೂಗಳು, ಹರಳೆಣ್ಣೆ – 100 ಗ್ರಾಂ

1 ಒಂದು ಲೋಟದಲ್ಲಿ ಸ್ವಲ್ಪ ನೀರು

ವರನ ಉಡುಗೆ : ಬಿಳಿ ಪಂಚೆ ಮತ್ತು ಬಿಳಿ ಮೇಲ್ವಸ್ತ್ರ (ಟವೆಲ್)

ವಧುವಿನ ಉಡುಗೆ : ಸರಳವಾದ ಸೀರೆ ಹಾಗೂ ಕುಪ್ಪಸ

**ವಿಧಾನ:**

1 ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು

1 ಮಣೆಯ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

1 ನಂತರ, ವಧು / ವರನನ್ನು ಮಣೆಯ ಬಲಭಾಗದಿಂದ ಬರುವಂತೆ ಕರೆತಂದು ಮಣೆಯ ಮೇಲೆ ಕೂರಿಸಬೇಕು.

1 ಕ್ರಮವಾಗಿ ಐವರು ಮುತ್ತೈದೆಯರು ಬಂದು ದೀಪಗಳಿಗೆ ಅರಿಶಿನ, ಕುಂಕುಮ ಮತ್ತು ಬಿಡಿ ಹೂವನ್ನಿಡಬೇಕು.

1 ನಂತರ ಅರಿಶಿನವನ್ನು ನೀರಿನಲ್ಲಿ ತೆಳ್ಳಗೆ ಕಲೆಸಿಕೊಂಡು ವಧು / ವರನ ಕೆನ್ನೆ, ಕೈ ಹಾಗೂ ಪಾದಗಳಿಗೆ ಸವರಬೇಕು

1 ಆಮೇಲೆ ಅವರ ಹಣೆಗೆ ಎರಡು ಬಾರಿ ಕುಂಕುಮವನ್ನು ಇಟ್ಟು, ಕೈಗೆ ಹೂವನ್ನು ಕೊಟ್ಟು ಅವರ ನೆತ್ತಿಯ ಮೇಲೆ ಮೂರು ಬಾರಿ ಅರಳೆಣ್ಣೆಯನ್ನು ಮೆದುವಾಗಿ ತಟ್ಟಬೇಕು.

1 ನಂತರ ಮಂಗಳ ದ್ರವ್ಯಗಳಿರುವ ಮೂರು ತಟ್ಟೆಗಳಿಗೆ ವಧು / ವರನ ಕೈಯಲ್ಲಿ ನಮಸ್ಕಾರ ಮಾಡಿಸಬೇಕು

- ವಧು / ವರರಿಂದ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳನ್ನು ತಾಂಬೂಲ ರೂಪದಲ್ಲಿ ಪ್ರತೀ ಮುತ್ತೈದೆಯರು ತಮ್ಮ ಸೀರೆಯ ಸೆರಗನ್ನು ಮುಂದು ಮಾಡಿ ಸೆರಗಿನಲ್ಲೇ ಪಡೆಯಬೇಕು.
- ತದನಂತರ, ತಾಂಬೂಲ ಖಾಲಿಯಾದ ತಟ್ಟೆಯಲ್ಲೇ ಕೆಂಪು ನೀರಿನ ಆರತಿ (ಸ್ವಲ್ಪ ನೀರು, ಅರಿಶಿನ ಮತ್ತು ಕುಂಕುಮ ತಲಾ ಒಂದು ಚಿಟಿಕೆ ಹಾಕಿ ಚೆನ್ನಾಗಿ ಕದಡಿ ಒಂದು ವೀಳೆಯದೆಲೆ, ಒಂದು ಅಡಿಕೆ ಮತ್ತು ಒಂದು ಬಿಳಿ ಹೂವು) ಮಾಡಿಕೊಂಡು ಮೂವರು ಹೆಣ್ಣು ಮಕ್ಕಳು ಅಥವಾ ಮೂವರು ಮುತ್ತೈದೆಯರು ಒಟ್ಟಿಗೆ ಆರತಿ ತಟ್ಟೆಯನ್ನು ಹಿಡಿದುಕೊಂಡು ಆರತಿ ಹಾಡನ್ನು ಹಾಡುತ್ತಾ ಆರತಿ ಬೆಳಗಿದ ಮೇಲೆ ಮೂವರಲ್ಲಿ ಯಾರಾದರೊಬ್ಬರು ತಮ್ಮ ಬಲಗೈ ಹೆಬ್ಬೆರಳಿನಿಂದ ಕೆಂಪು ನೀರಿನ ತಿಲಕವನ್ನು ವಧು / ವರನ ಹಣೆಗೆ ಇರಿಸಬೇಕು.
- ನಂತರ ತಟ್ಟೆಯಲ್ಲಿರುವ ಆರತಿ ಬೆಳಗಿದ ಕೆಂಪು ನೀರನ್ನು ಮನೆಯ ಹೆಬ್ಬಾಗಿಲಿನ ಮುಂದೆ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಚೆಲ್ಲಿ ಬರಿದಾದ ತಟ್ಟೆಯನ್ನು ವಧು / ವರನ ಮುಂದೆ ದಕ್ಷಿಣೆಗಾಗಿ ಒಡ್ಡಬೇಕು.
- ಆಗ ವಧು / ವರನು ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳ ಜೊತೆಗೆ ತಮ್ಮ ಶಕ್ತ್ಯಾನುಸಾರ ದಕ್ಷಿಣೆ ಹಣವನ್ನು ಆರತಿ ತಟ್ಟೆಯಲ್ಲಿ ಇಡಬೇಕು.

ನಂತರ ಮಣೆಯ ಮೇಲೆ ಕುಳಿತಿರುವ ವಧು / ವರನನ್ನು ಎಡಭಾಗದಿಂದ ಎಬ್ಬಿಸಿ ಬಲ ಪ್ರದಕ್ಷಿಣೆಯಾಕಾರದಲ್ಲಿ ನಡೆಸಿಕೊಂಡು ಸ್ನಾನದ ಕೋಣೆಗೆ ಕರೆತಂದು ಪೂರ್ವಾಭಿಮುಖವಾಗಿ ಕುಳಿತುಕೊಳ್ಳುವಂತೆ ಮಣೆಯನ್ನು ಹಾಕಿ ಕೂರಿಸಬೇಕು.

ಆಮೇಲೆ, ಐವರು ಮುತ್ತೈದೆಯರು ಕ್ರಮವಾಗಿ ತಲಾ ಮೂರು ಚೊಂಬು ಬಿಸಿ ನೀರನ್ನು ತಲೆಯ ಮೇಲೆ ಸುರಿದು ತೆರಳಿದ ನಂತರ ವಧು / ವರನು ತಮ್ಮ ಸ್ನಾನವನ್ನು ಮುಗಿಸಿ ಹೊರ ಬರಬೇಕು.

**ಚಪ್ಪರ ಹಾಕುವ ಶಾಸ್ತ್ರ:**

ಹಿಂದಿನ ಕಾಲದಲ್ಲಿ ಮದುವೆಯ ಸಮಾರಂಭವು ಮನೆಯಲ್ಲಿ ಅಥವಾ ಮನೆಯ ಹತ್ತಿರ, ಇಲ್ಲವೇ ಸಮೀಪದ ದೇವಸ್ಥಾನಗಳಲ್ಲಿ ನೆರವೇರಿಸುವ



ಪದ್ಧತಿ ರೂಢಿಯಲ್ಲಿತ್ತು. ಚಪ್ಪರ ಹಾಕುವ ಮೂಲೋದ್ದೇಶ ಶುಭ ಕಾರ್ಯದ ಸೂಚನೆಯನ್ನು ಪ್ರಚುರಪಡಿಸುವುದಷ್ಟೇ ಅಲ್ಲದೆ ದೇವತೆಗಳಿಗೆ ಆಹ್ವಾನವನ್ನು ನೀಡುವುದೂ ಆಗಿದೆ. ಅಲ್ಲದೆ ಋಣಾತ್ಮಕ ಶಕ್ತಿಗಳನ್ನು ತಡೆಯುವುದು. ಚಪ್ಪರದಲ್ಲಿ ಉಪಯೋಗಿಸುವ ವಸ್ತುಗಳನ್ನು ಅವಲೋಕಿಸಿದರೆ ಮೊದಲಿಗೆ ಕಲ್ಪವೃಕ್ಷದ ಅವಿಭಾಜ್ಯ ಅಂಗವಾಗಿರುವ ತೆಂಗಿನ ಗರಿಗಳು ಅಲಂಕಾರವನ್ನಷ್ಟೇ ಅಲ್ಲದೇ ತನ್ನಲ್ಲಿ ಹುದುಗಿಸಿಕೊಂಡಿರುವ ತೇವಾಂಶದಿಂದ ತಂಪನ್ನು ನೀಡಿ ನೆರಳನ್ನು ಒಡ್ಡುತ್ತದೆ. ಇನ್ನು ಮಾವಿನ ತಳಿರು ಸಹ ವಾತಾವರಣದಲ್ಲಿನ ಉಷ್ಣತೆಯನ್ನು ಹೀರಿಕೊಳ್ಳುವುದಲ್ಲದೇ ಯಾವುದೇ ರೀತಿಯ ಋಣಾತ್ಮಕ ಶಕ್ತಿಗಳು ತನ್ನನ್ನು ದಾಟಿಕೊಂಡು ಹೋಗದಂತೆ ಪ್ರಭಾವ ಬೀರುತ್ತದೆ. ಹಾಗೆಯೇ ಬಾಳೆಯ ಕಂದಿನಲ್ಲಿರುವ ಬಾಳೆಯ ಎಲೆಗಳು ಧನಾತ್ಮಕ ಶಕ್ತಿಯನ್ನು ಹೀರಿಕೊಂಡು ಅದರ ಪ್ರಸರಣ ಕಾರ್ಯವನ್ನು ಸಮರ್ಥವಾಗಿ ನೆರವೇರಿಸುತ್ತದೆ. ನಮಗೆಲ್ಲಾ ತಿಳಿದಿರುವಂತೆ ಬಾಳೆಗಿಡದ ಮೂಲಕ ರೇಡಿಯೋ ತರಂಗಗಳ ಸಂವಾಹನೆಯನ್ನು ಯಶಸ್ವಿಯಾಗಿ ನಡೆಸಬಹುದು.

***ಸೂಚನೆ:*** ಚಪ್ಪರ ಹಾಕುವ ಶಾಸ್ತ್ರವನ್ನು ವಧು / ವರರ ಜಾತಕಕ್ಕೆ ಅನುಗುಣವಾಗಿ ದೊರಕುವ ಶುಭ ಘಳಿಗೆಯನ್ನು ಆಧರಿಸಿ ಲಗ್ನಕ್ಕೆ ಇನ್ನೂ 1, 3, 5 ಅಥವಾ 7 ದಿನಗಳಿವೆ ಎಂದು ನಿಶ್ಚಯವಾದರೆ ಆ ದಿನದಲ್ಲಿ ಮಾತ್ರ ನೆರವೇರಿಸಬೇಕು.

**ಸಿದ್ಧತೆ:**

**ಚಪ್ಪರಕ್ಕೆ ಉಪಯೋಗಿಸುವ ಸಾಮಗ್ರಿಗಳು:**

- ಗಳು (ಬೊಂಬು) – 10 (ಸಮ ಸಂಖ್ಯೆಯಲ್ಲಿರಬೇಕು), ತೆಂಗಿನ ಗರಿಗಳು – 8, ಸುತ್ತಲೀ ದಾರ – 2 ಉಂಡೆ, ಗೊನೆ ಇರುವ ಬಾಳೆಕಂದು – 2, ಮಾವಿನ ಸೊಪ್ಪು ಮತ್ತು ಕಟ್ಟಿದ ಹೂವುಗಳು – ಸಾಕಷ್ಟು ಅಲಂಕಾರಕ್ಕೆಂದು, ಚಪ್ಪರದ ಛಾವಣಿಯ ಕೆಳಗೆ ಕಟ್ಟಲು ಒಂದು ಬಿಳಿಯ ಪಂಚೆ, ಹಳದಿ ಬಟ್ಟೆಯಲ್ಲಿ ಸ್ವಲ್ಪ ಮೊಸರನ್ನದ ಬುತ್ತಿ, ನವಧಾನ್ಯಗಳು – ಒಂದು ಹಿಡಿಯಷ್ಟು (ಹಳದಿ ಬಟ್ಟೆ – ಬಿಳಿ ಬಟ್ಟೆಯನ್ನು ಅರಿಶಿನದ ನೀರಿನಲ್ಲಿ ನೆನೆಸಿದ್ದು)
- **ಪೂಜಾ ಸಾಮಗ್ರಿ :** ವೀಳ್ಯೆದೆಲೆ, ಅಡಿಕೆ, ಗಂಧದ ಕಡ್ಡಿ, ಕರ್ಪೂರ, ತೆಂಗಿನ ಕಾಯಿ –2, ಹೂವು, ಬಾಳೆಹಣ್ಣು, ಅರಿಶಿನ, ಕುಂಕುಮ ಮತ್ತು ಅಕ್ಷತೆ, ಒಂದು ಲೋಟದಲ್ಲಿ ಶುದ್ಧತುಪ್ಪ ಮಿಶ್ರಿತ ಹಸೀ ಹಾಲು,

ಒಂದು ಲೋಟದಲ್ಲಿ ನೀರು, 1 ಗಂಟೆ, ಆರತಿ ತಟ್ಟೆ, ಕರ್ಪೂರ ಮತ್ತು ಬೆಂಕಿ ಪೊಟ್ಟಣ

- **ನೈವೇದ್ಯಕ್ಕೆ :** ವೀಳ್ಯೆದೆಲೆ–2, ಅಡಿಕೆ–2, ಬಾಳೆಹಣ್ಣು–2, ಬೆಲ್ಲದ ಉಂಡೆ–2, ದಕ್ಷಿಣೆಗೆಂದು 11 ರೂಪಾಯಿ.

**ಚಪ್ಪರ ಹಾಕುವ ವಿಧಾನ:**

- ಚಪ್ಪರ ಹಾಕುವ ಪ್ರದೇಶದ ಆಯ್ಕೆ ಪೂರ್ಣಗೊಂಡಮೇಲೆ ದೇವಮೂಲೆಯು ಇರುವ ಜಾಗದಲ್ಲಿ ಒಂದು ಗುಳಿಯನ್ನು ಮಾಡಿ ಅದರಲ್ಲಿ ನವಧಾನ್ಯಗಳ ಗಂಟನ್ನು ಇಟ್ಟು ಒಂದು ಗಳುವನ್ನು ನೆಟ್ಟು ಭದ್ರವಾಗಿಸಬೇಕು.
- ನಂತರ ಮನೆಯ ಮಗಳು ಅಥವಾ ಯಾರಾದರೂ ಮುತ್ತೈದೆಯು ಆ ಗಳುವಿಗೆ ಅರಿಶಿನ, ಕುಂಕುಮ ಮತ್ತು ಹೂವನ್ನಿಟ್ಟು ಗಳುವಿನ ಮುಂದೆ ಎರಡು ವೀಳೆಯದೆಲೆ ಜೊತೆಗೆ ಎರಡು ಅಡಿಕೆ, ಎರಡು ಬೆಲ್ಲದ ಉಂಡೆಗಳು, ಎರಡು ಬಾಳೇಹಣ್ಣು ಮತ್ತು ಹನ್ನೊಂದು ರೂಪಾಯಿಯ ದಕ್ಷಿಣೆಕಾಸನ್ನಿಡಬೇಕು
- ಗಂಧದಕಡ್ಡಿಯನ್ನು ಬೆಳಗಿ, ತೆಂಗಿನಕಾಯಿಯನ್ನು ಒಡೆದು, ತುಪ್ಪದ ಬತ್ತಿಯ ಆರತಿ ಬೆಳಗಬೇಕು.
- ಆಮೇಲೆ, ಇನ್ನು ಮೂರು ಗುಳಿಗಳನ್ನು ತೆಗೆದು ಅವುಗಳಲ್ಲಿ ತಲಾ ಒಂದೊಂದು ಗಳುವನ್ನು ನೆಟ್ಟು ಭದ್ರಪಡಿಸಿ, ಮೇಲ್ಭಾಗದಲ್ಲೂ ಗಳುಗಳನ್ನು ಅಡ್ಡಲಾಗಿ ಉಪಯೋಗಿಸಿ ಚಪ್ಪರದಾಕೃತಿಯನ್ನು ಮುಗಿಸಬೇಕು.
- ಬಳಿಕ ಹೆಣೆದ ಹಸೀ ತೆಂಗಿನ ಗರಿಗಳು, ಮಾವಿನ ಎಲೆ ಮತ್ತು ಕುಡಿಗಳು, ಹಾಗೂ ಹೂವಿನಿಂದ ಅಲಂಕರಿಸಬೇಕು.
- ಚಪ್ಪರದ ಚಾವಣಿಯ ಕೆಳಗೆ ಪಂಚೆಯನ್ನು ಹೊದಿಸಿ ಭದ್ರವಾಗಿ ಕಟ್ಟಬೇಕು.
- ಮುಂಭಾಗದ ಎರಡು ಗಳುಗಳಿಗೆ ಗೊನೆಸಹಿತವಾದ ಬಾಳೆಕಂದುಗಳನ್ನು ಕಟ್ಟಿ ಚಪ್ಪರ ಹಾಕುವ ಕಾರ್ಯವನ್ನು ಮುಗಿಸಬೇಕು.
- ನೈವೇದ್ಯಕ್ಕಿಟ್ಟಿರುವ ತಾಂಬೂಲವನ್ನು ದಕ್ಷಿಣೆಯ ಸಮೇತ ಚಪ್ಪರ ಹಾಕಿದವರಿಗೆ ಅಭಿನಂದನಾಪೂರ್ವಕವಾಗಿ ಅರ್ಪಿಸಬೇಕು.



**ವರನ ಅಥವಾ ವಧುವಿನ ಕೈಯಲ್ಲಿ ಚಪ್ಪರದ ಪೂಜೆ:**

**ಸಿದ್ಧತೆ:**

- ಒಂದು ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆ ಬಟ್ಟಲು, ಬಿಡಿ ಹೂವುಗಳು, ಕಟ್ಟಿದ ಹೂವುಗಳು
- ಒಂದು ಲೋಟದಲ್ಲಿ ಹಸೀ ಹಾಲು ಮತ್ತು ತುಪ್ಪ
- ಒಂದು ತಟ್ಟೆಯಲ್ಲಿ ತೆಂಗಿನಕಾಯಿ –1, ವೀಳ್ಯೆದೆಲೆ –2, ಅಡಿಕೆ –2, ಬಾಳೆಹಣ್ಣು –2, ಬೆಲ್ಲದ ಉಂಡೆ –2, ಗಂಧದಕಡ್ಡಿಗಳು, ಕರ್ಪೂರ, ತುಪ್ಪದ ಬತ್ತಿಗಳು, ದಕ್ಷಿಣೆಕಾಸು –11 ರೂಪಾಯಿಗಳು, ಆರತಿ ತಟ್ಟೆ, ಗಂಟೆ
- ಒಂದು ಲೋಟದಲ್ಲಿ ನೀರು
- ಒಂದು ತಟ್ಟೆಯಲ್ಲಿ 9 ತಾಂಬೂಲಗಳು
- ಪ್ರತೀ ತಾಂಬೂಲದಲ್ಲಿ ವೀಳ್ಯೆದೆಲೆ –2, ಅಡಿಕೆ –2 ಮತ್ತು ಬಾಳೆಹಣ್ಣು –2

**ವಿಧಾನ:**

- ದೇವಮೂಲೆಯಲ್ಲಿರುವ ಗಳುವಿಗೆ ವಧು / ವರನು ಸ್ವಲ್ಪ ನೀರನ್ನು ಚಿಮುಕಿಸಿ ಶುದ್ಧ ಮಾಡಿ ಅರಿಶಿನ, ಕುಂಕುಮವನ್ನಿಟ್ಟು ಹೂವಿನ ಹಾರವನ್ನು ಗಳುವಿಗೆ ಸುತ್ತಿ ಗಳುವಿನ ಮುಂಭಾಗದಲ್ಲಿ ತಾಂಬೂಲವನ್ನಿರಿಸಬೇಕು
- ನಂತರ, ಗಂಧದ ಕಡ್ಡಿಗಳನ್ನು ಬೆಳಗಿಸಿ ತೆಂಗಿನಕಾಯಿಯನ್ನು ಒಡೆದು ಆರತಿ ಬೆಳಗಬೇಕು
- ಲೋಟದಲ್ಲಿರುವ ಹಸೀಹಾಲು ಮತ್ತು ತುಪ್ಪವನ್ನು ಗಳುವಿನ ಮೇಲೆ ಸುರಿಯಬೇಕು
- ವಧು / ವರನು ಮೊದಲು ಆರತಿಯನ್ನು ತೆಗೆದುಕೊಂಡು ನಂತರ ಅಲ್ಲಿ ನೆರೆದಿರುವವರೆಲ್ಲರಿಗೂ ಆರತಿಯನ್ನು ಕೊಡಬೇಕು
- ಮನೆಯ ಯಾರಾದರೂ ಹೆಣ್ಣು ಮಗಳು ನೆರೆದಿರುವ ಮುತ್ತೈದೆಯರಿಗೆಲ್ಲಾ ಅರಿಶಿನ ಕುಂಕುಮ, ಅಕ್ಷತೆ ಮತ್ತು ಹೂವನ್ನು ಕೊಟ್ಟು ತಾಂಬೂಲವನ್ನು ವಿತರಿಸಬೇಕು.
- ಪೂಜೆಗೆ ಇರಿಸಿದ ತಾಂಬೂಲವನ್ನು ಮುಂದೆ ಚಪ್ಪರ ಹಾಕಿದವರಿಗೆ ಕೊಡಬೇಕು.

***ಸೂಚನೆ:*** ವರ ಮತ್ತು ವಧುವಿನ ಮನೆಗಳಲ್ಲಿ ಪ್ರತ್ಯೇಕವಾಗಿ ಚಪ್ಪರ ಹಾಕುವಾಗ, ಮೊದಲನೆಯ ಗಳುವನ್ನು ನೆಡುವ ಮೊದಲು ವರನ ಮನೆಯಲ್ಲಿ ಯಾರಾದರೂ ಕನ್ಯೆಯ ಮದುವೆಯು ತಡವಾಗುತ್ತಿದ್ದರೆ ಹಾಗೆಯೇ ವಧುವಿನ ಮನೆಯಲ್ಲಿ ಯಾರಾದರೂ ಗಂಡಿನ ಮದುವೆಯು ತಡವಾಗುತ್ತಿದ್ದರೆ, ಅಂತಹ ಕನ್ಯೆ/ಗಂಡಿನ ಕೈಯಿಂದ ನವಧಾನ್ಯವನ್ನು ಮೊದಲನೆ ಗುಳಿಯಲ್ಲಿ ಹಾಕಿಸಿದರೆ ಶೀಘ್ರದಲ್ಲಿ ಅವರುಗಳಿಗೆ ಕಂಕಣ ಭಾಗ್ಯ ಕೂಡಿಬರುವುದೆಂಬ ನಂಬಿಕೆಯಿದೆ.

**ಅರಿಶಿನ ಕುಂಕುಮ ತರುವುದು** (ಹೆಣ್ಣು ಮಗಳು ಮತ್ತು ಅಳಿಯ) :

'ಕೊಟ್ಟ ಹೆಣ್ಣು ಕುಲದಿಂದ ಹೊರಕ್ಕೆ" ಎಂಬ ನಾಣ್ಣುಡಿಯಿದ್ದರೂ, ಯಾವುದೇ ಹೆಣ್ಣಿಗೆ ತನ್ನ ತವರಿನ ಮೇಲಿನ ವ್ಯಾಮೋಹವನ್ನು ಅಷ್ಟು ಸುಲಭದಲ್ಲಿ ಬಿಡಿಸಿಕೊಳ್ಳಲು ಆಗುವುದಿಲ್ಲ. ಆಕೆಯು ತಾನು ಹೊಕ್ಕ ಮನೆಯ ಅಭಿವೃದ್ಧಿಗೆ ಅನವರತ ಶ್ರಮಿಸುತ್ತಿದ್ದರೂ, ತವರಿನ ಮನೆಯ ಏಳಿಗೆಯನ್ನು ಸಹ ಸದಾ ಬಯಸುತ್ತಿರುತ್ತಾಳೆ. ಅಂತಹ ವಿಶಾಲ ಮನೋವೃತ್ತಿಯ ಹೆಣ್ಣು ಮಗಳಿಗೆ ತವರಿನ ಮನೆಯವರು ತೋರಿಸುವ ಹೃದಯಪೂರ್ವಕ ಆದರಾಭಿಮಾನಗಳ ಸಂಕೇತವೇ ಹೆಣ್ಣುಮಗಳಿಗೆ ಮತ್ತು ಅಳಿಯ ದೇವರಿಗೆ ತಮ್ಮ ಮನೆಯ ಮದುವೆ ಕಾರ್ಯದಲ್ಲಿ ಮಂಗಳದ್ರವ್ಯಗಳಾದ ಅರಿಶಿನ ಕುಂಕುಮಗಳನ್ನು ತರುವ ಜವಾಬ್ದಾರಿಯುತವಾದ ಕಾರ್ಯವನ್ನು ವಹಿಸುವುದು.

**ವಿಧಾನ:**

- ಎರಡು ಮಣೆಗಳನ್ನು ಪೂರ್ವ ಅಥವಾ ಉತ್ತರಾಭಿಮುಖವಾಗಿ ಅಕ್ಕ ಪಕ್ಕದಲ್ಲಿ ಹಾಕಿ ಅದರ ಮೇಲೆ ಬಿಳಿ ವಸ್ತ್ರವನ್ನು ಹಾಸಬೇಕು.
- ಮಣೆಗಳ ಎರಡೂ ಬದಿಯಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ನಂತರ ಮಗಳು ಮತ್ತು ಅಳಿಯರನ್ನು, ಮಗಳು ಅಳಿಯನ ಬಲಭಾಗದಲ್ಲಿ ಇರುವಂತೆ ಮಣೆಗಳ ಬಲಗಡೆಯಿಂದ ಕರೆತಂದು, ಕೂರಿಸಬೇಕು.
- ಆಮೇಲೆ ಎರಡೂ ದೀಪಸ್ತಂಭಗಳಿಗೆ ಮತ್ತು ಅವರಿಬ್ಬರಿಗೆ ಅರಿಶಿನ, ಕುಂಕುಮ ಇಟ್ಟು ಹೂವನ್ನು ಕೊಡಬೇಕು.
- ನಂತರ, ಇಬ್ಬರಿಗೂ ಕುಡಿಯಲು ನಿಂಬೆ ಹಣ್ಣಿನ ಪಾನಕವನ್ನು ಕೊಡಬೇಕು.
- ಅವರಿಬ್ಬರೂ ಸಾವಕಾಶವಾಗಿ ಪಾನಕ ಕುಡಿದ ನಂತರ, ಮಂಗಳದ್ರವ್ಯಗಳಾದ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು, ಬಿಳಿಯ ಹೂಗಳು ಹಾಗೂ ತಾಂಬೂಲ ರೂಪದಲ್ಲಿರುವ ವೀಳ್ಯದೆಲೆ–2, ಅಡಿಕೆ–2, ಬಾಳೆಹಣ್ಣು–2, ದಕ್ಷಿಣೆ–11 ರೂಪಾಯಿಗಳನ್ನು ಇರಿಸಿರುವ ತಟ್ಟೆಯನ್ನು ಇಬ್ಬರಿಂದಲೂ ನಮಸ್ಕಾರ ಮಾಡಿಸಬೇಕು.



- ಆಮೇಲೆ ಮಂಗಳ ದ್ರವ್ಯಗಳಿರುವ ತಟ್ಟೆಯನ್ನು ಮಗಳ ಕೈಯಲ್ಲಿ ಕೊಟ್ಟು ಅವರಿಬ್ಬರನ್ನು ಎಡ ಬದಿಯಿಂದ ಎಬ್ಬಿಸಿ ಗಂಧಿಗೆ ಅಂಗಡಿಗೆ ಅರಿಶಿನ ಕುಂಕುಮದ ವಸ್ತುಗಳನ್ನು ತರಲು ಕಳುಹಿಸಬೇಕು.

ಸಕಲ ವಸ್ತುಗಳನ್ನು ಖರೀದಿಸಿದ ಬಳಿಕ, ಅಳಿಯ ಮತ್ತು ಮಗಳು ತಟ್ಟೆಯಲ್ಲಿರುವ ತಾಂಬೂಲವನ್ನು ಗಂಧಿಗೆ ಅಂಗಡಿಯವರಿಗೆ ಕೊಡಬೇಕು.

**ಕೊಂಡು ತರಬೇಕಾದ ಮಂಗಳಕರ ವಸ್ತುಗಳು:**

- ಅರಿಶಿನ – ½ ಕೆ.ಜಿ., ಕುಂಕುಮ – ½ ಕೆ.ಜಿ., ವೀಳೆಯದೆಲೆ – 1 ಕಟ್ಟು, ಚೂರು ಅಡಿಕೆ – ½ ಕೆ.ಜಿ., ಬಟ್ಟಲು ಅಡಿಕೆ – ½ ಕೆ.ಜಿ., ಬಾಳೆಹಣ್ಣು – 24, ತೆಂಗಿನಕಾಯಿ – 4, ಅರಿಶಿನದ ಕೊಂಬು – ½ ಕೆ.ಜಿ., ಕಿತ್ತಳೆಹಣ್ಣು – ½ ಕೆ.ಜಿ., ಸೇಬು – ½ ಕೆ.ಜಿ., ದಾಳಿಂಬೆ – ½, ಕೆ.ಜಿ., ಖರ್ಜೂರ – ½ ಕೆ.ಜಿ., ಒಣ ದ್ರಾಕ್ಷಿ – ½ ಕೆ.ಜಿ., ಗಂಧದ ಕಡ್ಡಿ – 1 ಕಟ್ಟು, ಕರ್ಪೂರ – 1 ಪಾಕೀಟು, ಗಾಜಿನ ಬಳೆ – ನಾಲ್ಕು ಡಝನ್ (ಬಳೆಗಳ ಸಂಖ್ಯೆಯು ಆಹ್ವಾನಿತರ ಮತ್ತು ಅವರಿಗೆ ಕೊಡುವ ಬಳೆಗಳ ಸಂಖ್ಯೆಯನ್ನು ಅವಲಂಬಿಸಿದೆ), ಬಿಳಿ ಹೂವು ಕಟ್ಟಿದ್ದು – ನಾಲ್ಕು ಮಾರು, ನಿಂಬೆ ಹಣ್ಣು – 4 ಮತ್ತು ಕಳಸದ ವಸ್ತುಗಳಾದ ಅರಿಶಿನ ಕುಂಕುಮದ ಡಬ್ಬಿ (ಮರದ್ದು), ಸೀರಣಿಗೆ, ಬಾಚಣಿಗೆ, ಕನ್ನಡಿ, ಬಳೆ ಬಿಚ್ಚೋಲೆ 2 ಮತ್ತು ವಿಭೂತಿ ಗಟ್ಟಿ – 1

***ಸೂಚನೆ:*** ಹರಣೆ ಕುಡಿಕೆ ಮತ್ತು ಬಾಸಿಂಗಗಳನ್ನು ಮದುವೆಯ ಕಾರ್ಯದ ಜವಾಬ್ದಾರಿಯನ್ನು ವಹಿಸಿಕೊಂಡು ನಡೆಸುವ ವರನ ಅಥವಾ ವಧುವಿನ ಕುಟುಂಬದವರು ಮಾತ್ರ ತರಲು ಅರ್ಹರು.

ಪೇಟೆಯಿಂದ ಸಾಮಗ್ರಿಗಳನ್ನು ಕೊಂಡು ತಂದ ಮಗಳು ಅಳಿಯರನ್ನು ಬರಮಾಡಿಕೊಂಡು, ಅವರು ತಂದ ವಸ್ತುಗಳನ್ನು ತೆಗೆದುಕೊಂಡು ದೇವರ ಕೋಣೆಯಲ್ಲಿಡಬೇಕು. ನಂತರ, ಮಗಳು ಅಳಿಯನ ಬಲಭಾಗದಲ್ಲಿ ಇರುವಂತೆ ಮಣೆಗಳ ಬಲಗಡೆಯಿಂದ ಬರುವಂತೆ ಕರೆತಂದು, ಕೂರಿಸಿದ ಮೇಲೆ ಬೆಳಗುತ್ತಿರುವ ಎರಡೂ ದೀಪಸ್ತಂಭಗಳಿಗೆ ಮತ್ತು ಅವರಿಬ್ಬರಿಗೆ ಅರಿಶಿನ,

ಕುಂಕುಮ ಇಟ್ಟು ಹೂವನ್ನು ಕೊಡಬೇಕು. ಆಮೇಲೆ ಇಬ್ಬರಿಗೂ ಕುಡಿಯಲು ನಿಂಬೆ ಹಣ್ಣಿನ ಪಾನಕವನ್ನು ಕೊಡಬೇಕು.

**ಮಾಂಗಲ್ಯ, ಕಡಗ ಮತ್ತು ಕಾಲುಸುತ್ತು ತರುವ ಶಾಸ್ತ್ರ:**

ಮನೆಯ ಹಿರಿಯರು ಪೂಜಾ ಸಾಮಗ್ರಿಗಳ ಸಮೇತ ಐವರು ಮುತ್ತೈದೆಯರೊಂದಿಗೆ ಅಕ್ಕಸಾಲಿಗರ ಬಳಿ ತೆರಳಿ ಆಯ್ಕೆ ಮಾಡಿದ ಮಾಂಗಲ್ಯಕ್ಕೆ ಮಂಗಳದ್ರವ್ಯಗಳಿಂದ ಪೂಜೆಯನ್ನು ಮಾಡಿ ಅಂಗಡಿಯಲ್ಲಿರುವ ಮುತ್ತೈದೆಯರಿಗೆ ಮತ್ತು ಹೆಣ್ಣು ಮಕ್ಕಳಿಗೆ ಕುಂಕುಮವನ್ನು ಕೊಟ್ಟು ಮಾಂಗಲ್ಯ, ಕಡಗ ಮತ್ತು ಕಾಲು ಸುತ್ತನ್ನು ತರುವುದು.

***ಸೂಚನೆ:*** ಮನೆಯಲ್ಲಿ ಒಬ್ಬರಿಗಿಂತ ಹೆಚ್ಚು ಗಂಡು ಮಕ್ಕಳಿದ್ದರೆ, ಸೊಸೆಗಳಿಗೆ ತರುವ ಮಾಂಗಲ್ಯಗಳ ತೂಕ ಅವರೋಹಣ ಕ್ರಮದಲ್ಲಿರಬೇಕು ಎನ್ನುವುದು ಸೊಸೆಯರ ಹಿರಿತನಕ್ಕೆ ಕೊಡುವ ಮರ್ಯಾದೆ.

**ಒರಳುಕಲ್ಲಿನ ಪೂಜೆ:**

ಒರಳುಕಲ್ಲು ಪಾರ್ವತಿದೇವಿಗೆ ಸಮಾನ, ಒನಕೆಯು ಈಶ್ವರನಿಗೆ ಸಮಾನ ಮತ್ತು ಗುಂಡುಕಲ್ಲು ಹರಿಹರರ (ನಿಲ್ಲಿಸಿದರೆ ಹರ, ಮಲಗಿಸಿದರೆ ಹರಿ) ಸಮಾನವೆಂಬ ನಂಬಿಕೆಯಿಂದ ಮದುವೆಯ ಶುಭ ಕಾರ್ಯದಲ್ಲಿ ಅವುಗಳಿಗೆ ಪೂಜೆಯನ್ನು ಸಲ್ಲಿಸಿದರೆ ವಿಷ್ಣು ಮತ್ತು ಶಿವಪಾರ್ವತಿಯರನ್ನು ಪೂಜಿಸಿದಂತಾಗುವುದಲ್ಲದೇ ಅವರ ಆಶೀರ್ವಾದದಿಂದ ವಧುವರರಿಗೆ ಶುಭವಾಗಿ ಜೀವನವು ಸುಖಮಯವಾಗಿರಲೆಂಬ ಆಶಯ.

**ಸಿದ್ಧತೆ:**

- ಒರಳುಕಲ್ಲು, ಗುಂಡಪ್ಪ ತಲಾ ಒಂದೊಂದು, ಒನಕೆ – 2, ತೆಂಗಿನಕಾಯಿ–2, ಹಸಿರು ಹಾಗೂ ಕೆಂಪು ಬಣ್ಣದ ಗಾಜಿನ ಬಳೆಗಳು – (ಬಳೆಗಳ ಸಂಖ್ಯೆ, ಆಯಾ ಮನೆಯವರು ಆಮಂತ್ರಿಸುವ ಮುತ್ತೈದೆಯರ ಸಂಖ್ಯೆ ಮತ್ತು ಕೊಡಮಾಡುವ ಬಳೆಗಳ ಸಂಖ್ಯೆಗಳನ್ನು ಅವಲಂಬಿಸಿದೆ)
- ಪೂಜಾ ಸಾಮಗ್ರಿಗಳು – ಗಂಟೆ, ಆರತಿ ತಟ್ಟೆ, ಮಣೆ – 1, ದೀಪಸ್ತಂಭ – 1 ಒರಳುಕಲ್ಲಿನ ಮುಂದೆ, 1 ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು, ಬಿಡಿ ಹೂವುಗಳನ್ನು ಇಡುವುದು.
- ಮತ್ತೊಂದು ತಟ್ಟೆಯಲ್ಲಿ ಎಲೆ, ಅಡಿಕೆ, ದಕ್ಷಿಣೆ ಸಮೇತ ಪಂಚ ಫಲಗಳನ್ನು ಇಡುವುದು



- ಇನ್ನೊಂದು ತಟ್ಟೆಯಲ್ಲಿ 11 ಮುತ್ತೈದೆಯರಿಗೆಂದು ತಾಂಬೂಲಗಳನ್ನು ಜೋಡಿಸಬೇಕು – (ಪ್ರತೀ ತಾಂಬೂಲದಲ್ಲಿ ವೀಳೆಯದೆಲೆ–2, ಅಡಿಕೆ–2, ದಕ್ಷಿಣೆ–1 ರೂಪಾಯಿ, ನೆನೆಸಿದ ಹೆಸರು ಬೇಳೆ ಸ್ವಲ್ಪ, ಬಾಳೆಹಣ್ಣು–1, ಖರ್ಜೂರ–1, ಒಣ ದ್ರಾಕ್ಷಿ–4, ಸೇಬು, ಕಿತ್ತಳೆ ಹಣ್ಣು, ತಲಾ 1 ತುಂಡು)
- 2 ಒನಕೆಗಳನ್ನು ಶುಭ್ರವಾಗಿಸಿ ಅವುಗಳನ್ನು ಅಂದವಾಗಿ ಸಿಂಗರಿಸಿ ಪ್ರತೀ ಒನಕೆಯ ಒಂದು ಬದಿಯಲ್ಲಿ ಅರಿಶಿನದ ದಾರದಸಮೇತ ಅರಿಶಿನ ಕೊಂಬಿನ ಕಂಕಣವನ್ನು ಮತ್ತು ಹೂವನ್ನು ಸುತ್ತಿ ಬಿಗಿಯಾಗಿ ಕಟ್ಟಿರಬೇಕು
- ಶುಚಿಗೊಳಿಸಿದ ಒರಳುಕಲ್ಲಿನಲ್ಲಿ ಮನೆ ಮಗಳು ಮತ್ತು ಅಳಿಯಂದಿರು ತಂದಿರುವ ಅರಿಶಿನದ ಕೊಂಬುಗಳನ್ನು ಹಾಕಿರಬೇಕು.
- ಪಕ್ಕದಲ್ಲೇ ಶುಚಿಯಾದ ಗುಂಡಪ್ಪನ್ನನ್ನು ಇರಿಸಬೇಕು.

**ವಿಧಾನ:**

- ಶುಭ ಸಮಯದಲ್ಲಿ ವಧು/ವರನ ಕೈಯಲ್ಲಿ ದೇವರ ಮನೆಯಲ್ಲಿ ಮನೆದೇವರಿಗೆ ಪೂಜೆ ಮಾಡಿಸುವುದು.
- ಮನೆ ದೇವರ ಹೆಸರಿನಲ್ಲಿ 11 ರೂಪಾಯಿಗಳನ್ನು ಅರಿಶಿನದ ಪುಡಿ ಮತ್ತು ನೀರಿನ ಸಹಾಯದಿಂದ ಮಾಡಿದ ಹಳದಿ ಬಟ್ಟೆಯಲ್ಲಿ ಕಟ್ಟಿ ಮೀಸಲು ತೆಗೆದಿಡುವುದು. ನಂತರ ಅದನ್ನು ದೇವಸ್ಥಾನದಲ್ಲಿರುವ ದೇವರ ಹುಂಡಿಗೆ ಅರ್ಪಿಸಬೇಕು.
- ನಂತರ ವಧು / ವರನು ಒರಳುಕಲ್ಲಿನ ಪೂಜೆಯನ್ನು ನೆರವೇರಿಸಿ ಒರಳುಕಲ್ಲಿನಲ್ಲಿರುವ ಅರಿಶಿನದ ಕೊಂಬನ್ನು ಕುಟ್ಟಬೇಕು.
- ಆಮೇಲೆ ವಧು / ವರರ ಜೊತೆಗೆ ಕಾರ್ಯಕ್ರಮಕ್ಕೆ ಆಗಮಿಸಿದ ಎಲ್ಲಾ ಆಹ್ವಾನಿತ ಬಂಧು ಮಿತ್ರರು ಕ್ರಮವಾಗಿ ಒರಳುಕಲ್ಲಿನ ಪೂಜೆಯನ್ನು ಮಾಡಿ ಅರಿಶಿನವನ್ನು ಕುಟ್ಟುವ ಶಾಸ್ತ್ರವನ್ನು ನೆರವೇರಿಸಬೇಕು.

ತದ ನಂತರ ವಧು / ವರನು 11 ಮುತ್ತೈದೆಯರಿಗೆ ತಾಂಬೂಲದ ಜೊತೆಗೆ ಬಳೆಗಳನ್ನು ಕೊಟ್ಟು ಅವರ ಪಾದಗಳಿಗೆ ನಮಸ್ಕಾರವನ್ನು ಮಾಡಿ ಅಕ್ಷತೆ ಸಮೇತ ಆಶೀರ್ವಾದವನ್ನು ಪಡೆಯಬೇಕು.

**ವರನನ್ನು ಕರೆಯುವಿಕೆ:**

ವಧುವಿನ ಕಡೆಯವರು ವರನನ್ನು ಕರೆಯಲು ಕಡ್ಲೆಬೆಲ್ಲದ ಗಂಟು ಕಟ್ಟಿಕೊಂಡು ಮಗಳು ಮತ್ತು ಅಳಿಯರೊಂದಿಗೆ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಹೂವುಗಳಿರುವ ತಟ್ಟೆಯ ಸಮೇತ ವರನ ಮನೆಗೆ ಬರುವುದು.

***ಸೂಚನೆ:*** ವರನನ್ನು ಕರೆಯಲು ಬರುವವರು ತರುವ ಗಂಟು ಮತ್ತು ಛತ್ರಕ್ಕೆ ಹೋಗುವ ವರನಿಗೆ ಕಟ್ಟುವ ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳು ಒಂದೇ ರೀತಿಯವು.

**ಸಿದ್ಧತೆ:**

**ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳು**

1 ಹುರಿಗಡಲೆ (ಕಡ್ಲೆ ಪಪ್ಪು) 2 ½ ಕೆ.ಜಿ., ಅರಿಶಿನ, ಕುಂಕುಮ – ತಲಾ ಎರಡು ಪೊಟ್ಟಣಗಳು, ತೆಂಗಿನಕಾಯಿ (ನಾರಿರುವುದು) – 2, ವೀಳ್ಯೆದೆಲೆ – 11, ಅಡಿಕೆ – 100 ಗ್ರಾಂ, ಬಿಳಿ ಬಣ್ಣದ ಕಟ್ಟಿದ ಹೂವು – 1 ಮೊಳ, ಬಾಳೆಹಣ್ಣು – 11, ಖರ್ಜೂರ – 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು (ಕವಲಿರುವುದು) – 5 ಮತ್ತು ಈ ಸಾಮಗ್ರಿಗಳನ್ನು ಕಟ್ಟಲು 1½ ಮೀಟರ್ ಉದ್ದದ ಬಿಳಿಯ ಬಟ್ಟೆ ಮತ್ತು ಸುತ್ತಿ ಗಂಟು ಹಾಕಲು ಬಿಳಿ ದಾರ.

**ವಿಧಾನ:**

1 ವರನ ಮನೆಯಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಹಾಕಿರುವ ಎರಡು ಮಣೆಗಳ ಮೇಲೆ ಬಿಳಿ ವಸ್ತ್ರವನ್ನು ಹಾಸಬೇಕು.

1 ಮಣೆಯ ಎರಡೂ ಬದಿಯಲ್ಲಿ ಎರಡು ದೀಪಸ್ತಂಭಗಳನ್ನು ಇಟ್ಟು ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

1 ನಂತರ ಗಂಟಿನೊಡನೆ ಬಂದ ವಧುವಿನ ಮನೆಯ ಮಗಳೂ ಅಳಿಯುರನ್ನು ಮಣೆಗಳಿಗೆ ಬಲಪ್ರದಕ್ಷಿಣೆಯಾಕಾರದಲ್ಲಿ ಬರಮಾಡಿಕೊಂಡು ಮಣೆಗಳ ಮೇಲೆ ಕೂರಿಸಿ ಅವರಿಬ್ಬರಿಗೂ ನಿಂಬೆಹಣ್ಣಿನ ಪಾನಕವನ್ನು ಕುಡಿಯಲು ಕೊಡಬೇಕು.

1 ಅವರು ಪಾನಕವನ್ನು ಕುಡಿದ ನಂತರ ದೀಪಸ್ತಂಭಗಳಿಗೆ ಮತ್ತು



ಅವರಿಬ್ಬರಿಗೂ ಅರಿಶಿನ ಕುಂಕುಮ ಅಕ್ಷತೆ ಮತ್ತು ಹೂವನ್ನು ಕೊಟ್ಟು, ಅರಿಶಿನ ಕುಂಕುಮದ ತಟ್ಟೆಗೆ ಅವರಿಬ್ಬರಿಂದ ನಮಸ್ಕಾರ ಹಾಕಿಸಬೇಕು.

1 ಅವರು ತಂದ ಗಂಟನ್ನು 1 ಸ್ಟೀಲ್ ಬೇಸನ್ನಿನಲ್ಲಿ ತೆಗೆದುಕೊಂಡು ಮನೆಯ ದೇವರ ಕೋಣೆಯಲ್ಲಿ ಇರಿಸಬೇಕು.

1 ವರನನ್ನು ಕರೆಯಲು ಬಂದಿರುವ ಮಗಳು ವರನ ಮನೆಯಲ್ಲಿರುವ ಎಲ್ಲಾ ಮುತ್ತೈದೆಯರಿಗೆ ಅರಿಶಿನ ಕುಂಕುಮ, ಅಕ್ಷತೆ ಮತ್ತು ಹೂವನ್ನು ಕೊಡಬೇಕು

1 ನಂತರ, ನೆರೆದಿರುವ ಎಲ್ಲರನ್ನು ಉದ್ದೇಶಿಸಿ ವರನೊಡನೆ ಸಕುಟುಂಬ ಸಮೇತರಾಗಿ ಮದುವೆ ಮನೆಗೆ ಬರಬೇಕೆಂದು ಆಹ್ವಾನಿಸುವುದು.

**ವಧುವನ್ನು ಕರೆಯುವಿಕೆ:**

ಹಾಗೆಯೆ, ವರನ ಕಡೆಯವರು ವಧುವನ್ನು ಕರೆಯಲು ಕಡ್ಲೆಬೆಲ್ಲದ ಗಂಟು ಕಟ್ಟಿಕೊಂಡು ಮಗಳು ಅಳಿಯರೊಂದಿಗೆ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಹೂವುಗಳಿರುವ ತಟ್ಟೆಯ ಸಮೇತ ವಧುವಿನ ಮನೆಗೆ ಬರುವುದು.

***ಸೂಚನೆ:*** ವಧುವನ್ನು ಕರೆಯಲು ಬರುವವರು ತರುವ ಗಂಟು ಮತ್ತು ಛತ್ರಕ್ಕೆ ಹೋಗುವ ವಧುವಿಗೆ ಕಟ್ಟುವ ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳು ಒಂದೇ ರೀತಿಯವು.

**ಸಿದ್ಧತೆ:**

**ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳು :**

1 ಹುರಿಗಡಲೆ (ಕಡ್ಲೆ ಪಪ್ಪು) 2½ ಕೆ.ಜಿ., ಅರಿಶಿನ, ಕುಂಕುಮ – ತಲಾ ಎರಡು ಪೊಟ್ಟಣಗಳು, ತಳದ ಕೊಬ್ಬರಿ ಬಟ್ಟಲು – 2, ವೀಳೆಯದೆಲೆ – 11, ಅಡಿಕೆ – 100 ಗ್ರಾಂ, ಬಿಳಿ ಬಣ್ಣದ ಕಟ್ಟಿದ ಹೂವು – 1 ಮೊಳ, ಬಾಳೇಹಣ್ಣು – 11, ಖರ್ಜೂರ – 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು (ಕವಲಿರುವುದು) – 5, ಹಸಿರು ಬಣ್ಣದ ರವಿಕೆ ಬಟ್ಟೆ – 1 ಮತ್ತು ಇವೆಲ್ಲಾ ಸಾಮಗ್ರಿಗಳನ್ನು ಕಟ್ಟಲು 1½ ಮೀಟರ್ ಉದ್ದದ ಬಿಳಿ ಬಟ್ಟೆ ಮತ್ತು ಸುತ್ತಿ ಗಂಟು ಹಾಕಲು ಬಿಳಿ ದಾರ.

**ವಿಧಾನ:**

1 ವಧುವಿನ ಮನೆಯಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಹಾಕಿರುವ ಎರಡು ಮಣೆಗಳ ಮೇಲೆ ಬಿಳಿ ವಸ್ತ್ರವನ್ನು ಹಾಸಬೇಕು.

1 ಮಣೆಗಳ ಎರಡೂ ಬದಿಯಲ್ಲಿ ಎರಡು ದೀಪಸ್ತಂಭಗಳನ್ನು ಇಟ್ಟು ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

1 ನಂತರ ಗಂಟಿನೊಡನೆ ಬಂದ ವರನ ಮನೆಯ ಮಗಳು ಮತ್ತು ಅಳಿಯರನ್ನು ಮಣೆಗಳಿಗೆ ಬಲಪ್ರದಕ್ಷಿಣೆಯಾಕಾರದಲ್ಲಿ ಬರಮಾಡಿಕೊಂಡು ಮಣೆಗಳ ಮೇಲೆ ಕೂರಿಸಿ ಅವರಿಬ್ಬರಿಗೂ ನಿಂಬೆಹಣ್ಣಿನ ಪಾನಕವನ್ನು ಕುಡಿಯಲು ಕೊಡಬೇಕು.

1 ಅವರು ಪಾನಕವನ್ನು ಕುಡಿದ ನಂತರ ದೀಪಸ್ತಂಭಗಳಿಗೆ ಮತ್ತು ಅವರಿಬ್ಬರಿಗೂ ಅರಿಶಿನ ಕುಂಕುಮ ಅಕ್ಷತೆ ಮತ್ತು ಹೂವನ್ನು ಕೊಟ್ಟು ಅರಿಶಿನ ಕುಂಕುಮದ ತಟ್ಟೆಗೆ ಅವರಿಂದ ನಮಸ್ಕಾರ ಹಾಕಿಸಬೇಕು.

1 ಅವರು ತಂದ ಗಂಟನ್ನು 1 ಸ್ಟೀಲ್ ಬೇಸಿನ್ನಲ್ಲಿ ತೆಗೆದುಕೊಂಡು ಮನೆಯ ದೇವರ ಕೋಣೆಯಲ್ಲಿ ಇರಿಸಬೇಕು.

1 ವಧುವನ್ನು ಕರೆಯಲು ಬಂದಿರುವ ಮಗಳು ವಧುವಿನ ಮನೆಯಲ್ಲಿರುವ ಎಲ್ಲಾ ಮುತ್ತೈದೆಯರಿಗೆ ಅರಿಶಿನ ಕುಂಕುಮ, ಅಕ್ಷತೆ ಮತ್ತು ಹೂವನ್ನು ಕೊಡಬೇಕು ನಂತರ, ನೆರೆದಿರುವ ಎಲ್ಲರನ್ನು ಉದ್ದೇಶಿಸಿ ವಧುವಿನೊಡನೆ ಸಕುಟುಂಬ ಸಮೇತರಾಗಿ ಮದುವೆ ಮನೆಗೆ ಬರಬೇಕೆಂದು ಆಹ್ವಾನಿಸುವುದು.
ವಧು ಮತ್ತು ವರರು ತಮ್ಮ ಬಂಧು ಮಿತ್ರರ ಒಡಗೂಡಿ ಪ್ರತ್ಯೇಕವಾಗಿ ತಮ್ಮ ಮನೆಗಳಿಂದ ಹೊರಟು ಛತ್ರದೆಡೆಗೆ ತೆರಳಬೇಕು.

***ಸೂಚನೆ:*** ಮದುವೆಯ ಕಾರ್ಯವನ್ನು ನಡೆಸುತ್ತಿರುವ ಮನೆಯವರು ಮೊದಲು ಛತ್ರಕ್ಕೆ ತೆರಳಬೇಕು. ಛತ್ರಕ್ಕೆ ಆಗಮಿಸಿದ ವಧು / ವರರು ಛತ್ರದ ಒಳಗೆಹೋಗುವ ಮುನ್ನ, ವಧು/ವರನಿಗೆ ಮನೆಯ ಹೆಣ್ಣು ಮಗಳು ಅಥವಾ ಸೋದರತ್ತೆಯವರು ಕೆಂಪು ನೀರಿನ ಆರತಿ ಮಾಡಿ ಕಾಲು ತೊಳೆದು, ಅವರವರ ಕೋಣೆಗೆ ಕರೆತರುವುದು.



**ತಿಂಡಿ ಕಾಫಿಯ ಸಮಯ :**

**ಛತ್ರದಲ್ಲಿ ವರನ ಕೊಠಡಿಯ ಸಿದ್ಧತೆ**

1 ಕೋಣೆಯ ದೇವರ ಮೂಲೆಯಲ್ಲಿ ಶುಚಿ ಮಾಡಿ ರಂಗೋಲಿ ಇಟ್ಟು, ಲಕ್ಷ್ಮಿ, ಸರಸ್ವತಿ ಮತ್ತು ಗಣಪತಿಯ ಭಾವಚಿತ್ರಗಳನ್ನು ಇರಿಸಬೇಕು

1 ಭಾವಚಿತ್ರಗಳಿಗೆ ಅರಿಶಿನ ಕುಂಕುಮ ಇಟ್ಟು ಹೂವುಗಳಿಂದ ಅಲಂಕರಿಸಬೇಕು

1 ದೇವರ ಬಲ ಭಾಗದಲ್ಲಿ ಮೂರು ಕಾಲಿನ ಮಣೆಯ ಮೇಲೆ ಒಂದು ತಟ್ಟೆಯನ್ನಿಟ್ಟು ಆ ತಟ್ಟೆಯಲ್ಲಿ ಅಕ್ಕಿಯನ್ನು ತುಂಬಿ ಅದರ ಮೇಲೆ ಕಳಸವಿರಿಸಬೇಕು

1 ಕಳಸದಲ್ಲಿ ನೀರು ತುಂಬಿ, ಅರಿಶಿನ ಕುಂಕುಮ ಹಚ್ಚಿ, ಐದು ವೀಳೆಯದೆಲೆ ಮತ್ತು ಹೂವಿನಿಂದ ಅಲಂಕರಿಸಬೇಕು.

1 ನಂತರ, ಗಂಧಿಗೆ ಅಂಗಡಿಯಿಂದ ತಂದ ಕಳಸದ ವಸ್ತುಗಳನ್ನು (ಅರಿಶಿನ ಕುಂಕುಮದ ಡಬ್ಬಿ–ಮರದ್ದು, ಸೀರಣಿಗೆ, ಬಾಚಣಿಗೆ, ಕನ್ನಡಿ, ಬಳೆ ಬಿಚ್ಚೋಲೆ 2 ಮತ್ತು ವಿಭೂತಿ ಗಟ್ಟಿ – 1) ಒಂದು ತಟ್ಟೆಯಲ್ಲಿ ಜೋಡಿಸುವುದರ ಜೊತೆಗೆ ಎರಡು ವೀಳೆಯದೆಲೆ, ಎರಡು ಅಡಿಕೆ, ಎರಡು ಬಾಳೆಹಣ್ಣು, ಒಂದು ನಿಂಬೆಹಣ್ಣು, ಕಡಗ, ಕಾಲುಸುತ್ತು ಮತ್ತು ಮಾಂಗಲ್ಯವನ್ನು ಇಡಬೇಕು ಆನಂತರ ಎರಡು ದೀಪಸ್ತಂಭಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

**ಕಳಸದ ತಟ್ಟೆಯ ಪಕ್ಕದಲ್ಲಿ ಪಾವಡದ ತಟ್ಟೆಯ ಸಿದ್ಧತೆ:**

1 ಬಿದಿರಿನ ಪಾವಡದ ತಟ್ಟೆಗೆ 1½ ಮೀಟರ್ ಉದ್ದದ ಬಿಳಿಬಟ್ಟೆಯನ್ನು (ಖಾದಿ) ಹಾಕಿ ನಾಲ್ಕೂ ಬದಿಗಳಲ್ಲಿ ಅರಿಶಿನ, ಕುಂಕುಮ ಮತ್ತು ಹೂವನ್ನು ಇಟ್ಟು ಅದರ ಒಂದು ಪಕ್ಕದಲ್ಲಿ ಸ್ವಲ್ಪ ವೀಳೆಯದೆಲೆ, ಅಡಿಕೆ ಚೂರು ಮತ್ತು ಬಟ್ಟಲು ಅಡಿಕೆಯ ಜೊತೆಗೆ ಚಿಟ್ಟನ್ನಿಡಬೇಕು. ಮತ್ತೊಂದು ಮಣೆಯ ಮೇಲೆ ವಧುವಿಗೆ ಕೊಡುವ ವಸ್ತ್ರ ಹಾಗೂ ಒಡವೆಗಳನ್ನಿಟ್ಟು ಅದರ ಮೇಲೆ ವೀಳೆಯದೆಲೆ–2, ಅಡಿಕೆ–2, ಬಾಳೆಹಣ್ಣು–2 ಮತ್ತು ದಕ್ಷಿಣೆಯಾಗಿ 11 ರೂಪಾಯಿಗಳನ್ನಿಡಬೇಕು.
ಇಷ್ಟೆಲ್ಲಾ ಸಿದ್ಧವಾದ ಮೇಲೆ, ಛತ್ರದ ಅಡುಗೆ ಮನೆಯಲ್ಲಿ ತಯಾರಾದ ಪ್ರಸಾದವನ್ನು ತಂದು ನೈವೇದ್ಯಕ್ಕೆ ಇಟ್ಟು ಕಳಸದಲ್ಲಿ ಮನೆದೇವರನ್ನು

ಆವಾಹನೆ ಮಾಡಿಕೊಂಡು ವರನ ಕೈಯಲ್ಲಿ ದೇವರ ಪೂಜೆಯನ್ನು ಮಾಡಿಸಬೇಕು

**ಛತ್ರದಲ್ಲಿ ವಧುವಿನ ಕೊಠಡಿಯ ಸಿದ್ಧತೆ:**

- ಕೋಣೆಯ ದೇವರ ಮೂಲೆಯಲ್ಲಿ ಶುಚಿ ಮಾಡಿ ರಂಗೋಲಿ ಇಟ್ಟು, ಲಕ್ಷ್ಮಿ, ಸರಸ್ವತಿ ಮತ್ತು ಗಣಪತಿಯ ಭಾವಚಿತ್ರಗಳನ್ನು ಇರಿಸಬೇಕು
- ಅರಿಶಿನ ಕುಂಕುಮ ಹಚ್ಚಿ ಹೂವುಗಳಿಂದ ಅಲಂಕರಿಸಿ ಅದರ ಬಲ ಭಾಗದಲ್ಲಿ ಮೂರು ಕಾಲಿನ ಮಣೆಯ ಮೇಲೆ ಒಂದು ತಟ್ಟೆಯನ್ನಿಟ್ಟು ಆ ತಟ್ಟೆಯಲ್ಲಿ ಅಕ್ಕಿಯನ್ನು ತುಂಬಿ ಅದರ ಮೇಲೆ ಕಳಸವಿರಿಸಬೇಕು
- ಕಳಸದಲ್ಲಿ ನೀರು ತುಂಬಿ, ಅರಿಶಿನ ಕುಂಕುಮ ಹಚ್ಚಿ, ಐದು ವೀಳೆಯದೆಲೆ ಮತ್ತು ಹೂವಿನಿಂದ ಅಲಂಕರಿಸಬೇಕು.
- ನಂತರ, ಗಂಧಿಗೆ ಅಂಗಡಿಯಿಂದ ತಂದ ಕಳಸದ ವಸ್ತುಗಳನ್ನು (ಅರಿಶಿನ ಕುಂಕುಮದ ಡಬ್ಬಿ-ಮರದ್ದು, ಸೀರಣಿಗೆ, ಬಾಚಣಿಗೆ, ಕನ್ನಡಿ, ಬಳೆ ಬಿಚ್ಚೋಲೆ 2 ಮತ್ತು ವಿಭೂತಿ ಗಟ್ಟಿ – 1) ಒಂದು ತಟ್ಟೆಯಲ್ಲಿ ಜೋಡಿಸುವುದರ ಜೊತೆಗೆ ಎರಡು ವೀಳೆಯದೆಲೆ, ಎರಡು ಅಡಿಕೆ, ಎರಡು ಬಾಳೆಹಣ್ಣು, ಒಂದು ನಿಂಬೆಹಣ್ಣನ್ನು ಇಡಬೇಕು ಆನಂತರ ಎರಡು ದೀಪಸ್ತಂಭಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

**ಐದು ಹರಣೆ ಕುಡಿಕೆಗಳ ಸಿದ್ಧತೆ:**

ಹರಣೆ ಕುಡಿಕೆಗಳಲ್ಲಿ ಇಡುವ ವಸ್ತುಗಳಾದ ವೀಳ್ಯೆದೆಲೆ, ಅಡಿಕೆ, ಕಜ್ಜಾಯ, ಖರ್ಜೂರ, ಒಣದ್ರಾಕ್ಷಿ, ದಕ್ಷಿಣೆ ಕಾಸು ಮತ್ತು ಬಾಳೆಹಣ್ಣುಗಳು ದೇವಿ ಲಕ್ಷ್ಮಿಗೆ ಪ್ರಿಯವಾದವುಗಳು. ಅಂತೆಯೇ ಲಕ್ಷ್ಮಿಕಟಾಕ್ಷ ವಧುವಿನ ಮೇಲೆ ಸದಾ ಇರಲಿ ಎಂಬ ಬಯಕೆಯೊಡನೆ ಈ ಶಾಸ್ತ್ರವನ್ನು ನೆರವೇರಿಸುವುದು.

- ಮುಚ್ಚಳವಿರುವ ಮಣ್ಣಿನ ಕುಡಿಕೆ ಅಥವಾ ಸ್ಟೀಲ್ ಚೊಂಬು ಮತ್ತು ಮುಚ್ಚಳ ತಗೆದುಕೊಂಡು ಅದರ ಹೊರಮೈಗೆ ಸುಣ್ಣದ ನೀರಿನಿಂದ ಲೇಪನವನ್ನು ಮಾಡಿ ಅದು ಒಣಗಿದ ನಂತರ ಅರಿಶಿನ ಕುಂಕುಮವನ್ನಿಟ್ಟು ಐದು ಎಳೆಗಳ ಬಿಳಿಯ ದಾರವನ್ನು ಅರಿಶಿನದ ಪುಡಿಯನ್ನು ನೀರಿನಲ್ಲಿ ಸೇರಿಸಿದ ದ್ರಾವಣದಲ್ಲಿ ಅದ್ದಿದ ನಂತರ ದಾರವನ್ನು ಕವಲಿರುವ ಅರಿಶಿನದ ಕೊಂಬಿಗೆ ಕಟ್ಟಿ ಕಂಕಣವನ್ನು ಮಾಡಿಕೊಂಡು ಮಣ್ಣಿನ ಕುಡಿಕೆ ಅಥವಾ ಸ್ಟೀಲ್ ಚೊಂಬಿನ ಕಂಠಕ್ಕೆ ಭದ್ರವಾಗಿ ಕಟ್ಟಬೇಕು.



- ಹೀಗೆ ಸಿದ್ಧಪಡಿಸಿದ ಐದು ಹರಣೆ ಕುಡಿಕೆಯೊಳಗೆ ತಲಾ ಎರಡು ವೀಳೆಯದೆಲೆ, ಎರಡು ಅಡಿಕೆ, ಎರಡು ಕಜ್ಜಾಯ, ಒಂದು ಖರ್ಜೂರ, ನಾಲ್ಕು ಒಣದ್ರಾಕ್ಷಿ, ದಕ್ಷಿಣೆ ಕಾಸು 1 ರೂಪಾಯಿಯ ನಾಣ್ಯ ಮತ್ತು ಒಂದು ಬಾಳೆಹಣ್ಣನ್ನು ತುಂಬಿ, ಮುಚ್ಚಳ ಮುಚ್ಚಿ ಮೇಲೆ ಅರಿಶಿನ, ಕುಂಕುಮ ಮತ್ತು ಬಿಡಿ ಹೂವನ್ನು ಇಡಬೇಕು.
  ನಂತರ, ಶುಭ್ರವಾದ 2 ಇಸ್ತ್ರಿ ಎಲೆಗಳನ್ನು ಹರಡಿ ಅವುಗಳ ಮೇಲೆ 1½ ಸೇರು ಅಕ್ಕಿಯನ್ನು ಹರಡಿ ಅದರ ಮೇಲೆ ಮೊದಲೇ ಸಿದ್ಧಪಡಿಸಿದ ಐದು ಹರಣೆ ಕುಡಿಕೆಗಳನ್ನಿರಿಸುವುದು.

**ಕಳಸದ ತಟ್ಟೆಯ ಪಕ್ಕದಲ್ಲಿ ಪಾವಡದ ತಟ್ಟೆಯ ಸಿದ್ಧತೆ:**

- ಬಿದಿರಿನ ಪಾವಡದ ತಟ್ಟೆಗೆ 1½ ಮೀಟರ್ ಉದ್ದದ ಬಿಳಿಬಟ್ಟೆಯನ್ನು (ಖಾದಿ) ಹಾಕಿ ನಾಲ್ಕೂ ಬದಿಗಳಲ್ಲಿ ಅರಿಶಿನ, ಕುಂಕುಮ ಹೂವನ್ನು ಇಟ್ಟು ಅದರ ಒಂದು ಪಕ್ಕದಲ್ಲಿ ಸ್ವಲ್ಪ ವೀಳೆಯದೆಲೆ, ಅಡಿಕೆ ಚೂರು ಮತ್ತು ಬಟ್ಟಲು ಅಡಿಕೆಯ ಜೊತೆಗೆ ಚಿಟ್ಟನ್ನಿಡಬೇಕು. ಮತ್ತೊಂದು ಮಣೆಯ ಮೇಲೆ ವರನಿಗೆ ಕೊಡುವ ವಸ್ತ್ರ ಹಾಗೂ ಒಡವೆಗಳನ್ನಿಟ್ಟು ಅದರ ಮೇಲೆ ವೀಳೆಯದೆಲೆ-2, ಅಡಿಕೆ-2, ಬಾಳೆಹಣ್ಣು-2 ಮತ್ತು ದಕ್ಷಿಣೆಯಾಗಿ 11 ರೂಪಾಯಿಗಳನ್ನಿಡಬೇಕು.

ಇಷ್ಟೆಲ್ಲಾ ಸಿದ್ಧವಾದ ಮೇಲೆ, ಛತ್ರದ ಅಡುಗೆ ಮನೆಯಲ್ಲಿ ತಯಾರಾದ ಪ್ರಸಾದವನ್ನು ತಂದು ನೈವೇದ್ಯಕ್ಕೆ ಇಟ್ಟು ಕಳಸದಲ್ಲಿ ಮನೆದೇವರನ್ನು ಆವಾಹನೆ ಮಾಡಿಕೊಂಡು ವಧುವಿನ ಕೈಯಲ್ಲಿ ದೇವರ ಪೂಜೆಯನ್ನು ಮಾಡಿಸಬೇಕು.

**ವಧುವಿನ ಪುಣ್ಯಾಃಕ್ಕೆ ಸಿದ್ಧತೆ :**

- ಮಂಟಪವನ್ನು ಶುಚಿಗೊಳಿಸಿ ರಂಗೋಲಿ ಇಡಬೇಕು. ಆ ರಂಗೋಲಿಯ ಮೇಲೆ 1 ಮಣೆಯನ್ನು ಹಾಕಿ ಮಣೆಯ ಮೇಲೆ ಬಿಳಿ ವಸ್ತ್ರವನ್ನು ಹಾಸಬೇಕು.
- ಮಣೆಯ ಮುಂದೆ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿಟ್ಟು ಎರಡರಲ್ಲೂ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ನಂತರ, ಕೆಳಗಿನ ಸಾಮಗ್ರಿಗಳನ್ನು ಸಿದ್ಧಗೊಳಿಸಬೇಕು.

- ಇಸ್ತ್ರಿ ಎಲೆ – 2, ಅಕ್ಕಿ – 1 1/2 ಸೇರು, ಚೊಂಬು – 1 (ಮಧ್ಯ ಭಾಗದಲ್ಲಿ ಸುಣ್ಣವನ್ನು ಲೇಪಿಸಿರಬೇಕು), ಲೋಟ – 2 (ಮಧ್ಯ ಭಾಗದಲ್ಲಿ ಸುಣ್ಣವನ್ನು ಲೇಪಿಸಿರಬೇಕು), ಮಾವಿನ ಕುಡಿಗಳು – ಸ್ವಲ್ಪ, ನಾರಿರುವ ತೆಂಗಿನಕಾಯಿ – 1 (ಕಳಸಕ್ಕೆಂದು), ನಾರಿಲ್ಲದ ತೆಂಗಿನಕಾಯಿ – 2 (ಪೂಜೆಗೆಂದು) ಹೂವು, ಕಟ್ಟಿದ ಬಿಳಿ ಹೂವು, ಬಿಡಿಯಾದ ಬಿಳಿ ಹೂವು ಮತ್ತು ಗುಲಾಬಿ ಹೂಗಳು ಸ್ವಲ್ಪ, 1 ತಟ್ಟೆಯಲ್ಲಿ ಅರಿಶಿನ, ಕುಂಕುಮ ಮತ್ತು ಅಕ್ಷತೆಯ ಬಟ್ಟಲು ಜೊತೆಗೆ ಬಿಡಿ ಹೂವುಗಳು, ವೀಳೆಯದೆಲೆ ಮತ್ತು ಅಡಿಕೆ – ಸ್ವಲ್ಪ, ಬಾಳೆಹಣ್ಣು – 24, ಖರ್ಜೂರ, ಬೆಲ್ಲದ ಉಂಡೆ ಸ್ವಲ್ಪ, ದಕ್ಷಿಣೆಯ ಕಾಸು. ಗಂಧದ ಕಡ್ಡಿ, ತುಪ್ಪದ ಬತ್ತಿಗಳು, ಘಂಟೆ, ಆರತಿ ತಟ್ಟೆ, ಗಂಧದ ಕಲ್ಲು, ಗಂಧದ ಚಕ್ಕೆ ಮತ್ತು ಬೆಂಕಿ ಪೊಟ್ಟಣ, ವಧುವಿನ ಕೊರಳಿಗೆ ಹಾಕಲು ಬಿಳಿ ಹೂವಿನ ಹಾರ ಮತ್ತು ಗಣಪತಿ ಪೂಜೆಗೆಂದು ಸ್ವಲ್ಪ ಗರಿಕೆ.

**ವಿಧಾನ:**

- ಸಿದ್ಧವಾದ ಮಂಟಪಕ್ಕೆ, ಸಿಂಗರಿಸಿದ ವಧುವನ್ನು ಕರೆದುಕೊಂಡು ಬಂದು ಮಣೆಯ ಬಲಭಾಗದಿಂದ ಬರುವಂತೆ ಮಣೆಯ ಮೇಲೆ ಕೂರಿಸಿ ಪುಣ್ಯಾಃ ಶಾಸ್ತ್ರವನ್ನು ಪುರೋಹಿತರ ಸಹಾಯದಿಂದ ನೆರವೇರಿಸುವುದು.
- ನಂತರ, ಮೂವರು ಮುತ್ತೈದೆಯರು ದೀಪಸ್ತಂಭಗಳಿಗೆ ಮತ್ತು ವಧುವಿಗೆ ಅರಿಶಿನ ಕುಂಕುಮ ಮತ್ತು ಅಕ್ಷತೆಯೊಂದಿಗೆ ಹೂವನ್ನಿಟ್ಟು ನಂತರ ಕೆಂಪು ನೀರಿನ ಆರತಿ ಮಾಡಿ, ಆಕೆಯ ಹಣೆಗೆ ತಿಲಕವನ್ನಿಟ್ಟು ಆರತಿಯ ನೀರನ್ನು ಛತ್ರದ ಮುಂಬಾಗಿಲಿನಲ್ಲಿ ಅಡ್ಡಲಾಗಿ ಸುರಿದು ಖಾಲಿಯಾದ ತಟ್ಟೆಯೊಡನೆ ಹಿಂದಿರುಗಿ ವಧುವಿನ ಕೈಯಿಂದ ದಕ್ಷಿಣೆ ಕಾಸನ್ನು ತಾಂಬೂಲದೊಂದಿಗೆ ಪಡೆಯಬೇಕು. ನಂತರ ಮಣೆಯ ಎಡಭಾಗದಿಂದ ವಧುವನ್ನು ಎಬ್ಬಿಸಿ ವಧುವಿನ ಕೋಣೆಗೆ ಕರೆದುಕೊಂಡು ಹೋಗುವುದು.

**ಲಗ್ನ ಕಟ್ಟಿಸುವುದು** (ವರನ ಕಡೆಯವರು ಮಾಡುವ ಶಾಸ್ತ್ರ) :

ವರನ ಮತ್ತು ವಧುವಿನ ಮನೆಯವರು ಮುಂದೆ ನಡೆಯಲಿರುವ ವಿವಾಹ ಸಂಬಂಧಕ್ಕೆ ಸಭಾಂಗಣದಲ್ಲಿ ನೆರೆದಿರುವ ಬಂಧು ಮಿತ್ರರೆದುರು ಪರಸ್ಪರ ಒಪ್ಪಿಗೆ ಸೂಚಿಸುವ ಕಾರ್ಯಕ್ರಮ.



**ಸಿದ್ಧತೆ:**

- ಶಾಸ್ತ್ರಕ್ಕೆ ಅಣಿಗೊಳಿಸಬೇಕಾದ ಏಳು ತಟ್ಟೆಗಳ ಸಾಮಗ್ರಿಗಳು:
- ಮೊದಲನೆಯ ತಟ್ಟೆಯಲ್ಲಿ ಅರಿಶಿನ, ಕುಂಕುಮ ಮತ್ತು ಅಕ್ಷತೆಯ ಬಟ್ಟಲು ಜೊತೆಗೆ ಬಿಡಿ ಹೂವುಗಳು.
- ಎರಡನೆಯ ತಟ್ಟೆಯಲ್ಲಿ ಗಣಪತಿ ಪೂಜೆಗೆ – ವೀಳ್ಯೆದೆಲೆ –2, ಅಡಿಕೆ –2, ತೆಂಗಿನಕಾಯಿ –1, ಗಂಧದಕಡ್ಡಿ –2, ತುಪ್ಪದ ಬತ್ತಿ–4, ಬಾಳೆಹಣ್ಣು –2, ಮತ್ತು ದಕ್ಷಿಣೆ ಹಣ.
- ಮೂರನೆಯ ತಟ್ಟೆಯಲ್ಲಿ ಬಾಳೆಹಣ್ಣು 24.
- ನಾಲ್ಕನೆಯ ತಟ್ಟೆಯಲ್ಲಿ ವೀಳೆಯದೆಲೆ ಮತ್ತು ಅಡಿಕೆಗಳು.
- ಐದನೆಯ ತಟ್ಟೆಯಲ್ಲಿ ಸೀರೆ, ರವಿಕೆ, ವೀಳ್ಯೆದೆಲೆ –2, ಅಡಿಕೆ –2, ಬಾಳೆಹಣ್ಣು –2 ಮತ್ತು ದಕ್ಷಿಣೆ ಹಣ (ಲಗ್ನ ಕಟ್ಟಿಸಿದ ನಂತರ ಈ ಸೀರೆಯನ್ನು ವಧುವು ನಾಗರ ಶಾಸ್ತ್ರಕ್ಕೆ ಹೋಗಲು ಧರಿಸಬೇಕು).
- ಆರನೆಯ ತಟ್ಟೆಯಲ್ಲಿ ಸ್ವಲ್ಪ ಅಕ್ಕಿ ಮತ್ತು ಐದು ಬೆಲ್ಲದ ಉಂಡೆಗಳು.
- ಏಳನೆಯ ತಟ್ಟೆಯಲ್ಲಿ ವಧುವಿಗೆ ವರನ ಮನೆಯವರಿಂದ ಕೊಡಲಿರುವ ಒಡವೆಗಳು.

**ವಿಧಾನ:**

- ಮಂಟಪದಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳಿ ವಸ್ತ್ರವನ್ನು ಹಾಸಬೇಕು.
- ಪಂಚೆ ಮತ್ತು ಅಂಗಿಯನ್ನು ತೊಟ್ಟು, ಶಲ್ಯವನ್ನು ಹೊದ್ದು ತಲೆಯ ಮೇಲೆ ಟೋಪಿ ಧರಿಸಿರುವ ಮನೆಯ ಹಿರಿಯ ಅಳಿಯರವರನ್ನು ಯಜಮಾನರನ್ನಾಗಿಸಬೇಕು.
- ನಂತರ ಅವರನ್ನು ಮಣೆಯ ಮೇಲೆ ಕೂರಿಸಿ ಅವರ ಕೈಯಲ್ಲಿ ಕಡ್ಲೆಬೆಲ್ಲದ ಒಂದು ಗಂಟನ್ನು ಕೊಟ್ಟು ಅದನ್ನು ತಮ್ಮ ತೊಡೆಯ ಮೇಲೆ ಇಟ್ಟುಕೊಳ್ಳಲು ತಿಳಿಸಬೇಕು.
- ಯಜಮಾನರ ಎದಿರು ಎಡಬಲಗಳಲ್ಲಿರುವ ಎರಡು ಪ್ರತ್ಯೇಕ ಮಣೆಗಳ ಮೇಲೆ ವರನ ಮತ್ತು ವಧುವಿನ ತಂದೆಯರನ್ನು ಅಥವಾ ಆ ಸ್ಥಾನದಲ್ಲಿ ನಿಂತಿರುವ ಹಿರಿಯರನ್ನು ಶಲ್ಯ ಹೊದ್ದು ಟೋಪಿಯನ್ನಿರಿಸಿಕೊಂಡು ಎದುರು ಬದುರು ಕುಳಿತುಕೊಳ್ಳುವಂತೆ ತಿಳಿಸಬೇಕು.

- ಬೀಗರಿಬ್ಬರು ಬದಲಾಯಿಸಿಕೊಳ್ಳಲೆಂದು ಪ್ರತ್ಯೇಕವಾಗಿ ಎರಡು ತಟ್ಟೆಗಳಲ್ಲಿ ನಾರಿರುವ ತೆಂಗಿನಕಾಯಿ–1, ವೀಳೆಯದೆಲೆ –2, ಅಡಿಕೆ –2, ಬಾಳೆಹಣ್ಣು –2 ಸಿದ್ಧಪಡಿಸಿ ಅವರಿಬ್ಬರೂ ಪರಸ್ಪರ ಸನ್ಮಾನಿಸಿಕೊಳ್ಳಲು ಎರಡು ಹೂವಿನ ಹಾರಗಳನ್ನು ಇಡಬೇಕು.
- ಲಗ್ನ ಕಟ್ಟಿಸುವವರು ಪುರೋಹಿತರ ಮುಖೇನ ಲಗ್ನ ಪತ್ರಿಕೆಯನ್ನು ಓದಿಸಿದ ನಂತರ ಛತ್ರದಲ್ಲಿ ಇರುವ ಎಲ್ಲಾ ಆಹ್ವಾನಿತರಿಗೆ ವೀಳೆಯದೆಲೆ –2, ಅಡಿಕೆ –2 ಇರುವ ತಾಂಬೂಲವನ್ನು ಹಂಚಬೇಕು.
- ಪರಸ್ಥಳ ತಾಂಬೂಲವನ್ನು ಊರ ಹೊರಗಿನಿಂದ ಬಂದಿರುವ ಬಂಧುಗಳಿಗೆ ದಕ್ಷಿಣೆಯೊಂದಿಗೆ ನೀಡಬೇಕು.
- ವಧುವಿನ ಮನೆಯ ಒಬ್ಬ ಮುತ್ತೈದೆಯವರು ಬಂದು ದೀಪಸ್ತಂಭಗಳಿಗೆ ಯಜಮಾನರಿಗೆ ಕುಂಕುಮವನ್ನು ಇಟ್ಟು ನಂತರ ಯಜಮಾನರ ಹತ್ತಿರವಿರುವ ಗಂಟು ಮತ್ತು ಅವರ ಮುಂದಿರುವ ಎಲ್ಲಾ ತಟ್ಟೆಗಳನ್ನು ವಧುವಿನ ಕೊಠಡಿಗೆ ತೆಗೆದುಕೊಂಡು ಹೋಗುವುದು.

**ನಾಗರ ಪೂಜೆ:**

ಈ ಶಾಸ್ತ್ರದ ಉದ್ದೇಶ ನವವಧೂವರರಿಗೆ ಶೀಘ್ರ ಸಂತಾನ ಪ್ರಾಪ್ತಿಯಾಗಲಿ ಎನ್ನುವುದೇ ಆದ್ದರಿಂದ ನಾಗರಪೂಜೆಗೆ ಮುನ್ನ ವಧೂವರರು ಒಪ್ಪೊತ್ತು ಉಪವಾಸವಿದ್ದರೆ ಶ್ರೇಷ್ಠವೆಂಬುದು ನಂಬಿಕೆ.

- ನಾಗರಪೂಜೆಗೆ ಹೊರಡುವ ಮುನ್ನ ವಧೂವರರನ್ನು ಪ್ರತ್ಯೇಕವಾಗಿ ಮಂಟಪಕ್ಕೆ ಬರಮಾಡಿಕೊಂಡು ಮಣೆಯ ಬಲಗಡೆಯಿಂದ ಕರೆತಂದು ಮಣೆಯ ಮೇಲೆ ಕೂರಿಸಿ ಮನೆಯ ಹೆಣ್ಣು ಮಕ್ಕಳಿಂದ ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಟ್ಟು ವಧೂವರರ ಹಣೆಗೆ ಎರಡು ಬಾರಿ ಕುಂಕುಮವನ್ನಿರಿಸಿ, ಕೊರಳಿಗೆ ಮಲ್ಲಿಗೆಯ ಹೂವಿನ ಹಾರವನ್ನು ಹಾಕಿದ ಮೇಲೆ ಅಲ್ಲಿ ನೆರೆದಿರುವ ಎಲ್ಲಾ ಹಿರಿಯರ ಪಾದಗಳಿಗೆರಗಿ ವಧುವರರು ನಮಸ್ಕರಿಸಿ ಅಕ್ಷತೆಯಸಮೇತ ಆಶೀರ್ವಾದ ಪಡೆಯಬೇಕು.

  ನಂತರ ವಧು ವರರು ತಮ್ಮ ಬಂಧು ಮಿತ್ರರೊಡಗೂಡಿ ಹತ್ತಿರದ ನಾಗರ ಕಲ್ಲಿರುವ ಸ್ಥಳಕ್ಕೆ ತೆರಳಬೇಕು.



***ಸೂಚನೆ:*** ಮದುವೆಯ ಶಾಸ್ತ್ರದಲ್ಲಿ ಪ್ರಮುಖ ಆಕರ್ಷಣೆ ಎನಿಸಿದ ಆಚರಣೆಯಾದ ಮನೆ ಮಗಳು ಕಳಸ ಹಿಡಿಯುವ ಅಧಿಕಾರವು ಯಾವ ಕುಟುಂಬದವರು ಮದುವೆಯ ವೆಚ್ಚಗಳೆಲ್ಲವನ್ನು ಭರಿಸುತ್ತಾರೋ ಆ ಮನೆಯ ಮಗಳಿಗೆ ಮಾತ್ರ. ಎಲ್ಲಾ ಕಾರ್ಯಕ್ರಮಗಳಲ್ಲಿ ಆ ಮನೆಯವರಿಗೇ ಪ್ರಥಮ ಆದ್ಯತೆ! ಸಂಪೂರ್ಣ ಕಾರ್ಯಕ್ರಮಗಳಲ್ಲಿ ಅರ್ಥಬಲದ ಆಧಾರದ ಮೇಲೆ ಸಿಗುವ ಈ ಮನ್ನಣೆಗೆ ಹೊರತಾಗುವ ಶಾಸ್ತ್ರಗಳೆಂದರೆ ವರನ ಕಡೆಯವರು ಮಾಡುವ ಲಗ್ನ ಕಟ್ಟಿಸುವ ಶಾಸ್ತ್ರ, ವರನ ಕಡೆಯ ಕುಲಾಚಾರ, ನಿತ್ಸಾಂಬೂಲ ಮತ್ತು ವಧುವಿನ ಒಸಗೆಗೆ ಒಪ್ಪಿಸಬೇಕಾದ 21 ತಟ್ಟೆಗಳ ಸಾಮಗ್ರಿಗಳು.

**ನಾಗರ ಪೂಜೆಗೆ ಸಿದ್ಧಪಡಿಸಿಕೊಳ್ಳಬೇಕಾದ ಸಾಮಗ್ರಿಗಳು** (ವಧು ಮತ್ತು ವರರಿಗೆ ಪ್ರತ್ಯೇಕವಾಗಿ):

ಒಂದು ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು, ಕಟ್ಟಿದ ಹೂವು, ಬಿಡಿ ಹೂವು, ವೀಳ್ಯದೆಲೆ, ಅಡಿಕೆ, ಬಾಳೆಹಣ್ಣು, ಗೆಜ್ಜೆವಸ್ತ್ರ, ಗಂಧದಕಡ್ಡಿ, ಕರ್ಪೂರ, ತುಪ್ಪದ ಬತ್ತಿಗಳು, ಬೆಂಕಿಪೊಟ್ಟಣ, ಒಂದು ಲೋಟದಲ್ಲಿ ಶುದ್ಧತುಪ್ಪ ಮಿಶ್ರಿತ ಹಸೀಹಾಲು, ಒಂದು ಚೊಂಬಿನಲ್ಲಿ ನೀರು, ಎರಡು ತೆಂಗಿನಕಾಯಿ, ದಕ್ಷಿಣೆ ಕಾಸು, ಆರತಿ ತಟ್ಟೆ, ಗಂಟೆ ಮತ್ತು ವರನು ತನ್ನ ಬಲಗೈಯಲ್ಲಿ ಪಂಚಪತ್ರೆ ಮತ್ತು ಉದ್ಧರಣೆಯನ್ನು ತರುವುದು.

**ವಿಧಾನ:**

- ಮೊದಲು ವರನು ನಂತರ ವಧುವು ಒಬ್ಬ ಮುತ್ತೈದೆಯ ಸಹಾಯದಿಂದ ನಾಗರಕಲ್ಲಿಗೆ ಪೂಜೆಯನ್ನು ಸಲ್ಲಿಸಬೇಕು.
- ನಾಗರಕಲ್ಲನ್ನು ನೀರಿನಿಂದ ಶುದ್ಧಗೊಳಿಸಬೇಕು.
- ಅರಿಶಿನ ಕುಂಕುಮ, ಹೂವನ್ನಿಟ್ಟು ಗೆಜ್ಜೆವಸ್ತ್ರದಿಂದ ನಾಗರಕಲ್ಲನ್ನು ಅಲಂಕರಿಸಬೇಕು.
- ತಂದಿರುವ ತಾಂಬೂಲವನ್ನು ನೈವೇದ್ಯಕ್ಕಿಟ್ಟು ಗಂಧದಕಡ್ಡಿಗಳನ್ನು ಬೆಳಗಿಸಬೇಕು.
- ತಾಂಬೂಲವನ್ನು ನೈವೇದ್ಯ ಮಾಡಬೇಕು ಮತ್ತು ಒಂದು ತೆಂಗಿನಕಾಯಿಯನ್ನು ಒಡೆಯಬೇಕು.
- ನಂತರ, ತುಪ್ಪದ ಬತ್ತಿಯ ಮಂಗಳಾರತಿಯನ್ನು ಮಾಡಬೇಕು.
- ತಂದಿರುವ ತುಪ್ಪ ಮಿಶ್ರಿತ ಹಸೀಹಾಲನ್ನು ಉಪಯೋಗಿಸಿ ನಾಗರಕಲ್ಲಿಗೆ ಅಭಿಷೇಕ ಮಾಡಬೇಕು.

- ತಾವು ಮೊದಲು ಮಂಗಳಾರತಿಯನ್ನು ತೆಗೆದುಕೊಂಡು ನಂತರ ಅಲ್ಲಿ ನೆರೆದಿರುವವರಿಗೆಲ್ಲಾ ಮಂಗಳಾರತಿಯನ್ನು ಕೊಡಬೇಕು.
- ನಾಗದೇವರಿಗೆ ನಮಸ್ಕರಿಸಿ ತಮ್ಮ ಹಣೆಗೆ ಕುಂಕುಮವನ್ನು ಇರಿಸಿಕೊಂಡು ಹೂವನ್ನು ಮುಡಿಯಬೇಕು.
- ಆಮೇಲೆ, ಅಲ್ಲಿ ನೆರೆದಿರುವ ಹಿರಿಯರ ಪಾದಗಳಿಗೆರಗಿ ಅವರಿಂದ ಅಕ್ಷತೆಯ ಸಮೇತವಾದ ಆಶೀರ್ವಾದವನ್ನು ಪಡೆಯಬೇಕು.
- ಮುಂದೆ, ವರನ ಕಡೆಯವರು ವಧುವಿಗೆ ಅರಿಶಿನ ಕುಂಕುಮ, ಅಕ್ಷತೆ ಹಾಗೂ ಹೂವನ್ನು ಕೊಟ್ಟು ವೀಳ್ಯದೆಲೆ –2, ಅಡಿಕೆ–2 ಮತ್ತು ಎರಡು ಬಾಳೆಹಣ್ಣುಗಳನ್ನು ತಾಂಬೂಲವಾಗಿ ನೀಡಬೇಕು.
- ಆಮೇಲೆ, ವಧುವಿನ ಕಡೆಯವರು ವಧುವಿನ ಕೈಯಿಂದ ವರನ ಕಡೆಯವರ ಮೂವರು ಅಥವಾ ಐದು ಹಿರಿಯ ಮುತ್ತೈದೆಯರಿಗೆ ಅರಿಶಿನ ಕುಂಕುಮ, ಅಕ್ಷತೆ, ಹೂವನ್ನು ಕೊಟ್ಟು ವೀಳೆಯದೆಲೆ –2, ಅಡಿಕೆ–2 ಮತ್ತು ಎರಡು ಬಾಳೆ ಹಣ್ಣುಗಳನ್ನು ತಾಂಬೂಲವಾಗಿ ಕೊಡಿಸಿ ಅವರುಗಳ ಪಾದಗಳಿಗೆರಗಿ ಅಕ್ಷತೆಯ ಸಮೇತ ಆಶೀರ್ವಾದ ಪಡೆಯತಕ್ಕದ್ದು.
- ಕಡೆಗೆ, ಅಲ್ಲಿ ನೆರೆದಿರುವ ವಧುವಿನ ಹಾಗೂ ವರನ ಕಡೆಯ ಹೆಂಗಸರಿಗೆಲ್ಲಾ ಇಬ್ಬರ ಮನೆಯವರೂ ಅರಿಶಿನ, ಕುಂಕುಮ, ಅಕ್ಷತೆ, ಹೂವಿನ ಜೊತೆಗೆ ತಾಂಬೂಲವನ್ನು ನೀಡಬೇಕು.
- ನಾಗರ ಪೂಜೆಯನ್ನು ಮುಗಿಸಿ ಛತ್ರಕ್ಕೆ ಹಿಂದಿರುಗುವಾಗ ಪೂಜೆಗೆಂದು ಚೊಂಬಿನಲ್ಲಿ ತಂದಿದ್ದ ನೀರಿನಲ್ಲಿ ಉಳಿದ ನೀರನ್ನು ದಾರಿಯಲ್ಲಿ ಮೂರು ಕಡೆ ಹಾಕಿಕೊಂಡು ಬರಬೇಕು. ವರನು ಅಡ್ಡಲಾಗಿ ಸುರಿದ ನೀರನ್ನು ದಾಟಿ ಬರಬೇಕು.

ನಾಗರ ಪೂಜೆಯನ್ನು ಮುಗಿಸಿ ಬಂದ ವರನಿಗೆ, ವರನ ಅಕ್ಕ ಅಥವಾ ಸೋದರತ್ತೆಯವರು ಮುಂಬಾಗಿಲಿನಲ್ಲಿ ತಡೆದು ಕೆಂಪು ನೀರಿನ ಆರತಿ ಮಾಡಿ ತಿಲಕವನ್ನು ಬಲಗೈಯಿಂದ ವರನ ಹಣೆಗೆ 2 ಬಾರಿ ಇಡಬೇಕು ನಂತರ ಕೆಂಪು ನೀರನ್ನು ಆತನ ಕಾಲುಗಳ ಮುಂದೆ ಅಡ್ಡಲಾಗಿ ಎಡದಿಂದ ಬಲಕ್ಕೆ ಚೆಲ್ಲಬೇಕು. ಆಮೇಲೆ ವರನ ಪಾದಗಳನ್ನು ನೀರಿನಿಂದ ತೊಳೆಯಬೇಕು. ಇದಾದ ನಂತರ, ವರನ ಸೋದರಮಾವ ಅಥವಾ ಭಾವನವರು ವರನಿಗೆ ತೆಂಗಿನಕಾಯಿಯಿಂದ 3 ಬಾರಿ ಇಳೇ ತೆಗೆದು ಕಾಯಿಯನ್ನು ಒಡೆಯಬೇಕು.



ಹಾಗೆಯೇ, ನಾಗರ ಪೂಜೆಯನ್ನು ಮುಗಿಸಿ ಬಂದ ವಧುವಿಗೆ, ವಧುವಿನ ಅಕ್ಕ ಅಥವಾ ಸೋದರತ್ತೆಯವರು ಮುಂಬಾಗಿಲಿನಲ್ಲಿ ತಡೆದು ಕೆಂಪು ನೀರಿನ ಆರತಿ ಮಾಡಿ ತಿಲಕವನ್ನು ಬಲಗೈಯಿಂದ ವಧುವಿನ ಹಣೆಗೆ 2 ಬಾರಿ ಇಡಬೇಕು ನಂತರ ಕೆಂಪು ನೀರನ್ನು ಆಕೆಯ ಕಾಲುಗಳ ಮುಂದೆ ಅಡ್ಡಲಾಗಿ ಎಡದಿಂದ ಬಲಕ್ಕೆ ಚೆಲ್ಲಬೇಕು. ಆಮೇಲೆ ವಧುವಿನ ಪಾದಗಳನ್ನು ನೀರಿನಿಂದ ತೊಳೆಯಬೇಕು. ಇದಾದ ನಂತರ, ವಧುವಿನ ಸೋದರಮಾವ ಅಥವಾ ಭಾವನವರು ವಧುವಿಗೆ ತೆಂಗಿನಕಾಯಿಯಿಂದ 3 ಬಾರಿ ಇಳೇ ತೆಗೆದು ಕಾಯಿಯನ್ನು ಒಡೆಯಬೇಕು.

ವರನು ಛತ್ರದಲ್ಲಿನ ಕೋಣೆಯನ್ನು ತಲುಪಿದ ನಂತರ ಆತನಿಗೆ ವಧುವಿನ ಮನೆಯವರು ಕೊಡುವ ವಸ್ತ್ರ, ಒಡವೆ ಇತ್ಯಾದಿಗಳನ್ನು ಒಪ್ಪಿಸಬೇಕು.

**ಊಟದ ಸಮಯ**

**ವರನನ್ನು ವರ ಪೂಜೆಗೆ ಕರೆಯುವ ಶಾಸ್ತ್ರ:**

- ವರನನ್ನು ಎದಿರುಗೊಳ್ಳಲು ವಧುವಿನ ಕಡೆಯವರು 1 ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು, ಬಿಡಿ ಹೂವು ಮತ್ತು ಹೂವಿನ ಹಾರದ ಜೊತೆಗೆ ಒಂದು ಕಡ್ಲೆಬೆಲ್ಲದ ಗಂಟನ್ನು ತೆಗೆದುಕೊಂಡು ಐವರು ಮುತ್ತೈದೆಯರೊಂದಿಗೆ ವರನ ಕೊಠಡಿಗೆ ಹೋಗಬೇಕು.
- ವರನಿಗೆ ಕುಂಕುಮವನ್ನು ಇಟ್ಟು ಆತನ ಕೊರಳಿಗೆ ಹಾರವನ್ನು ಹಾಕಬೇಕು.
- ನಂತರ ವರನನ್ನು ಇನ್ನೊಂದು ಗಂಟಿನೊಡನೆ ವಧುವಿನ ಕೊಠಡಿಗೆ ವರನ ಕಡೆಯ ಐವರು ಮುತ್ತೈದೆಯರೊಂದಿಗೆ ಕರೆತರಬೇಕು.
- ವಧುವಿನ ಕೊಠಡಿಗೆ ಬಂದ ಮೇಲೆ ವರನಿಗೆ ಮತ್ತು ವರನೊಡನೆ ಬಂದಿರುವ ಮುತ್ತೈದೆಯರಿಗೆಲ್ಲಾ ಪಾನಕವನ್ನು ಕುಡಿಯಲು ಕೊಡಬೇಕು.
- ನಂತರ, ವಧುವಿನ ಕೈಯಿಂದ ಸಿಹಿಯನ್ನು ವರನಿಗೆ ತಿನ್ನಲು ಕೊಡಿಸಿದ ಮೇಲೆ ನೆರೆದಿರುವ ಎಲ್ಲಾ ಮುತ್ತೈದೆಯರಿಗೆ ಕುಂಕುಮವನ್ನು ಕೊಟ್ಟು ವರನನ್ನು ಆತನ ಕೊಠಡಿಗೆ ಹಿಂದಿರುಗಲು ಅನುವು ಮಾಡಿಕೊಡಬೇಕು.

**ವರ ಪೂಜೆ:**

- ಮಂಟಪದಲ್ಲಿ ವರನಿಗೆಂದು ಒಂದು, ವಧುವಿನ ತಂದೆ ತಾಯಂದಿರಿಗೆಂದು ಎರಡು ಮತ್ತು ಪುರೋಹಿತರಿಗೆಂದು ಇನ್ನೊಂದು

ಮಣೆಯನ್ನು ಹಾಕಿ, ಅವುಗಳ ಮೇಲೆ ಒಂದೊಂದು ಬಿಳಿ ವಸ್ತ್ರವನ್ನು ಹಾಸಬೇಕು.

- ಮಣೆಯ ಎರಡೂ ಬದಿಗಳಲ್ಲಿ ದೀಪಸ್ತಂಭಗಳನ್ನು ಇಟ್ಟು ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ಇದಾದ ನಂತರ ವರನನ್ನು ಮಣೆಯ ಬಲಬದಿಯಿಂದ ಕರೆತಂದು ಮಣೆಯ ಮೇಲೆ ಕೂರಿಸಬೇಕು.
- ಎದುರಿನಲ್ಲಿ ಬಲಗಡೆಗೆ ಪುರೋಹಿತರು ಮತ್ತು ವಧುವಿನ ತಂದೆ ತಾಯಿಯರನ್ನು ಕೂರಿಸಿ, ಇವರ ಮುಂದೆ ಎರಡು ಇಸ್ತ್ರಿ ಎಲೆಗಳನ್ನು ಹಾಸಿ ಅದರಲ್ಲಿ ಅಕ್ಕಿಯನ್ನು ಹರಡಿ ಅದರ ಮೇಲೆ ಐದು ತೆಂಗಿನಕಾಯಿಗಳ ತಾಂಬೂಲವನ್ನು ಇಡಬೇಕು.
- ಪ್ರತೀ ತಾಂಬೂಲದಲ್ಲಿ ವೀಳೆಯದೆಲೆ–2, ಅಡಿಕೆ–2, ದಕ್ಷಿಣೆ ಕಾಸು, ಹೂವು ಮತ್ತು ಒಂದು ತೆಂಗಿನಕಾಯಿ ಇಡಬೇಕು.
- ವಧುವಿನ ತಂದೆ ತಾಯಿಯರು ಒಂದು ಹೊಸ ತಟ್ಟೆಯನ್ನು ವರನ ಪಾದಗಳ ಕೆಳಗೆ ಇರಿಸಿ ತಟ್ಟೆಯಲ್ಲಿ ವರನು ಪಾದಗಳನ್ನು ಇರಿಸುವಂತೆ ತಿಳಿಸುವುದು.
- ವರನ ಪಾದಗಳನ್ನು ವಧುವಿನ ತಂದೆ ತಾಯಿಯರು ನೀರಿನಿಂದ ಶುಭ್ರಗೊಳಿಸಿ ವರನ ಪಾದಗಳಿಗೆ 2 ಬಾರಿ ಅರಿಶಿನ. 2 ಬಾರಿ ಕುಂಕುಮ ಒಂದೊಂದು ಹೂವನ್ನು ಇಡುವುದು.
- ಗಂಧದ ಕಡ್ಡಿಗಳನ್ನು ಬೆಳಗಿ ಪಾದಗಳಿಗೆ ಪೂಜೆಯನ್ನು ಮಾಡಿ ಒಂದು ತೆಂಗಿನ ಕಾಯಿಯನ್ನು ಒಡೆಯಬೇಕು.
- ಮುಂದುವರಿದು ಕರ್ಪೂರದ ಆರತಿಯನ್ನು ಮಾಡಿ ದಂಪತಿಗಳು ತಾವು ಮೊದಲು ಆರತಿಯನ್ನು ತೆಗೆದುಕೊಂಡು ತಟ್ಟೆಯಲ್ಲಿರುವ ವರನ ಪಾದಗಳನ್ನು ತೊಳೆದ ನೀರನ್ನು ಸ್ವಲ್ಪ ತೆಗೆದು ತಮ್ಮ ತಲೆಯಮೇಲೆ ಮೂರು ಬಾರಿ ಪ್ರೋಕ್ಷಿಸಿಕೊಳ್ಳಬೇಕು.
- ನಂತರ ವರನು ವಧುವಿನ ತಂದೆ ತಾಯಿಯರ ಪಾದಗಳಿಗೆ ನಮಸ್ಕರಿಸಿ ಅಕ್ಷತೆ ಸಮೇತ ಆಶೀರ್ವಾದ ಪಡೆಯಬೇಕು.
- ವಧುವಿನ ತಂದೆ ತಾಯಿಯರು ವರನ ಪಾದ ಪೂಜೆಯನ್ನು ಮಾಡಿ ಒಂದು ಬೆಳ್ಳಿಯ ಲೋಟದಲ್ಲಿ ಇರುವ ಹಾಲಿನಲ್ಲಿ ಬಾಳೆಹಣ್ಣನ್ನು ಅದ್ದಿ



ಅದನ್ನು ವರನಿಗೆ ತಿನ್ನಿಸಿ ಉಳಿದ ಹಾಲನ್ನು ಕುಡಿಯಲು ವರನಿಗೆ ಕೊಡಬೇಕು.

- ವರನ ಪಾದ ತೊಳೆದ ತಟ್ಟೆ ಮತ್ತು ವರನು ಹಾಲು ಕುಡಿದ ಬೆಳ್ಳಿಯ ಲೋಟವನ್ನು ವರನ ಮನೆಯವರಿಗೆ ಕೊಡಬೇಕು.
- ಆನಂತರ ವಧುವಿನ ತಂದೆ ತಾಯಂದಿರಿಗೆ ಕ್ರಮವಾಗಿ ಐವರು ಮುತ್ತೈದೆಯರು ಬಂದು ಅರಿಶಿನವನ್ನು ಕಪೋಲಗಳಿಗೆ, ಕೈ ಮತ್ತು ಪಾದಗಳಿಗೆ ಹಚ್ಚಿ, ಅವರ ಹಣೆಗಳಿಗೆ ಕುಂಕುಮವನ್ನು ಇಟ್ಟು ಅವರ ಮುಂದೆ ಇರಿಸಿರುವ ಐದು ತಾಂಬೂಲಗಳನ್ನು ತಮ್ಮ ಸೆರಗೊಡ್ಡಿ ಅವರಿಂದ ಪಡೆಯತಕ್ಕದ್ದು.

ವರನಿಗೆ ಮತ್ತು ವಧುವಿನ ತಂದೆ ತಾಯಿಯವರಿಗೆ ಕೆಂಪುನೀರಿನ ಆರತಿಯನ್ನು ಮಾಡಿ ಅವರ ಹಣೆಗಳಿಗೆ ಎರಡು ಸಾರಿ ತಿಲಕವನ್ನಿಟ್ಟು, ಆರತಿ ನೀರನ್ನು ಛತ್ರದ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು, ಹಿಂದಿರುಗಿ ಬಂದು ಖಾಲಿ ತಟ್ಟೆಯನ್ನೊಡ್ಡಿ ದಕ್ಷಿಣೆಯನ್ನು ತಾಂಬೂಲದ ಸಮೇತ ಪಡೆಯತಕ್ಕದ್ದು.

**ಕುಲಾಚಾರ:**

ಈ ಶಾಸ್ತ್ರದ ಹಿಂದಿನ ಆಶಯ, ಕುಲಸ್ಥರು, ಶೆಟ್ಟರು, ತಮ್ಮ ಕುಲದ ಯಜಮಾನರಿಗೆ ಸಲ್ಲಿಸುವ ಗೌರವ ಮತ್ತು ಯಜಮಾನರ ಉಪಸ್ಥಿತಿಯಲ್ಲಿ ವಿವಾಹ ಮಹೋತ್ಸವದ ಕಾರ್ಯಕ್ರಮವು ನಿರ್ವಿಘ್ನವಾಗಿ ನೆರವೇರಲಿ ಎಂಬುದಾಗಿದೆ.

ವರನ ಕಡೆಯ ಕುಲಾಚಾರವನ್ನು ವರನ ಕೊಠಡಿಯಲ್ಲಿ ಮತ್ತು ವಧುವಿನ ಕಡೆಯ ಕುಲಾಚಾರವನ್ನು ಛತ್ರದ ಮಂಟಪದಲ್ಲಿ ನೆರವೇರಿಸಬೇಕು:

***ಸೂಚನೆ :*** ಮದುವೆಯ ಕಾರ್ಯವನ್ನು ನೆರವೇರಿಸುವ ಮನೆಯ ಕಡೆಯವರು ಕುಲಾಚಾರವನ್ನು ಮಂಟಪದಲ್ಲಿ ಮಾಡಬೇಕು:

**ಸಿದ್ಧತೆ:**

- ವಧು/ವರರ ಮನೆಯವರು ಪ್ರತ್ಯೇಕವಾಗಿ ಹನ್ನೊಂದು ರೂಪಾಯಿಗಳ ದಕ್ಷಿಣೆಯನ್ನು ಹಳದಿ ವಸ್ತ್ರದಲ್ಲಿ ಕಟ್ಟಿ ಚೌಡೇಶ್ವರಿ ದೇವಿಗೆಂದು ಮುಡಿಪಾಗಿರಿಸಿ ಪಾವಡದ ತಟ್ಟೆಯಲ್ಲಿ ಇಡಬೇಕು.
- ಕೊಂಚ ಅರಿಶಿನದ ಪುಡಿಯನ್ನು ಸ್ವಲ್ಪ ನೀರಿಗೆ ಸೇರಿಸಿ ಕದಡಿದ

ಮಿಶ್ರಣದಲ್ಲಿ ಬಿಳಿಯ ಬಟ್ಟೆಯನ್ನು ಅದ್ದಿದರೆ ಹಳದಿ ವಸ್ತ್ರ ಸಿದ್ಧ. ಮುಂದೆ ಆ ಮುಡಿಪನ್ನು ಚೌಡೇಶ್ವರಿ ದೇವಸ್ಥಾನದ ಹುಂಡಿಗೆ ಸಮರ್ಪಿಸಬೇಕು.

1 ಮನೆಯ ಹಿರಿಯ ಅಳಿಯರಾದವರು ಕುಲಾಚಾರ ಶಾಸ್ತ್ರದ ಯಜಮಾನಿಕೆಯ ಸ್ಥಾನಕ್ಕೆ ಅರ್ಹರು. ಆದ್ದರಿಂದ ಅವರಿಗೆ ಆಹ್ವಾನವನ್ನಿತ್ತು ಅವರನ್ನು ಕೊಠಡಿಯ ಪೂರ್ವ ಅಥವಾ ಉತ್ತರಾಭಿಮುಖವಾಗಿ ಹಾಕಿರುವ ಮಣೆಯ ಮೇಲೆ ಕೂರಿಸಬೇಕು.

1 ಅವರ ಬಲಗಡೆಗೆ ಒಂದು ದೀಪಸ್ತಂಭದಲ್ಲಿ ಎರಡು ಜ್ಯೋತಿಗಳನ್ನು ಬೆಳಗಿಸಬೇಕು. ಮತ್ತೆ ಇನ್ನಿಬ್ಬರು ಅಳಿಯರನ್ನು ಕುಲಾಚಾರದ ಶಾಸ್ತ್ರವನ್ನು ನೆರವೇರಿಸಲು ಸಿದ್ಧ ಮಾಡಬೇಕು.

**ಯಜಮಾನರ ಉಡುಗೆ** ಪಂಚೆ, ಅಂಗಿ, ಶಲ್ಯ ಮತ್ತು ಟೋಪಿ.

**ಮತ್ತಿಬ್ಬರು ಅಳಿಯಂದಿರ ಉಡುಗೆ** ಕಚ್ಚೆ ಪಂಚೆಯನ್ನು ಉಟ್ಟು, ಶಲ್ಯವನ್ನು ಸೊಂಟಕ್ಕೆ ಸುತ್ತಿಕೊಳ್ಳಬೇಕು. ಹಣೆ, ಕೈಗಳು, ಎದೆ ಮತ್ತು ಭುಜದಲ್ಲಿ ವಿಭೂತಿ ಪಟ್ಟೆ ಧರಿಸಿರಬೇಕು. ಕಿವಿಯಲ್ಲಿ ಹೂವನ್ನು ಮುಡಿದು ಕಡ್ಡಾಯವಾಗಿ ಜನಿವಾರವನ್ನು ತೊಟ್ಟಿರಬೇಕು.

**ಕುಲಾಚಾರ ಶಾಸ್ತ್ರದ ಸಂಭಾಷಣೆ:**

ಯಜಮಾನರ ಸ್ಥಾನವನ್ನು ಅಲಂಕರಿಸಿರುವ ಮನೆಯ ಹಿರಿಯ ಅಳಿಯಂದಿರು ಪೂರ್ವ ಅಥವಾ ಉತ್ತರಾಭಿಮುಖವಾಗಿ ಬಿಳಿಯ ವಸ್ತ್ರದೊಂದಿಗೆ ಹಾಕಿರುವ ಮಣೆಯ ಮೇಲೆ ಶಾಸ್ತ್ರೋಕ್ತವಾಗಿ ಕುಳಿತಿರಬೇಕು.

**ಇಬ್ಬರು ಅಳಿಯಂದಿರು** ಯಜಮಾನರ ಎದುರಿಗೆ ಬಂದು ಬಾಗಿ ಅವರಿಗೆ ಕೈ ಮುಗಿದು "ಕುಲಸ್ವಾಮಿಗಳಿಗೆ ನಮಸ್ಕಾರ" ಎನ್ನಬೇಕು, ಯಜಮಾನರಿಂದ ಪ್ರತಿವಂದನೆ ಸ್ವೀಕರಿಸಿದ ಬಳಿಕ "ಗಂಡು ಮಗನ / ಹೆಣ್ಣು ಮಗಳ ಮದುವೆ ಕಾರ್ಯ ನಮ್ಮ ಮನೆಯಲ್ಲಿ ನಡೆಯುತ್ತಿದೆ" ಎನ್ನಬೇಕು.

**ಯಜಮಾನರು** "ತಥಾಸ್ತು" ಎನ್ನಬೇಕು.

**ಇಬ್ಬರು ಅಳಿಯಂದಿರು** ಯಜಮಾನರಿಗೆ ಮತ್ತು ಇಬ್ಬರೂ ಒಬ್ಬರಿಗೊಬ್ಬರು ಗಂಧವನ್ನು ಹಚ್ಚಿದ ಮೇಲೆ ಕೊಠಡಿಗೆಲ್ಲಾ ಗಂಧದ ಪ್ರೋಕ್ಷಣೆ ಮಾಡಬೇಕು. ನಂತರ ಯಜಮಾನರನ್ನುದ್ದೇಶಿಸಿ "ಎಲ್ಲಾ ಕುಲ ಬಾಂಧವರು ಸೇರಿ ಕಾರ್ಯಕ್ರಮವನ್ನು ನೆರವೇರಿಸುತ್ತಿದ್ದಾರೆ" ಎನ್ನಬೇಕು.

**ಯಜಮಾನರು** "ತಥಾಸ್ತು" ಎನ್ನಬೇಕು.



**ಇಬ್ಬರು ಅಳಿಯಂದಿರು** "ನಮ್ಮ ಮನೆಯಲ್ಲಿ ಗಂಡು ಮಗನ / ಹೆಣ್ಣು ಮಗಳ ಮದುವೆ ಕಾರ್ಯ ನಡೆಯುತ್ತಿದೆ, ಯಾವುದೇ ವ್ಯಾಜ್ಯ, ವ್ಯವಹಾರ ಇಲ್ಲದ ಹಾಗೆ ಗಂಧ ಎತ್ತಿದ ಪಾವಡದಲ್ಲಿ ಕಾರ್ಯ ನೆರವೇರಿಸಿಕೊಡಬೇಕು" ಎನ್ನುವುದು.

**ಯಜಮಾನರು** "ತಥಾಸ್ತು" ಎನ್ನಬೇಕು.

**ಇಬ್ಬರು ಅಳಿಯಂದಿರು** ಯಜಮಾನರನ್ನುದ್ದೇಶಿಸಿ "ದೇವರ ಮತ್ತು ಕಳಸದ ಪೂಜೆ ಮಾಡುವುದಕ್ಕೆ ಅನುಮತಿ ಕೊಡಿ" ಎಂದು ಕೇಳುವುದು.

**ಯಜಮಾನರು** "ತಥಾಸ್ತು" ಎನ್ನಬೇಕು.

**ಇಬ್ಬರು ಅಳಿಯಂದಿರು** ಕೋಣೆಯಲ್ಲಿರುವ ದೇವರಿಗೆ ಮತ್ತು ಕಳಸಕ್ಕೆ ಪೂಜಿಸಿ ಮಂಗಳಾರತಿಯನ್ನು ಮಾಡಿ ಮೊದಲು ತಾವುಗಳು ಆರತಿಯನ್ನು ಪಡೆದು ನಂತರ ಯಜಮಾನರಿಗೆ ಕೊಟ್ಟು ಮತ್ತೆ ಯಜಮಾನರಿಗೆ ಕೈ ಮುಗಿದು, "ಕುಲಸ್ವಾಮಿಯವರು ಕಳಸ ಮತ್ತು ಪಾವಡದ ತಟ್ಟೆಯನ್ನು ತರಲು ಅನುಮತಿಯನ್ನು ಕೊಡಿ" ಎಂದು ಕೇಳುವುದು.

**ಯಜಮಾನರು** "ತಥಾಸ್ತು" ಎನ್ನಬೇಕು.

**ಇಬ್ಬರು ಅಳಿಯಂದಿರು** ಕಳಸವಿರುವ ಮೂರುಕಾಲಿನ ಮಣೆಯ ಒಂದು ಕಾಲಿಗೆ ಚಿಟ್ಟಿನ ಒಂದು ತುದಿಯನ್ನು ಸೇರಿಸಿ ಇನ್ನೊಂದು ತುದಿಯನ್ನು ಪಾವಡದ ತಟ್ಟೆಯಲ್ಲಿ ಇಟ್ಟು ಅದನ್ನು ಯಜಮಾನರ ಮುಂದೆ ಇಡಬೇಕು. ನಂತರ ಯಜಮಾನರನ್ನುದ್ದೇಶಿಸಿ "ಸಭಾ ತಾಂಬೂಲವನ್ನು ಕೊಡಲು ಅನುಮತಿ ಕೊಡಿ" ಎಂದು ಕೇಳುವುದು.

**ಯಜಮಾನರು** "ತಥಾಸ್ತು" ಎಂದು ಪಾವಡದ ತಟ್ಟೆಯಲ್ಲಿರುವ ವೀಳೆಯದೆಲೆಗಳನ್ನು ಒಬ್ಬ ಅಳಿಯನಿಗು ಅಡಿಕೆಗಳನ್ನು ಮತ್ತೊಬ್ಬ ಅಳಿಯನಿಗೂ ಕೊಡಬೇಕು. ಅಳಿಯಂದಿರು ತಮ್ಮ ಸೊಂಟದಲ್ಲಿರುವ ಶಲ್ಯದಲ್ಲಿ ಅವುಗಳನ್ನು ಇರಿಸಿಕೊಳ್ಳಬೇಕು. ನಂತರ ಕೋಣೆಯಲ್ಲಿರುವ ಎಲ್ಲರಿಗೂ ತಲಾ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಯನ್ನು ಹಂಚುವುದು. ನಂತರ,

**ಇಬ್ಬರು ಅಳಿಯಂದಿರು** ಒಂದು ವೀಳೆಯದೆಲೆ ಮತ್ತು ಒಂದು ಬಟ್ಟಲು ಅಡಿಕೆಯ ತಾಂಬೂಲವನ್ನು ಅಲ್ಲಿ ನೆರೆದಿರುವ ಪುರುಷರಿಗೆಲ್ಲಾ ಹಂಚಲು ಅನುಮತಿ ಕೇಳುವುದು.

**ಯಜಮಾನರು** "ತಥಾಸ್ತು" ಎನ್ನಬೇಕು.

**ಇಬ್ಬರು ಅಳಿಯಂದಿರು** ಒಂದು ವೀಳೆಯದೆಲೆ ಮತ್ತು ಒಂದು ಅಡಿಕೆಯ ತಾಂಬೂಲವನ್ನು ಅಲ್ಲಿ ನೆರೆದಿರುವ ಪುರುಷರಿಗೆಲ್ಲಾ ಹಂಚಬೇಕು. ಆನಂತರ, **ಇಬ್ಬರು ಅಳಿಯಂದಿರು** ಪರಸ್ಥಳದಿಂದ ಆಗಮಿಸಿರುವ ಅತಿಥಿಗಳಿಗೆ ದಕ್ಷಿಣೆ ಸಮೇತ ಎರಡು ವೀಳ್ಯೆದೆಲೆ ಮತ್ತು ಎರಡು ಅಡಿಕೆಗಳ ತಾಂಬೂಲವನ್ನು ಹಂಚಲು ಅನುಮತಿ ಬೇಡುವುದು.

**ಯಜಮಾನರು** "ತಥಾಸ್ತು" ಎನ್ನಬೇಕು.

**ಇಬ್ಬರು ಅಳಿಯಂದಿರು** ನೆರೆದವರ ಸಹಾಯದಿಂದ, ಪರಸ್ಥಳದಿಂದ ಆಗಮಿಸಿರುವ ಅತಿಥಿಗಳಿಗೆ ದಕ್ಷಿಣೆ ಸಮೇತ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳ ತಾಂಬೂಲವನ್ನು ಕೊಡಬೇಕು.

**ಇಬ್ಬರು ಅಳಿಯಂದಿರು** ವಂಶಸ್ಥರಿಗೆಲ್ಲಾ ತಲಾ ಎಂಟು ಬಟ್ಟಲು ಅಡಿಕೆಯನ್ನು ಹಂಚಲು ಯಜಮಾನರ ಅನುಮತಿಯನ್ನು ಕೇಳುವುದು.

**ಯಜಮಾನರು** "ತಥಾಸ್ತು" ಎನ್ನಬೇಕು.

**ಇಬ್ಬರು ಅಳಿಯಂದಿರು** ನೆರೆದಿರುವ ವಂಶಸ್ಥರಿಗೆಲ್ಲಾ ತಲಾ ಎಂಟು ಬಟ್ಟಲು ಅಡಿಕೆಯನ್ನು ಹಂಚಬೇಕು.

ನಂತರ, ಕಳಸ ಮತ್ತು ಪಾವಡದ ತಟ್ಟೆಗಳನ್ನು ಯಥಾರೀತಿ ದೇವರ ಮುಂದೆ ಇರಿಸಬೇಕು.

**ವಧುವಿಗೆ ನಿತ್ಸಾಂಬೂಲ ಶಾಸ್ತ್ರ:**




**ಸಿದ್ಧತೆ:**

- ಅಕ್ಕಿಯನ್ನು ಸಾವಕಾಶವಾಗಿ ಮಂಟಪದ ಮಧ್ಯದಲ್ಲಿ ಹರಡಿ ಐವರು ಮುತ್ತೈದೆಯರು ಸೇರಿ ಇಪ್ಪತ್ತೇಳು ನಕ್ಷತ್ರಗಳಿರುವಂತೆ ಜಾಗ್ರತೆವಹಿಸಿ ಹಸೆಯನ್ನು ಬಿಡಿಸಬೇಕು.



- ವಧುವಿನ ನಿತ್ಸಾಂಬೂಲ ಶಾಸ್ತ್ರಕ್ಕೆ ಮಂಟಪದಲ್ಲಿ ಹಸೆಯನ್ನು ಬರೆದಿರುವ ಸ್ಥಳದಲ್ಲಿ ಒಂದು ಮಣೆಯನ್ನು ಹಾಕಿ ಅದರ ಮೇಲೊಂದು ಬಿಳಿ ವಸ್ತ್ರವನ್ನು ಹಾಸಬೇಕು.
- ಮಣೆಯ ಮುಂದೆ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಿ ವಧುವಿನ ಬಲಭಾಗಕ್ಕೆ ಬರುವಂತೆ ಮೂರು ಕಾಲಿನ ಮಣೆ ಸಮೇತ ಕಳಸವನ್ನು ಇರಿಸಬೇಕು.
- ಮಣೆಯ ಬಲಭಾಗದಲ್ಲಿ ಒಂದು ಸೌತೇಕಾಯಿಯನ್ನು ಅಂಗುದಾರ ಮತ್ತು ಹೂವಿನೊಂದಿಗೆ ಕಟ್ಟಿ ಅದನ್ನು ಗುಂಡಪ್ಪನೆಂದು ಭಾವಿಸಿ ಇಟ್ಟಿರಬೇಕು.
- ಆಮೇಲೆ, ಒಂದು ಬಿಳಿ ಕರವಸ್ತ್ರದಲ್ಲಿ ಎರಡು ವೀಳ್ಯೆದೆಲೆ, ಎರಡು ಅಡಿಕೆ, ಒಂದು ನಿಂಬೆ ಹಣ್ಣು, ಮೂರು ಸಲ ಸ್ವಲ್ಪ ಅಕ್ಕಿ, ಒಂದು ಚಿಟಿಕೆ ಅರಿಶಿನ, ಒಂದು ಚಿಟಿಕೆ ಕುಂಕುಮ ಮತ್ತು ಒಂದು ಹೂವನ್ನು ಹಾಕಿ ಅವೆಲ್ಲವನ್ನು ಸೇರಿಸಿ ಗಂಟುಕಟ್ಟಬೇಕು.
- ಆ ಗಂಟನ್ನು ವಧುವಿನ ಸೊಂಟಕ್ಕೆ ಸಿಕ್ಕಿಸಿರುವ ಸೀರೆಯ ನೆರಿಗೆಯ ಪಕ್ಕದಲ್ಲಿ ಸಿಕ್ಕಿಸುವುದು. ಶಾಸ್ತ್ರ ಮುಗಿದ ಬಳಿಕ ಈ ಗಂಟನ್ನು ವಧುವಿನ ಸೊಂಟದಿಂದ ತೆಗೆದು ಕಳಸದ ಜೊತೆಯಲ್ಲಿ ಇರಿಸಬೇಕಲ್ಲದೇ ಧಾರೆ ಸಮಯದಲ್ಲೂ ಇದನ್ನು ಉಪಯೋಗಿಸಬೇಕು.
- ನಂತರ, ವರನ ಮನೆಯವರ ಕಡೆಯಿಂದ 21 ರೂಪಾಯಿಗಳ ದಕ್ಷಿಣೆಕಾಸನ್ನು ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳೊಂದಿಗೆ ಸೇರಿಸಿ ವಧುವಿನ ಸೆರಗಿನ ತುದಿಗೆ ವಧುವಿನ ಸೋದರಿ ಕಟ್ಟಬೇಕು.
- ಶಾಸ್ತ್ರ ಮುಗಿದ ಬಳಿಕ ದಕ್ಷಿಣೆ ಕಾಸು, ವೀಳೆಯದೆಲೆ ಮತ್ತು ಅಡಿಕೆಗಳನ್ನು ಪುರೋಹಿತರಿಗೆ ಅಥವಾ ವಧುವಿಗೆ ಕೊಡುವುದು.

ಆಮೇಲೆ ಕೆಳಗೆ ನಮೂದಿಸಿರುವ ಐದು ತಟ್ಟೆಗಳನ್ನು ಸಿದ್ಧಪಡಿಸಿ ವಧುವಿನ ಮುಂದೆ ಇರಿಸಬೇಕು.

- ಒಂದು ಬೇಸಿನ್ನಲ್ಲಿ ಕಡ್ಲೆಪಪ್ಪು ಮತ್ತು ಬೆಲ್ಲದ ಸಮೇತವಾದ ವಧುವಿನ ಗಂಟಿನ ಸಾಮಗ್ರಿಗಳು.
- ಒಂದು ಬೇಸಿನ್ನಲ್ಲಿ ಅಕ್ಕಿ ಮತ್ತು ಬೆಲ್ಲದ 2–ಕೊಬ್ಬರಿ ಬಟ್ಟಲಿನ ಸಮೇತವಾದ ಗಂಟಿನ ಸಾಮಗ್ರಿಗಳು.

- ಒಂದು ತಟ್ಟೆಯಲ್ಲಿ ಬಿಳಿ ಹೂವಿನ ಹಾರ.
- ಒಂದು ತಟ್ಟೆಯಲ್ಲಿ ವೀಳೆಯದೆಲೆ ಮತ್ತು ಅಡಿಕೆ.
- ಒಂದು ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಸ್ವಲ್ಪ ಬಿಡಿ ಹೂವುಗಳು ಮತ್ತು ಒಂದು ಲೋಟದಲ್ಲಿ ನೀರು.

**ವಿಧಾನ:**

- ಮಣೆಯ ಬಲಬದಿಯಿಂದ ವಧುವನ್ನು ಕರೆತಂದು ಮಣೆಯ ಮೇಲೆ ಕೂರಿಸಬೇಕು.
- ಮೇಲಿನ ಐದು ತಟ್ಟೆಗಳನ್ನು ವಧುವಿನ ಮುಂದೆ ಇರಿಸಿದ ಮೇಲೆ ಮೂವರು ಮುತ್ತೈದೆಯರು ಕ್ರಮವಾಗಿ ಬಂದು ಎರಡೂ ದೀಪಸ್ತಂಭಗಳಿಗೆ ಮತ್ತು ಕಳಸಕ್ಕೆ ಅರಿಶಿನ, ಕುಂಕುಮ ಹಾಗೂ ಹೂವನ್ನಿಡಬೇಕು.
- ನಂತರ ಅರಿಶಿನದ ಕೈಗಳನ್ನು ಮಾಡಿಕೊಂಡು ವಧುವಿನ ಕೆನ್ನೆ, ಕೈಗಳು ಮತ್ತು ಪಾದಗಳಿಗೆ ಹಚ್ಚಿ ಆಕೆಯ ಹಣೆಗೆ ಕುಂಕುಮವನ್ನು 2 ಬಾರಿ ಇಟ್ಟು ಆಕೆಯ ಕೈಗೆ ಹೂವನ್ನು ಕೊಟ್ಟು ಮುಡಿದುಕೊಳ್ಳಲು ಹೇಳಬೇಕು.
- ಕಳಸದ ತಟ್ಟೆಯಲ್ಲಿರುವ ಅಕ್ಕಿಯನ್ನು ಎರಡೂ ಕೈಗಳಲ್ಲಿ ತೆಗೆದುಕೊಂಡು ಕಳಸದ ಮೇಲೆ ಮೂರು ಬಾರಿ ಬೀಳುವಂತೆ ಸಾಸೆ ಹಾಕಬೇಕು.
- ನಂತರ ಮತ್ತೆ ಕಳಸದ ತಟ್ಟೆಯಲ್ಲಿರುವ ಅಕ್ಕಿಯನ್ನು ಎರಡೂ ಕೈಗಳಲ್ಲಿ ತೆಗೆದುಕೊಂಡು ವಧುವಿನ ಕೈಗಳು, ಭುಜಗಳು ಮತ್ತೆ ತಲೆಯ ಮೇಲೆ ಮೂರು ಬಾರಿ ಬರುವಂತೆ ಸಾಸೆ ಹಾಕಬೇಕು.
- ಹಾಗೆಯೇ ವಧುವಿನ ಪಕ್ಕದಲ್ಲಿರುವ ಸೌತೇಕಾಯಿಗೂ ಸಾಸೆ ಮಾಡಬೇಕು.
- ಆಮೇಲೆ ಅರಿಶಿನ ಕುಂಕುಮದ ತಟ್ಟೆಗೆ ಮತ್ತು ಗಂಟಿನ ಸಾಮಗ್ರಿಗಳಿರುವ ಎರಡು ಬೇಸಿನ್ಗಳಿಗೆ ವಧುವಿನ ಕೈಗಳಿಂದ ಮೂರು ಬಾರಿ ನಮಸ್ಕಾರ ಮಾಡಿಸಬೇಕು.
- ನಂತರ ಮುತ್ತೈದೆಯರು ತಮ್ಮ ಗಂಡನ ವಂಶದ ಹೆಸರು ಮತ್ತು ತಮ್ಮ ಗಂಡನ ಹೆಸರಿನ ಜೊತೆಗೆ "ಮಾಮ" ಪದವನ್ನು ಸೇರಿಸಿ ಹೇಳಿ ವಧುವಿನ ಕೈಗಳಿಂದ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳನ್ನು ತಾಂಬೂಲ ರೂಪದಲ್ಲಿ ತಮ್ಮ ಸೆರಗೊಡ್ಡಿ ಪಡೆಯತಕ್ಕದ್ದು.



- ಮೂವರೂ ಮುತ್ತೈದೆಯರು ಮೇಲಿನ ಪ್ರಕ್ರಿಯೆಯನ್ನು ಪೂರ್ಣಗೊಳಿಸಿದ ತರುವಾಯ ಮೂವರೂ ಸೇರಿ ಕೆಂಪು ನೀರಿನ ಆರತಿಯನ್ನು ಆರತಿ ಹಾಡು ಹಾಡುತ್ತಾ ವಧುವಿಗೆ ಬೆಳಗಿ ಆಕೆಯ ಹಣೆಗೆ ಎರಡು ಸಲ ತಿಲಕವನ್ನಿರಿಸಿ ತಟ್ಟೆಯಲ್ಲಿರುವ ಕೆಂಪು ನೀರನ್ನು ಛತ್ರದ ಮುಂಬಾಗಿಲಿನ ಮುಂದೆ ಅಡ್ಡಲಾಗಿ ಸುರಿದು ಹಿಂದಿರುಗಿ ಬಂದು ಖಾಲಿಯಾದ ಆರತಿ ತಟ್ಟೆಯನ್ನು ಒಡ್ಡಿ ದಕ್ಷಿಣೆಯನ್ನು ತಾಂಬೂಲದ ಜೊತೆಗೆ ಪಡೆಯಬೇಕು. ನಂತರ ವಧುವನ್ನು ಆಕೆಯ ಕೊಠಡಿಗೆ ಕಳುಹಿಸಬೇಕು.

**ವಧುವಿನ ತಾಯಿಗೆ ಮರ್ಯಾದೆ ಮಾಡುವ ಕಾರ್ಯ:**

ಒಂಬತ್ತು ತಿಂಗಳು ತನ್ನ ಬಸಿರಿನಲ್ಲಿ ಹೊತ್ತು ನಂತರ ಹೆತ್ತು ಕಷ್ಟಗಳು ಏನೇ ಇರಲಿ ನಿರ್ವಂಚನೆಯಿಂದ ಸಾಕಿ ಸಲಹಿ ಮಗಳನ್ನು ದೊಡ್ಡವಳನ್ನಾಗಿಸಿ ಮದುವೆಯ ಘಟ್ಟಕ್ಕೆ ತಲುಪಿಸಿ, ತನ್ನ ಕರುಳ ಬಳ್ಳಿಯಾದರೂ ಹೊಕ್ಕ ಮನೆಯನ್ನು ಬೆಳಗಲಿ ಎನ್ನುವ ಉದಾತ್ತ ಮನೋಭಾವನೆಯಿಂದ ದುಃಖವನ್ನೆಲ್ಲಾ ಒಡಲಿನಲ್ಲಿರಿಸಿಕೊಂಡು ನಗುಮೊಗದೊಂದಿಗೆ ಕನ್ಯದಾನವನ್ನು ಮಾಡಲು ಮುಂದಾದ ತಾಯಿಗೆ ಕೃತಜ್ಞತಾಪೂರ್ವಕವಾದ ಗೌರವವನ್ನು ಸಲ್ಲಿಸಲೆಂದು ಹಿರಿಯರು ಪಾಲಿಸಿಕೊಂಡು ಬಂದ ವಿಧಿ.

**ಸಿದ್ಧತೆ:**

- ಮಂಟಪದಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳಿವಸ್ತ್ರವನ್ನು ಹಾಸಬೇಕು.
- ಮಣೆಯ ಬಲಭಾಗದಲ್ಲಿ ಒಂದು ದೀಪಸ್ತಂಭವನ್ನು ಇಟ್ಟು ಅದರಲ್ಲಿ ಎರಡು ಜ್ಯೋತಿಗಳನ್ನು ಬೆಳಗಿಸಬೇಕು.
- ಮಣೆಯ ಮುಂದೆ ಕೆಳಗೆ ನಮೂದಿಸಿರುವ ಮೂರು ತಟ್ಟೆಗಳನ್ನು ಇಡಬೇಕು
- ಒಂದು ತಟ್ಟೆಯಲ್ಲಿ ಮನೆ ಮುದ್ದೆ (ಅಕ್ಕಿ ಹಿಟ್ಟು ಹಾಗೂ ಬೆಲ್ಲದಿಂದ ತಯಾರಿಸಿದ ತಂಬಿಟ್ಟು).
- ಮತ್ತೊಂದು ತಟ್ಟೆಯಲ್ಲಿ ಗಂಟಿನ ಸಾಮಗ್ರಿಗಳ ಜೊತೆಗೆ ರೇಷ್ಮೆ ಸೀರೆ, ರವಿಕೆ ಮತ್ತು ಹೂವುಗಳು.

- ಇನ್ನೊಂದು ತಟ್ಟೆಯಲ್ಲಿ ಅರಿಶಿನ ಕುಂಕುಮ ಮತ್ತು ಅಕ್ಷತೆ ಬಟ್ಟಲು ಜೊತೆಗೆ ಸ್ವಲ್ಪ ಬಿಡಿ ಹೂವು.
- ಒಂದು ಲೋಟದಲ್ಲಿ ಸ್ವಲ್ಪ ನೀರು.

**ವಿಧಾನ:**

- ವಧುವಿನ ತಾಯಿಯವರನ್ನು ಆದರದಿಂದ ಬರಮಾಡಿಕೊಂಡು ಮಣೆಯ ಬಲಭಾಗದಿಂದ ಬರುವಂತೆ ಕರೆದು ಕೂರಿಸಬೇಕು.
- ಮುತ್ತೈದೆಯೊಬ್ಬರು ದೀಪಸ್ತಂಭಕ್ಕೆ ಅರಿಶಿನ ಕುಂಕುಮ ಮತ್ತು ಬಿಡಿ ಹೂಗಳನ್ನಿಟ್ಟು, ವಧುವಿನ ತಾಯಿಯ ಕೆನ್ನೆ, ಕೈಗಳಿಗೆ ಮತ್ತು ಪಾದಗಳಿಗೆ ಅರಿಶಿನವನ್ನು ಬಳಿದು ಆಕೆಯ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ತಲೆಗೆ ಹೂವನ್ನು ಮುಡಿಸಬೇಕು.
- ಆಮೇಲೆ ಅವರ ಮರ್ಯಾದೆಗೆಂದು ತಂದಿರುವ ಎರಡು ತಟ್ಟೆಗಳ ಜೊತೆಗೆ ಅರಿಶಿನ ಕುಂಕುಮ ಮತ್ತು ಅಕ್ಷತೆಯಿರುವ ತಟ್ಟೆಯನ್ನು ಸಹ ಅವರ ಕೈಯಲ್ಲಿ ಮೂರು ಸಾರಿ ನಮಸ್ಕಾರ ಮಾಡಿಸಬೇಕು.
- ನಂತರ ಆಕೆಯ ಮರ್ಯಾದೆಗೆಂದು ಇರುವ ಎರಡು ತಟ್ಟೆಗಳನ್ನು ಆಕೆಗೆ ಒಪ್ಪಿಸಬೇಕು.

**ವಧುವಿನ ಒಸಗೆ ಶಾಸ್ತ್ರ:**

**ಸಿದ್ಧತೆ:**

ವಧುವಿನ ಒಸಗೆ ಶಾಸ್ತ್ರವನ್ನು ಆರಂಭಿಸುವ ಮುನ್ನ ಮಂಟಪದಲ್ಲಿ ಹಸೆಯನ್ನು ಬರೆದಿರುವ ಸ್ಥಳದಲ್ಲಿರುವ ಅಕ್ಕಿಯನ್ನು ಪಕ್ಕಕ್ಕೆ ಸರಿಸಿ ಆ ಜಾಗದಲ್ಲಿ ಒಂದು ಮಣೆಯನ್ನು ಹಾಕಿ ಅದರ ಮೇಲೊಂದು ಬಿಳಿ ವಸ್ತ್ರವನ್ನು ಹಾಸಿ, ಮಣೆಯ ಮುಂದೆ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಿ, ವಧುವಿನ ಮುಂದೆ ವರನ ಮನೆಯವರ ಸ್ಥಿತಿಗತಿಯ ಮೇರೆಗೆ ಒಪ್ಪಿಸಿದ 9, 11, 15, 19 ಅಥವಾ 21 ತಟ್ಟೆಗಳನ್ನು ಇಡಬೇಕು.

- ಮೊದಲನೆಯ ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಬಿಡಿ ಹೂವುಗಳು.
- ಎರಡನೆಯ ತಟ್ಟೆಯಲ್ಲಿ ವೀಳ್ಯೆದೆಲೆ ಮತ್ತು ಅಡಿಕೆ.
- ಮೂರನೆಯ ತಟ್ಟೆಯಲ್ಲಿ ಮೂರು ಪಾವು (ಮುಕ್ಕಾಲು ಕೆ.ಜಿ.) ಕಡ್ಲೆಪಪ್ಪು, ಹನ್ನೊಂದು ವೀಳೆಯದೆಲೆ, ಐವತ್ತು ಗ್ರಾಂ ಅಡಿಕೆ, ಹನ್ನೊಂದು ಬಾಳೆಹಣ್ಣುಗಳು, ಐದು ಬೆಲ್ಲದ ಉಂಡೆಗಳು, ಐದು ಖರ್ಜೂರಗಳು, ಐದು ಅರಿಶಿನದ ಕೊಂಬುಗಳು, ಅರಿಶಿನ ಮತ್ತು ಕುಂಕುಮದ ಪೊಟ್ಟಣ ತಲಾ ಎರಡೆರಡು, ಎರಡು ಕೊಬ್ಬರಿ ಬಟ್ಟಲು, ಒಂದು ಹಸಿರು ಬಣ್ಣದ ರವಿಕೆ ಬಟ್ಟೆ, ಒಂದು ಮೊಳದಷ್ಟು ಉದ್ದದ ಕಟ್ಟಿದ ಬಿಳಿ ಹೂವುಗಳು.



- ನಾಲ್ಕರಿಂದ ಒಂಭತ್ತು ತಟ್ಟೆಗಳಲ್ಲಿ ಆರು ತರಹದ ಸಿಹಿ ತಿನಿಸುಗಳು.
- ಹತ್ತರಿಂದ ಹದಿನೈದು ತಟ್ಟೆಗಳಲ್ಲಿ ಆರು ತರಹದ ಖಾರದ ತಿನಿಸುಗಳು.
- ಹದಿನಾರರಿಂದ ಇಪ್ಪತ್ತೊಂದು ತಟ್ಟೆಗಳಲ್ಲಿ ಆರು ತರಹದ ಹಣ್ಣುಗಳು.

**ವಿಧಾನ:**

- ಒಂಭತ್ತು ಮುತ್ತೈದೆಯರು ಕ್ರಮವಾಗಿ ಬಂದು ದೀಪಸ್ತಂಭಗಳಿಗೆ ಅರಿಶಿನ ಕುಂಕುಮವನ್ನು ಹಚ್ಚಿ ಹೂವನ್ನಿಡಬೇಕು.
- ವಧುವಿನ ಕೆನ್ನೆ, ಕೈಗಳು ಮತ್ತು ಪಾದಗಳಿಗೆ ಅರಿಶಿನ ಹಚ್ಚಿ, ಹಣೆಗೆ ಕುಂಕುಮವನ್ನು ಎರಡು ಬಾರಿ ಇಟ್ಟು, ಹೂವನ್ನು ಕೊಡಬೇಕು.
- ಮೂರು ತರಹದ ತಟ್ಟೆಗಳಿಗೆ ವಧುವಿನ ಕೈಗಳಿಂದ ನಮಸ್ಕಾರ ಮಾಡಿಸಿ, ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳನ್ನು ತಾಂಬೂಲ ರೂಪದಲ್ಲಿ ತಮ್ಮ ಸೆರಗೊಡ್ಡಿ ಪಡೆಯತಕ್ಕದ್ದು.
- ಈ ಪ್ರಕ್ರಿಯೆಯನ್ನು ಮೂವರು ಮುತ್ತೈದೆಯರು ಮುಗಿಸಿದ ಮೇಲೆ, ವಧುವನ್ನು ಮಣೆಯ ಎಡಭಾಗದಿಂದ ಎಬ್ಬಿಸಿ ಮಣೆಯನ್ನು ಒಂದು ಸುತ್ತು ಹಾಕಿಸಿ ಮತ್ತೆ ಮಣೆಯ ಬಲಭಾಗದಿಂದ ಕರೆತಂದು ಮಣೆಯ ಮೇಲೆ ಕೂರಿಸಬೇಕು.
- ನಂತರ, ಇನ್ನುಳಿದ ಆರು ಮುತ್ತೈದೆಯರು ಮೇಲಿನ ಕ್ರಮವನ್ನು ಅನುಸರಿಸಬೇಕು.

ಆಮೇಲೆ ಮೂವರು ಮುತ್ತೈದೆಯರು ಸೇರಿ ಕೆಂಪು ನೀರಿನ ಆರತಿಯನ್ನು ಆರತಿ ಹಾಡು ಹಾಡುತ್ತಾ ವಧುವಿಗೆ ಬೆಳಗಿ ಆಕೆಯ ಹಣೆಗೆ ಎರಡು ಸಲ ತಿಲಕವನ್ನಿರಿಸಿ ತಟ್ಟೆಯಲ್ಲಿರುವ ಕೆಂಪು ನೀರನ್ನು ಛತ್ರದ ಮುಂಬಾಗಿಲಿನ ಮುಂದೆ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು ಹಿಂದಿರುಗಿ ಖಾಲಿಯಾದ ಆರತಿ ತಟ್ಟೆಯನ್ನು ವಧುವಿನ ಮುಂದೆ ಒಡ್ಡಿ ದಕ್ಷಿಣೆಯ ಸಮೇತ ತಾಂಬೂಲವನ್ನು ಪಡೆಯಬೇಕು.

**ಅರಿಶಿನದ ಪಂಚೆಗಳ ಸಿದ್ಧತೆ:**

ನಾಗರ ಪೂಜೆಯನ್ನು ಮಾಡುವ ದಿವಸದ ರಾತ್ರಿ ವಧುವಿನ ಕಡೆಯವರು ಒಂದು ಪಾತ್ರೆಯಲ್ಲಿ ವಧುವಿನ ಮನೆಯಲ್ಲಿ ಕುಟ್ಟಿರುವ ಅರಿಶಿನದ ಪುಡಿಯನ್ನು ಹಾಕಿ ಅದಕ್ಕೆ ಎರಡು ನಿಂಬೆ ಹಣ್ಣಿನ ರಸವನ್ನು ಸೇರಿಸಿ ಸಾಕಷ್ಟು ನೀರನ್ನು ಬೆರೆಸಿ ಕದಡಿ ಎರಡು ಖಾದಿಯ ಪಂಚೆಯನ್ನು ಚೆನ್ನಾಗಿ ನೆನೆಸಿದ ಮೇಲೆ ಒಣಗಿಸಬೇಕು. ಅವುಗಳಲ್ಲಿ ಒಂದನ್ನು ವರನ ಕಾಶೀಯಾತ್ರೆಗೆ ಮತ್ತೊಂದನ್ನು ಧಾರೆಯ ಕಾರ್ಯಕ್ರಮಕ್ಕೆಂದು ವರನಿಗೆ ಕೊಡಬೇಕು. ಕಾಶೀಯಾತ್ರೆಗೆ ಉಪಯೋಗಿಸಿದ ಪಂಚೆಯನ್ನು ಮುಂದೆ ವರನ ಮನೆಯವರು ಪುರೋಹಿತರಿಗೆ ದಾನವಾಗಿ ಕೊಡತಕ್ಕದ್ದು.

**ಲಗ್ನದ ದಿನದ ಅರಿಶಿನ ಮತ್ತು ಎಣ್ಣೆ ಶಾಸ್ತ್ರ** (ವಧು ವರರಿಗೆ) :

ಲಗ್ನದ ದಿನ ಬೆಳಿಗ್ಗೆ ವಧುವು ಮುಂಚಿತವಾಗಿ ಎದ್ದು ತನ್ನ ಅರಿಶಿನ ಮತ್ತು ಎಣ್ಣೆಯ ಶಾಸ್ತ್ರವನ್ನು ಮುಗಿಸಿಕೊಂಡು ಸ್ನಾನ ಮಾಡಿದ ಬಳಿಕ ವರನಿಗೆ ಅರಿಶಿನ ಮತ್ತು ಎಣ್ಣೆ ಹಚ್ಚುವ ಶಾಸ್ತ್ರವನ್ನು ಮಂಟಪದಲ್ಲಿ ಮಾಡಬೇಕು.

**ಸಿದ್ಧತೆ ವಧುವಿಗೆ:**

- ಛತ್ರದ ಮಂಟಪದಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು.
- ಮಣೆಯ ಮುಂದೆ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಬೇಕು.
- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ ಅಕ್ಷತೆಯ ಬಟ್ಟಲು ಮತ್ತು ಸ್ವಲ್ಪ ಬಿಳಿ ಬಿಡಿ ಹೂಗಳು ಮತ್ತು ಒಂದು ಬಿಳಿ ಹೂವಿನ ಹಾರ ಇಡಬೇಕು.
- ಒಂದು ತಟ್ಟೆಯಲ್ಲಿ ಮೂರು ಅಥವಾ ಐದು ತಾಂಬೂಲ (ಪ್ರತೀ ತಾಂಬೂಲದಲ್ಲಿ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆ) ಇರಬೇಕು..
- ಒಂದು ಬಟ್ಟಲಿನಲ್ಲಿ ಹರಳೆಣ್ಣೆ.
- ಒಂದು ಲೋಟದಲ್ಲಿ ನೀರು.



**ವಿಧಾನ:**

- ವಧುವನ್ನು ಮಣೆಯ ಬಲಗಡೆಯಿಂದ ಬರಮಾಡಿಕೊಂಡು ಮಣೆಯ ಮೇಲೆ ಕೂರಿಸಬೇಕು.
- ಮೂರು ಅಥವಾ ಐವರು ಮುತ್ತೈದೆಯರು ಕ್ರಮವಾಗಿ ಬಂದು ದೀಪಸ್ತಂಭಗಳಿಗೆ ಮತ್ತು ವಧುವಿಗೆ ಅರಿಶಿನ ಕುಂಕುಮ ಹಚ್ಚಿ ಹೂವನ್ನು ಇಡಬೇಕು.
- ಅರಿಶಿನದ ಕೈ ಮಾಡಿಕೊಂಡು ವಧುವಿನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನವನ್ನು ಹಚ್ಚಬೇಕು.
- ಹರಳೆಣ್ಣೆಯನ್ನು ವಧುವಿನ ನೆತ್ತಿಯ ಮೇಲೆ ಮೂರು ಬಾರಿ ಮೆದುವಾಗಿ ತಟ್ಟಬೇಕು
- ವಧುವು ಕೊಡುವ ತಾಂಬೂಲವನ್ನು ಸ್ವೀಕರಿಸಬೇಕು.
- ಅಂದಹಾಗೇ ಮೊದಲ ಮುತ್ತೈದೆಯು ವಧುವಿನ ಕೊರಳಿಗೆ ಹೂವಿನ ಹಾರವನ್ನು ಹಾಕಬೇಕು.
- ನಂತರ, ವಧುವನ್ನು ಮಣೆಯ ಎಡಗಡೆಯಿಂದ ಎಬ್ಬಿಸಿ ಸ್ನಾನಕ್ಕೆ ಕಳುಹಿಸಬೇಕು.

**ಸಿದ್ಧತೆ ವರನಿಗೆ:**

- ಛತ್ರದ ಮಂಟಪದಲ್ಲಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು.
- ಮಣೆಯ ಮುಂದೆ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಬೇಕು.
- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ ಅಕ್ಷತೆಯ ಬಟ್ಟಲು ಮತ್ತು ಸ್ವಲ್ಪ ಬಿಳಿ ಬಿಡಿ ಹೂಗಳು ಮತ್ತು ಒಂದು ಬಿಳಿ ಹೂವಿನ ಹಾರ ಇಡಬೇಕು.
- ಒಂದು ತಟ್ಟೆಯಲ್ಲಿ ಮೂರು ಅಥವಾ ಐದು ತಾಂಬೂಲ (ಪ್ರತೀ ತಾಂಬೂಲದಲ್ಲಿ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆ) ಇರಬೇಕು.
- ಒಂದು ಬಟ್ಟಲಿನಲ್ಲಿ ಹರಳೆಣ್ಣೆ.
- ಒಂದು ಲೋಟದಲ್ಲಿ ನೀರು.

**ವಿಧಾನ:**

- ವರನನ್ನು ಮಣೆಯ ಬಲಗಡೆಯಿಂದ ಬರಮಾಡಿಕೊಂಡು ಮಣೆಯ ಮೇಲೆ ಕೂರಿಸಬೇಕು.
- ಶುಚೀರ್ಭೂತಳಾದ ವಧುವನ್ನು ಸೇರಿಸಿಕೊಂಡು ಮೂರು ಅಥವಾ ಐವರು ಮುತ್ತೈದೆಯರು ಕ್ರಮವಾಗಿ ಬಂದು ದೀಪಸ್ತಂಭಗಳಿಗೆ ಮತ್ತು ವರನಿಗೆ ಅರಿಶಿನ ಕುಂಕುಮ ಹಚ್ಚಿ ಹೂವನ್ನು ಇಡಬೇಕು.
- ಅರಿಶಿನದ ಕೈ ಮಾಡಿಕೊಂಡು ವರನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನವನ್ನು ಹಚ್ಚಬೇಕು.
- ಹರಳೆಣ್ಣೆಯನ್ನು ವರನ ನೆತ್ತಿಯ ಮೇಲೆ ಮೂರು ಬಾರಿ ಮೆದುವಾಗಿ ತಟ್ಟಬೇಕು
- ವರನು ಕೊಡುವ ತಾಂಬೂಲವನ್ನು ಸ್ವೀಕರಿಸಬೇಕು.
- ಮೊದಲ ಮುತ್ತೈದೆಯು ವರನ ಕೊರಳಿಗೆ ಹೂವಿನ ಹಾರವನ್ನು ಹಾಕಬೇಕು. ನಂತರ, ವರನನ್ನು ಮಣೆಯ ಎಡಗಡೆಯಿಂದ ಎಬ್ಬಿಸಿ ಸ್ನಾನಕ್ಕೆ ಕಳುಹಿಸಬೇಕು.

**ವಧುವಿನ ನಾಂದಿ ಶಾಸ್ತ್ರ ಮತ್ತು ನವಗ್ರಹ ಪೂಜೆ / ವರನ ನಾಂದಿ ಶಾಸ್ತ್ರ, ನವಗ್ರಹ ಪೂಜೆ ಮತ್ತು ಹೋಮ** (ಪ್ರತ್ಯೇಕವಾಗಿ):




ಛತ್ರದ ಮಂಟಪದಲ್ಲಿ ಮೊದಲು ವಧುವಿನ ಶಾಸ್ತ್ರಗಳನ್ನು ನೆರವೇರಿಸಿದ ಮೇಲೆ ವರನ ಶಾಸ್ತ್ರಗಳನ್ನು ಪೂರೈಸಬೇಕು.

**ಸಿದ್ಧತೆ:**

- ಮಂಟಪದಲ್ಲಿ ಹಸೆ ಹಾಕಿರುವ ಜಾಗದಲ್ಲಿ ಮೂರು ಮಣೆಗಳನ್ನು ಪೂರ್ವ ಅಥವಾ ಉತ್ತರಾಭಿಮುಖವಾಗಿ ಹಾಕಿ ಅದರ ಮೇಲೆ ಬಿಳಿ ವಸ್ತ್ರವನ್ನು ಹಾಸಿ ಅವುಗಳ ಮುಂದೆ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಬೇಕು.



- ಮಣೆಗಳ ಮುಂದೆ ಬಲಗಡೆಗೆ ಕಳಸದ ತಟ್ಟೆಯನ್ನಿಡಬೇಕು.
- ಮಣೆಗಳ ಮುಂದೆ ಬಲಗಡೆಗೆ ಮತ್ತೊಂದು ಮಣೆಯನ್ನು ಪುರೋಹಿತರಿಗೆಂದು ಹಾಕಬೇಕು.

**ನವಗ್ರಹ ಪೂಜೆಗೆ ಸಿದ್ಧಪಡಿಸಬೇಕಾದ ವಸ್ತುಗಳು:**

- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು, ಬಿಡಿ ಹೂವುಗಳು ಮತ್ತು ಕಟ್ಟಿದ ಹೂವುಗಳು, ಗಂಟೆ, ಗಂಧದ ಕಡ್ಡಿಗಳು, ತುಪ್ಪದ ಬತ್ತಿಗಳು, ಕರ್ಪೂರ, ಆರತಿ ತಟ್ಟೆ, ಬೆಂಕಿ ಪೊಟ್ಟಣ.
- ನವಧಾನ್ಯ ಮತ್ತು ಉಪ್ಪು – 1 ಕೆ.ಜಿ., ದೊನ್ನೆ – 12, ಇಸ್ತ್ರಿ ಎಲೆ – 4, ವೀಳೆಯದೆಲೆ ಮತ್ತು ಬಟ್ಟಲು ಅಡಿಕೆ, ಬಾಳೆ ಹಣ್ಣು – 24, ಜೇನು ತುಪ್ಪ – 50 ಗ್ರಾಂ, ಅಕ್ಕಿ – 5 ಸೇರು, ಸುಣ್ಣವನ್ನು ಲೇಪಿಸಿದ ಒಂದು ಚೊಂಬು ಮತ್ತು ಎರಡು ಲೋಟಗಳು, ಮಾವಿನ ಕುಡಿಗಳು ಸ್ವಲ್ಪ, ಬಿಳಿ ವಸ್ತ್ರ – ನವಧಾನ್ಯಕ್ಕೆಂದು, ಬಿಳಿ ಹೂವಿನ ಹಾರಗಳು – 6, ದಕ್ಷಿಣೆಗೆಂದು ಸ್ವಲ್ಪ ಚಿಲ್ಲರೆ ಕಾಸು.
- ತೆಂಗಿನಕಾಯಿ – 4 (ಪೂಜೆಗೆಂದು), ನಾರು ಇರುವ ತೆಂಗಿನ ಕಾಯಿ – 1, ತಳದ ಕೊಬ್ಬರಿ ಬಟ್ಟಲು – 2, 1 ತಟ್ಟೆಯಲ್ಲಿ ಅಕ್ಷತೆ.
- ಬೆಲ್ಲದ ಉಂಡೆ – ½ ಕೆ. ಜಿ, ಖರ್ಜೂರ – ½ ಕೆ.ಜಿ, ಒಣ ದ್ರಾಕ್ಷಿ – ½ ಕೆ. ಜಿ, ಜನಿವಾರ – 10, ಶಾಲು – 1.
- ಗಂಧದ ಕಲ್ಲು, ಗಂಧದ ಚಕ್ಕೆ, ಅಕ್ಕಿ ಹಿಟ್ಟು ಸ್ವಲ್ಪ.

**ನಾಂದಿಪೂಜೆಗೆ ಸಿದ್ಧಪಡಿಸಬೇಕಾದ ವಸ್ತುಗಳು:**

- ಒಂದು ತಟ್ಟೆಯಲ್ಲಿ ನಾರಿರುವ ತೆಂಗಿನಕಾಯಿ – 1, ಕೊಬ್ಬರಿ ಬಟ್ಟಲು – 1, ಸ್ವಲ್ಪ ಬಟ್ಟಲು ಅಡಿಕೆ, ವೀಳ್ಯೆದೆಲೆ – 2, ಅಡಿಕೆ – 2, ಬಾಳೆಹಣ್ಣು – 2.
- ಹೋಮದ ಕುಂಡ ಮತ್ತು ಹೋಮದ ಕಡ್ಡಿಗಳು (ಮುತ್ತುಗ, ಎಕ್ಕ, ಉತ್ತರಾಯನ ಪತ್ರ, ಅಶ್ವತ್ಥ, ಬನ್ನೀ ಮರ ಮತ್ತು ಅರಳೀ).

**ವಿಧಾನ:**

- ವಧು ಮತ್ತು ವಧುವಿನ ತಂದೆ ತಾಯಿಯವರನ್ನು ಮಣೆಯ ಬಲಭಾಗದಿಂದ ಬರುವಂತೆ ಕರೆತಂದು ವಧುವು ತಾಯಿ ತಂದೆಯರ ನಡುವೆ ಇರುವಂತೆ ಮಣೆಗಳ ಮೇಲೆ ಕೂರಿಸಬೇಕು.

- ಪುರೋಹಿತರ ಮಾರ್ಗದರ್ಶನದಲ್ಲಿ ನಾಂದಿಪೂಜೆ ಆದ ನಂತರ ಮೂವರು ಮುತ್ತೈದೆಯರು ಕ್ರಮವಾಗಿ ಬಂದು ದೀಪಸ್ತಂಭಗಳಿಗೆ ಮತ್ತು ಕಳಸಕ್ಕೆ ಅರಿಶಿನ ಕುಂಕುಮ ಹಾಗೂ ಹೂವುಗಳನ್ನಿರಿಸಬೇಕು.
- ವಧು ಮತ್ತು ವಧುವಿನ ತಂದೆ ತಾಯಿಯವರ ಕೆನ್ನೆಗಳು, ಕೈಗಳು ಮತ್ತು ಪಾದಗಳಿಗೆ ಅರಿಶಿನವನ್ನು ಹಚ್ಚಿ, ಕುಂಕುಮವನ್ನಿಟ್ಟು ಅವರುಗಳಿಗೆ ಹೂವನ್ನು ಕೊಡಬೇಕು.
- ಕಳಸದ ತಟ್ಟೆಯಲ್ಲಿರುವ ಅಕ್ಕಿಯನ್ನು ಎರಡೂ ಕೈಗಳಲ್ಲಿ ತೆಗೆದುಕೊಂಡು ಮೊದಲು ಕಳಸಕ್ಕೆ ನಂತರ ವಧು ಮತ್ತು ವಧುವಿನ ತಂದೆ ತಾಯಿಯವರಿಗೆ ಮೂರು ಬಾರಿ ಬರುವಂತೆ ಕೈಗಳು, ಭುಜಗಳು ಮತ್ತು ತಲೆಯ ಮೇಲೆ ಸಾಸೆಯನ್ನು (ಅಕ್ಕಿಯನ್ನು) ಹಾಕುವುದು.
- ನಂತರ, ತಮ್ಮ ಗಂಡನ ಮನೆಯವರ ವಂಶದ ಹೆಸರು ಹಾಗೂ ಗಂಡನ ಹೆಸರಿನ ಜೊತೆಗೆ "ಮಾಮ" ಎಂಬ ಪದವನ್ನು ಸೇರಿಸಿ ಹೇಳಿ ತಮ್ಮ ಸೆರಗೊಡ್ಡಿ ಎರಡು ವೀಳೆಯದೆಲೆ ಎರಡು ಅಡಿಕೆಗಳನ್ನು ತಾಂಬೂಲ ರೂಪದಲ್ಲಿ ಪಡೆಯತಕ್ಕದ್ದು.

ಇದಾದ ನಂತರ, ಕೆಂಪು ನೀರಿನ ಆರತಿಯನ್ನು ಆರತಿ ಹಾಡು ಹಾಡುತ್ತಾ ಮಾಡಿ ಮೂವರ ಹಣೆಗಳಿಗೆ ಎರಡೆರಡು ಸಲ ತಿಲಕವನ್ನಿರಿಸಿ ತಟ್ಟೆಯಲ್ಲಿರುವ ಕೆಂಪು ನೀರನ್ನು ಛತ್ರದ ಮುಂಬಾಗಿಲಿನ ಮುಂದೆ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು ಹಿಂದಿರುಗಿ ಖಾಲಿಯಾದ ಆರತಿ ತಟ್ಟೆಯನ್ನು ಅವರ ಮುಂದೆ ಒಡ್ಡಿ ದಕ್ಷಿಣೆಯ ಸಮೇತ ತಾಂಬೂಲವನ್ನು ಪಡೆಯಬೇಕು.

***ಸೂಚನೆ:*** ವರನ ನಾಂದಿಶಾಸ್ತ್ರ ಮತ್ತು ನವಗ್ರಹ ಪೂಜೆಯನ್ನು ಸಹ ಮೇಲೆ ನಮೂದಿಸಿರುವಂತೆ ವರನ ತಂದೆ ತಾಯಿಯರೊಂದಿಗೆ ಮಂಟಪದಲ್ಲಿ ಜರುಗಿಸಬೇಕಲ್ಲದೇ ಅವುಗಳ ಜೊತೆಗೆ ಹೋಮದ ಶಾಸ್ತ್ರವನ್ನು ಪುರೋಹಿತರ ಮಾರ್ಗದರ್ಶನದಲ್ಲಿ ಮಾಡಬೇಕು.

**ಹೋಮಶಾಸ್ತ್ರದ ವಿಧಾನ :**

- ಹೋಮಶಾಸ್ತ್ರಕ್ಕೆ ಪುರೋಹಿತರು ಹೋಮಕುಂಡವನ್ನು ಸಿದ್ಧತೆ ಮಾಡಿಕೊಳ್ಳುವುದು.
- ಇಬ್ಬರು ಮುತ್ತೈದೆಯರು ಒಂದು ತಟ್ಟೆಯಲ್ಲಿ ಸ್ವಲ್ಪ (5–10) ತುಪ್ಪದ ಬತ್ತಿಯನ್ನು ತೆಗೆದುಕೊಂಡು ಬರುವುದು.



- ಅಲ್ಲಿಯೇ ಉರಿಯುತ್ತಿರುವ ದೀಪಸ್ತಂಭದಲ್ಲಿನ ಜ್ಯೋತಿಯಿಂದ ತಾವು ತಂದಿರುವ ತುಪ್ಪದ ಬತ್ತಿಯನ್ನು ಬೆಳಗಿಸಿಕೊಂಡು ನಂತರ ಆ ಜ್ಯೋತಿಯ ರೂಪದಲ್ಲಿರುವ ಅಗ್ನಿ ದೇವರನ್ನು ಹೋಮಕುಂಡಕ್ಕೆ ಸ್ಪರ್ಶಿಸಬೇಕು.
- ಇಬ್ಬರು ಮುತ್ತೈದೆಯರು ದಹಿಸುತ್ತಿರುವ ಹೋಮಕುಂಡಕ್ಕೆ ನಮಸ್ಕರಿಸಿ ಹೋಮ ಕುಂಡದ ಎದುರು ಕುಳಿತುಕೊಂಡು ಪುರೋಹಿತರಿಂದ ಮಂಗಳ ದ್ರವ್ಯಗಳಾದ, ಅರಿಶಿನ ಮತ್ತು ಕುಂಕುಮವನ್ನು ಇಟ್ಟುಕೊಂಡು ಹೂವನ್ನು ಮುಡಿದುಕೊಂಡು ನಮಸ್ಕರಿಸಿ ತೆರಳಬೇಕು.

ನಂತರ ವರನ ಸೋದರಮಾವನವರು ವರನ ತಲೆಯ ಮೇಲೆ ಟೋಪಿಯನ್ನಿರಿಸಿ ಬಾಸಿಂಗವನ್ನು ಕಟ್ಟಬೇಕು.

ನಂತರ, ವಧುವಿಗೆ ಧಾರೆಯ ಸೀರೆಯನ್ನು ಉಡಿಸಿ, ಅಲಂಕಾರ ಮಾಡಿದ ಮೇಲೆ ವಧುವಿನ ಸೋದರಮಾವನವರು ಆಕೆಯ ಹಣೆಗೆ ಬಾಸಿಂಗವನ್ನು ಕಟ್ಟಿದ ನಂತರ ವಧುವಿನ ಸೋದರತ್ತೆಯವರು ಕಾಲುಂಗುರವನ್ನು ತೊಡಿಸಬೇಕು.

**ಕಾಶೀಯಾತ್ರೆ :**

ಸಮಾವರ್ತನದ ವಿಧಿ ವಿಧಾನಗಳನ್ನು ಪೂರೈಸಿ ಮಂತ್ರ ಸ್ನಾನ, ಮಂಗಲ ಸ್ನಾನ, ಗಂಧ ಲೇಪನ, ನೂತನ ವಸ್ತ್ರಧಾರಣೆ, ಉತ್ತರೀಯ ಧಾರಣೆ, ದ್ವಿತೀಯ ಯಜ್ಞೋಪವೀತ ಧಾರಣೆ ಮತ್ತು ಒಂದು ಗಂಟಿನಲ್ಲಿ ಅಕ್ಕಿ, ಕೊಬ್ಬರಿಗಳನ್ನು ಕಟ್ಟಿಕೊಂಡು ಕಾಶೀಯಾತ್ರೆಗೆ ಹೊರಡುತ್ತೇನೆ ಎಂದು ಅಪ್ಪಣೆ ಪಡೆದು ಉತ್ತರ ದಿಕ್ಕಿಗೆ ಏಳು ಹೆಜ್ಜೆಗಳನ್ನು ಇಡುವುದು ಸಂಪ್ರದಾಯ. ಅಷ್ಟು ಹೊತ್ತಿಗೆ ವಧುವಿನ ಕಡೆಯವರು ಬಂದು, ಆತನ ಕೈಯಲ್ಲಿದ್ದ ಗಂಟನ್ನು ಕಸಿದುಕೊಂಡು "ಅಯ್ಯಾ, ನೀನು ಈಗಲೇ ಕಾಶಿಗೆ ಹೋಗುವುದು ಬೇಡ, ನಾವು ನಿನಗೆ ಹೆಣ್ಣನ್ನು ಕೊಡುತ್ತೇವೆ, ಆನಂತರ ಇಬ್ಬರೂ ಸೇರಿ ಯಾತ್ರೆಗೆ ಹೋಗುವಿರಂತೆ" ಎಂದು ಹೇಳಿದಾಗ ವರನು "ಧನ್ಯೋಸ್ಮಿ" ಎಂದು ತಿರುಗಿ ಬರುತ್ತಾನೆ. ಈ ಶಿಷ್ಟಾಚಾರಕ್ಕೆ ಅರ್ಥವನ್ನು ಕೆದಕಿದರೆ ಹಿಂದೆ, ವಿದ್ಯಾರ್ಜನೆ ಮುಗಿದ ಬಳಿಕ ಬ್ರಹ್ಮಚಾರಿಗೆ ಸಂಸಾರದಲ್ಲಿ ವಿರಕ್ತಿ ತಲೆದೋರಿ ಪರಿವ್ರಾಜಕ ಪಥಧುರಂಧರನೆನಿಸಲು ಆತನು ಯಾತ್ರೆಗೆ ಹೊರಡುತ್ತಾನೆ ಎಂಬುದಾದರೂ ಇದರಲ್ಲಿ ಎರಡು ಗುರಿಗಳಿವೆ ಎಂಬುದು ಸ್ಪಷ್ಟ; ಒಂದು ಕನ್ಯಾನ್ವೇಷಣೆ ಮತ್ತೊಂದು ದೇವರ ದರ್ಶನದಿಂದ ಪುಣ್ಯ ಸಂಚಯನ.

**ವರನ ಉಡುಗೆ :**

- ಅರಿಶಿನದ ಪಂಚೆಯಲ್ಲಿ ಕಚ್ಚೆ, ಬಿಳಿ ಜೋಡಿ ಅಂಗವಸ್ತ್ರ (ಟವೆಲ್), ಟೋಪಿ, ಬಾಸಿಂಗ, ಎಡಗೈಯಲ್ಲಿ ಒಂದು ಜೋಳಿಗೆ, ಅರಳೀಕುಡಿ, ಛತ್ರಿ, ಬೀಸಣಿಗೆ ಮತ್ತು ಬಲಗೈಯಲ್ಲಿ ಪಂಚಪತ್ರೆ, ಉದ್ಧರಣೆ.
- ವರನ ತಾಯಿ, ತಂದೆ, ವಧುವಿನ ತಾಯಿ ತಂದೆ ಮತ್ತು ಕಳಸ ಹಿಡಿದಿರುವ ದಂಪತಿಗಳು ವರನು ಹಿಡಿದಿರುವ ಜೋಳಿಗೆಗೆ ಮೂರು ಬಾರಿ ಒಂದೊಂದು ಜೋಡಿಯು ಒಂದು ಕೊಬ್ಬರಿ ಬಟ್ಟಲು ಸಮೇತ ಅಕ್ಕಿಯನ್ನು ಹಾಕತಕ್ಕದ್ದು.
- ಒಂದು ಶಾಲು ಮತ್ತು ಒಂದು ಉದ್ದನೆಯ ಕೋಲು ಇರಬೇಕು ಕಾಶೀಯಾತ್ರೆಗೆ ಹೊರಡಲು.

**ಕಾಶೀಯಾತ್ರೆ ಮತ್ತು ನಾಗರಪೂಜೆಗೆ ಸಿದ್ಧಪಡಿಸಬೇಕಾದ ವಸ್ತುಗಳು:**

- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು, ಕಟ್ಟಿದ ಹೂವು ಮತ್ತು ಬಿಡಿ ಹೂವುಗಳು, ತೆಂಗಿನಕಾಯಿ – 2, ಬಾಳೆಹಣ್ಣು – 24, ಗಂಟೆ, ಆರತಿ ತಟ್ಟೆ, ಗಂಧದಕಡ್ಡಿ, ಕರ್ಪೂರ, ತುಪ್ಪದ ಬತ್ತಿಗಳು, ಬೆಂಕಿಪೊಟ್ಟಣ ಮತ್ತು ದಕ್ಷಿಣೆಕಾಸು, ಒಂದು ಲೋಟದಲ್ಲಿ ಹಸೀ ಹಾಲು ಮತ್ತು ತುಪ್ಪ, ವೀಳ್ಯೆದೆಲೆ ಮತ್ತು ಅಡಿಕೆ ಒಂದು ತಟ್ಟೆಯಲ್ಲಿ, ಮೂರುಕಾಲಿನ ಮಣೆಯ ಸಮೇತ ಕಳಸವನ್ನು ಮನೆಯ ಹೆಣ್ಣುಮಗಳು ತೆಗೆದುಕೊಂಡು ಬರಬೇಕು.

ಒಂದು ಶಾಲಿನ ನಾಲ್ಕೂ ತುದಿಗಳನ್ನು ನಾಲ್ವರು ಹಿಡಿದು ಮತ್ತೊಬ್ಬರು ಉದ್ದ ಕೋಲಿನ ಸಹಾಯದಿಂದ ಶಾಲಿನ ಮಧ್ಯ ಭಾಗವನ್ನು ಎತ್ತಿ ಹಿಡಿದು ಛತ್ರಿಯಾಕಾರಗೊಳಿಸಿ ಅದರ ನೆರಳಿನಲ್ಲಿ ವರನನ್ನು ಮತ್ತು ಕಳಸ ಹಿಡಿದ ಹೆಣ್ಣುಮಗಳನ್ನು ಛತ್ರದಿಂದ ನಾಗರಪೂಜೆ ನಡೆಯುವ ಸ್ಥಳದ ತನಕ ಕರೆತರುವುದು.

**ಕಾಶೀಯಾತ್ರೆಯ ಶಾಸ್ತ್ರದ ವಿಧಾನ :**

- ವರನನ್ನು ಕಾಶೀಯಾತ್ರೆಗೆ ಕರೆತಂದ ಮೇಲೆ ವರನು ಅಲ್ಲಿ ಇರುವ ನಾಗರಕಲ್ಲುಗಳನ್ನು ಮುತ್ತೈದೆಯ ಸಹಾಯದೊಡನೆ ನೀರಿನಿಂದ ಶುಭ್ರವಾಗಿ ತೊಳೆಯಬೇಕು.



- ಅರಿಶಿನದ ಪುಡಿಯನ್ನು ಎರಡು ಕೈಗಳಿಂದ ತೆಗೆದುಕೊಂಡು ನಾಗರಕಲ್ಲುಗಳಿಗೆ ಚೆನ್ನಾಗಿ ಬಳಿಯಬೇಕು.
- 2 ಬಾರಿ ಅರಿಶಿನ 2 ಬಾರಿ ಕುಂಕುಮವನ್ನು ಇಟ್ಟು ಹೂವಿನ ಹಾರ ಹಾಕಿ ಗೆಜ್ಜೆ ವಸ್ತ್ರವನ್ನು ತೊಡಿಸಿ ನಾಗರಕಲ್ಲುಗಳ ಮುಂದೆ ನೈವೇದ್ಯಕ್ಕೆಂದು 2 ವೀಳೆಯದೆಲೆ 2 ಅಡಿಕೆ 2 ಬಾಳೆಹಣ್ಣು ದಕ್ಷಿಣೆ ಕಾಸನ್ನು ಇಡಬೇಕು.
- 2 ತೆಂಗಿನಕಾಯಿಗಳಿಗೆ ಅರಿಶಿನ ಕುಂಕುಮ ಇಟ್ಟು ಹೂವಿನ ಸಮೇತ ಇಡಬೇಕು.
- ಗಂಧದ ಕಡ್ಡಿಗಳನ್ನು ಬೆಳಗಿಸಿ ತಾಂಬೂಲವನ್ನು ನೈವೇದ್ಯ ಮಾಡಿ ಆಮೇಲೆ ತೆಂಗಿನಕಾಯಿಗಳನ್ನು ಒಡೆದು ಅದರ ನೀರಿನಿಂದ ನಾಗರ ಕಲ್ಲುಗಳಿಗೆ ಪ್ರೋಕ್ಷಣೆ ಮಾಡಬೇಕು.
- ಹಸಿ ಹಾಲು ಮತ್ತು ತುಪ್ಪವಿರುವ ಲೋಟವನ್ನು ಕೈಯಲ್ಲಿಡಿದುಕೊಂಡು ನಾಗರಕಲ್ಲುಗಳಿಂದ ಆರಂಭಿಸಿ ಅರಳಿ ಮರ ಮತ್ತು ಬೇವಿನ ಮರಗಳಿಗೆ ತನಿ ಎರೆಯಬೇಕು.
- ಕರ್ಪೂರದಾರತಿಯನ್ನು ದೇವರಿಗೆ ಬೆಳಗಿಸಿಕೊಂಡು ಒಂದು ಪ್ರದಕ್ಷಿಣೆ ಬರುವಾಗ ಸೂರ್ಯ ದೇವರಿಗೆ ಆರತಿ ಮಾಡಿ ತಾನು ಮೊದಲು ಆರತಿ ತೆಗೆದುಕೊಂಡು ನಮಸ್ಕಾರವನ್ನು ಮಾಡಿಕೊಂಡು ಕುಂಕುಮ ಇಟ್ಟು ಕೊಂಡು ಒಂದು ಹೂವನ್ನು ಸಹ ತೆಗೆದು ಕಿವಿಗೆ ಇಟ್ಟು ಕೊಳ್ಳಬೇಕು.
- ಮನೆಮಗಳು ಅಲ್ಲಿ ನೆರೆದಿರುವ ಎಲ್ಲಾ ಮುತ್ತೈದೆಯರಿಗೆ ಅರಿಶಿನ ಕುಂಕುಮ ಹೂವನ್ನು ಕೊಟ್ಟು ಅಕ್ಷತೆಯನ್ನು ಹಣೆಗೆ ಇಟ್ಟು 2 ವೀಳೆಯದೆಲೆ 2 ಅಡಿಕೆ 1 ಬಾಳೆಹಣ್ಣಿನ ತಾಂಬೂಲವನ್ನು ಸಹ ಕೊಡಬೇಕು.

**ವರನ ಪಾದ ಪೂಜೆ :**

- ಕಾಶೀಯಾತ್ರೆಯ ಸಮಯದಲ್ಲಿ ವರನು ಶ್ರೀಮನ್ನಾರಾಯಣನ ಸ್ವರೂಪದವನಾಗಿರುವುದರಿಂದಲೂ ಮತ್ತು ಆತನು ತಮ್ಮ ಕನ್ಯಾ ಸೆರೆಯನ್ನು ಸುಸೂತ್ರವಾಗಿ ಬಿಡಿಸಿದವನಾದ್ದರಿಂದಲೂ ಆತನ ಪಾದ ಪೂಜೆಯನ್ನು ನೆರವೇರಿಸಿದ ವಧುವಿನ ತಂದೆ ತಾಯಿಯರ 7 ತಲೆಮಾರಿನವರೆಗಿನ ಪಿತೃಗಳಿಗೆಲ್ಲ ಮೋಕ್ಷದ ಲಭ್ಯತೆ ಉಂಟಾಗುವುದೆಂಬ ನಂಬಿಕೆ.

**ಸಿದ್ಧತೆ:**

ಒಂದು ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು, ಬಿಡಿ ಹೂವುಗಳು, ಕಟ್ಟಿದ ಹೂವು, ಗಂಧದಕಡ್ಡಿ, ಕರ್ಪೂರ, ತುಪ್ಪದ ಬತ್ತಿಗಳು, ಒಂದು ತೆಂಗಿನಕಾಯಿ, ವೀಳೆಯದೆಲೆ –2, ಅಡಿಕೆ –2, ಬಾಳೆಹಣ್ಣು –2 ಜೊತೆಗೆ ವರನ ಕೈಗೆ ಕೊಡಲು ನಾರಿರುವ ಮತ್ತೊಂದು ತೆಂಗಿನಕಾಯಿ (ಮುಂದೆ ಈ ತೆಂಗಿನಕಾಯಿಗೆ ಮಾಂಗಲ್ಯವನ್ನು ಸುತ್ತಿ ಧಾರೆಯ ಸಮಯದಲ್ಲಿ ಬಳಸುವುದು).

ವರನ ಪಾದ ತೊಳೆಯಲು ಒಂದು ಹೊಸ ತಟ್ಟೆ ಮತ್ತು ಚೊಂಬು (ಇವೆರಡನ್ನು ವರನ ಪಾದ ತೊಳೆದ ಮೇಲೆ ವರನ ಕಡೆಯವರಿಗೆ ಕೊಡತಕ್ಕದ್ದು)

**ವಿಧಾನ :**

- ಉತ್ತರ ಅಥವಾ ಪೂರ್ವಾಭಿಮುಖವಾಗಿ ಒಂದು ಆಸನವನ್ನು ಸಿದ್ಧಪಡಿಸಿ ಅದರ ಮೇಲೆ ವರನನ್ನು ಕೂರಿಸಬೇಕು.
- ವಧುವಿನ ತಂದೆ ತಾಯಿಯರು ಒಂದು ಹೊಸ ತಟ್ಟೆಯನ್ನು ವರನ ಪಾದಗಳ ಕೆಳಗೆ ಇರಿಸಿ ತಟ್ಟೆಯಲ್ಲಿ ವರನು ಪಾದಗಳನ್ನು ಇರಿಸುವಂತೆ ತಿಳಿಸುವುದು.
- ವರನ ಪಾದಗಳನ್ನು ವಧುವಿನ ತಂದೆ ತಾಯಿಯರು ನೀರಿನಿಂದ ಶುಭ್ರಗೊಳಿಸಿ ವರನ ಪಾದಗಳಿಗೆ 2 ಬಾರಿ ಅರಿಶಿನ, 2 ಬಾರಿ ಕುಂಕುಮ ಒಂದೊಂದು ಹೂವನ್ನು ಇಡುವುದು.
- ಗಂಧದ ಕಡ್ಡಿಗಳನ್ನು ಬೆಳಗಿ ಪಾದಗಳಿಗೆ ಪೂಜೆಯನ್ನು ಮಾಡಿ ಒಂದು ತೆಂಗಿನ ಕಾಯಿಯನ್ನು ಒಡೆಯಬೇಕು.
- ಮುಂದುವರಿದು ಕರ್ಪೂರದ ಆರತಿಯನ್ನು ಮಾಡಿ ದಂಪತಿಗಳು ತಾವು ಮೊದಲು ಆರತಿಯನ್ನು ತೆಗೆದುಕೊಂಡು ತಟ್ಟೆಯಲ್ಲಿರುವ ವರನ ಪಾದಗಳನ್ನು ತೊಳೆದ ನೀರನ್ನು ಸ್ವಲ್ಪ ತೆಗೆದು ತಮ್ಮ ತಲೆಯಮೇಲೆ ಮೂರು ಬಾರಿ ಪ್ರೋಕ್ಷಿಸಿಕೊಳ್ಳಬೇಕು.
- ನಂತರ ವರನು ವಧುವಿನ ತಂದೆ ತಾಯಿಯರ ಪಾದಗಳಿಗೆ ನಮಸ್ಕರಿಸಿ ಅಕ್ಷತೆ ಸಮೇತ ಆಶೀರ್ವಾದ ಪಡೆಯಬೇಕು.
- ನಾರಿರುವ ಒಂದು ತೆಂಗಿನ ಕಾಯಿಯನ್ನು ವರನ ಕೈಗೆ ಒಪ್ಪಿಸಬೇಕು.
- ಕಾಶೀಯಾತ್ರೆಯಲ್ಲಿ ಭಾಗವಹಿಸಿದವರೆಲ್ಲಾ ಹಿಂದಿರುಗಿ ಛತ್ರದೆಡೆಗೆ ತೆರಳುವುದು.



- ಕಾಶೀಯಾತ್ರೆ ಮುಗಿಸಿ ಹಿಂದಿರುಗುವಾಗ ಚೊಂಬಿನಲ್ಲಿ ಉಳಿಸಿರುವ ನೀರನ್ನು ಮೂರು ಬಾರಿ ದಾರಿಯುದ್ದಕ್ಕೂ ವರನ ಮುಂದೆ ಅಡ್ಡಲಾಗಿ ಸುರಿದುಕೊಂಡು ಬರಬೇಕು.
- ವರನು ಅಡ್ಡಲಾಗಿ ಸುರಿದ ನೀರನ್ನು ದಾಟಿಕೊಂಡು ಮುನ್ನಡೆಯಬೇಕು.

ಕಾಶೀಯಾತ್ರೆ ಮುಗಿಸಿ ಬಂದ ವರನಿಗೆ ಮತ್ತು ಕಳಸ ಹಿಡಿದ ಮನೆಯ ಹೆಣ್ಣುಮಗಳಿಗೆ ಕೆಂಪು ನೀರಿನ ಆರತಿ ಮಾಡಿ ಕಳಸಕ್ಕೂ, ವರನಿಗೂ ಹಾಗೂ ಹೆಣ್ಣು ಮಗಳಿಗೂ ತಿಲಕವಿಟ್ಟು ಇಬ್ಬರ ಪಾದಗಳನ್ನು ನೀರಿನಿಂದ ತೊಳೆದು ನಂತರ ಸೋದರಮಾವನವರು ತೆಂಗಿನಕಾಯಿಯಿಂದ ಮೂರು ಬಾರಿ ಅವರಿಬ್ಬರಿಗೂ ಇಳೇ ತೆಗೆದು ಇಡುಗಾಯಿ ಒಡೆದು ಛತ್ರದೊಳಕ್ಕೆ ಕರೆದುಕೊಂಡು ಹೋಗತಕ್ಕದ್ದು.

**ಧಾರೆ ಶಾಸ್ತ್ರಕ್ಕೆ ವರನ ಸಿದ್ಧತೆ :**

- ಕಾಶೀಯಾತ್ರೆ ಮುಗಿಸಿಬಂದ ವರನು ಕೈಕಾಲು ಮುಖವನ್ನು ಶುಭ್ರವಾಗಿ ತೊಳೆದುಕೊಳ್ಳುವುದು.
- ಧಾರೆಯ ಉಡುಗೆಯಾದ ಅರಿಶಿನದ ಪಂಚೆಯಿಂದ ವರನಿಗೆ ಕಚ್ಚೆ ಪಂಚೆಯನ್ನು ಉಡಿಸಬೇಕು.
- 1 ಜೋಡಿ ಟವಲನ್ನು ಶಲ್ಯದ ರೀತಿಯಲ್ಲಿ ಹೊದಿಸಬೇಕು.
- ವರನ ತಲೆಗೆ ಪೇಟದ ಬಟ್ಟೆಯಿಂದ ಪೇಟವನ್ನು ಸುತ್ತಬೇಕು.
- ಹೆಗಲಲ್ಲಿ ಶಲ್ಯವನ್ನು ಹೊದ್ದು ತಲೆಗೆ ಟೋಪಿ ಇರಿಸಿಕೊಂಡ ವರನ ಸೋದರ ಮಾವನವರು ವರನ ಹಣೆಗೆ ಬಾಸಿಂಗವನ್ನು ಕಟ್ಟಬೇಕು.

**ಧಾರೆ ಶಾಸ್ತ್ರ:**

- ವರನನ್ನು ಧಾರೆಯ ವಸ್ತ್ರದಲ್ಲಿ ಮಂಟಪಕ್ಕೆ ಕರೆತಂದು ನಿಲ್ಲಿಸುವುದು.
- ಹೊಸ ಶಾಲಿನಿಂದ ವರನ ಮುಖಕ್ಕೆ ಅಂತರಪಟ ಹಿಡಿದು ಧಾರೆಯ ವಸ್ತ್ರದಲ್ಲಿ ಅಲಂಕೃತಳಾದ ವಧುವನ್ನು ಕರೆತಂದು ವರನ ಎದಿರು ನಿಲ್ಲಿಸುವುದು.
- ಜೀರಿಗೆ ಬೆಲ್ಲ ಮತ್ತು ಅಕ್ಕಿಯನ್ನು ವಧುವಿನ ಕೈಯಿಂದ ವರನ ತಲೆಯ ಮೇಲೆ ಹಾಗೂ ವರನ ಕೈಯಿಂದ ವಧುವಿನ ತಲೆಯ ಮೇಲೆ ಮೂರು ಬಾರಿ ಹಾಕಿಸುವುದು.

- ನಂತರ ಹೂಮಾಲೆಯನ್ನು ಮೂರು ಬಾರಿ ಒಬ್ಬರಿಗೊಬ್ಬರು ಬದಲಾಯಿಸಿಕೊಂಡ ಮೇಲೆ ಇಬ್ಬರನ್ನು ಎದಿರು ಬದಿರು ಮಣೆಗಳ ಮೇಲೆ ಕೂರಿಸಬೇಕು.
- ವಧುವು ವರನ ಬಲಗೈಯ್ಯಿಗೆ ಹಾಗೂ ವರನು ವಧುವಿನ ಬಲಗೈಯ್ಯಿಗೆ ಕಂಕಣವನ್ನು (ಅರಿಶಿನದ ಕೊಂಬು) ಕಟ್ಟುವುದು.
- ಮಾಂಗಲ್ಯ ಮತ್ತು ಚಿನ್ನದ ಗುಂಡುಗಳನ್ನು ಒಂದು ದಾರದಲ್ಲಿ ಪೋಣಿಸಿ ಆ ದಾರವನ್ನು ನಾರಿರುವ ಒಂದು ತೆಂಗಿನಕಾಯಿಗೆ ಸುತ್ತಿ ಆ ತೆಂಗಿನಕಾಯಿಯನ್ನು ತಟ್ಟೆಯಲ್ಲಿಟ್ಟು ನಂತರ ಆ ತಟ್ಟೆಯನ್ನು ಅಲ್ಲಿ ನೆರೆದಿರುವ ಹಿರಿಯರ ಕರಗಳಿಂದ ಮುಟ್ಟಿ ನಮಸ್ಕರಿಸಬೇಕು. ಆಮೇಲೆ ಅದಕ್ಕೆ ವಧು–ವರರಿಂದ ಪೂಜೆ ಮಾಡಿಸಬೇಕು.
- ನಂತರ ವಧುವಿನ ತಾಯಿತಂದೆಯರು ವಧು–ವರನ ಕೈಗಳನ್ನು ಹಾಲಿನಿಂದ ತೊಳೆಯಿಸಿ ಮಾಂಗಲ್ಯ ಕಟ್ಟಿದ ತೆಂಗಿನಕಾಯಿಯನ್ನು ಅವರ ಕೈಗಳಲ್ಲಿ ಇರಿಸಬೇಕು.
- ನಂತರ ವಧುವಿನ ತಾಯಿತಂದೆ, ವರನ ತಾಯಿತಂದೆ ಮತ್ತು ಕಳಸ ಹಿಡಿದಿರುವ ದಂಪತಿಗಳು ಕ್ರಮವಾಗಿ ತೆಂಗಿನಕಾಯಿಯ ಮೇಲೆ ದಕ್ಷಿಣೆ ಇಟ್ಟು ಒಂದು ಲೋಟದಲ್ಲಿ ಸ್ವಲ್ಪ ಹಾಲನ್ನು ತೆಗೆದುಕೊಂಡು ಮೂರು ಬಾರಿ ಬರುವಂತೆ ಹಾಲನ್ನು ಮಾಂಗಲ್ಯಸಹಿತವಾದ ತೆಂಗಿನಕಾಯಿಯ ಮೇಲೆ ಸುರಿದು ಅಕ್ಷತೆಯನ್ನು ವಧುವರರ ಮೇಲೆ ಮೂರು ಬಾರಿ ಹಾಕಿ ಆಶೀರ್ವಾದ ಮಾಡಬೇಕು.
- ಈ ಪ್ರಕ್ರಿಯೆಯನ್ನು ಛತ್ರದಲ್ಲಿ ನೆರೆದಿರುವ ಧಾರೆ ಎರೆದು ಕೊಡುವ ಮನೆಯವರ ಕಡೆಯ ಎಲ್ಲಾ ಬಂಧುಗಳ ಕೈಯಲ್ಲಿ ಸಮಯದ ಮಿತಿಯೊಳಗೆ ನಡೆಸಬೇಕು.
- ಧಾರೆ ಎರೆಯುವ ಪ್ರಕ್ರಿಯೆಯು ಮುಗಿದ ಬಳಿಕ ಮುಹೂರ್ತಕ್ಕೆ ಸರಿಯಾಗಿ ಮಾಂಗಲ್ಯಧಾರಣೆಯನ್ನು ವರನ ಕೈಯಲ್ಲಿ ವಧುವಿನ ಕುತ್ತಿಗೆಗೆ ಮಾಂಗಲ್ಯದಾರವನ್ನು ಮೂರು ಗಂಟು ಹಾಕುವುದರೊಡನೆ ನೆರವೇರಿಸಬೇಕು.
- ಮಾಂಗಲ್ಯಧಾರಣೆಯನ್ನು ನೆರವೇರಿಸಿದ ಮೇಲೆ ವರನು ಆ ಮೂರು ಗಂಟಿರುವ ಜಾಗಕ್ಕೆ ಅರಿಶಿನ ಕುಂಕುಮ ಹಚ್ಚಿ ವಧುವಿನ ಮುಡಿಗೆ ತನ್ನ



ಕೈಗಳಿಂದ ಹೂವನ್ನು ಮುಡಿಸಿದ ಮೇಲೆ ಆ ಮೂರು ಗಂಟಿರುವ ಜಾಗಕ್ಕೆ ಗಂಧದಕಡ್ಡಿಗಳನ್ನು ಬೆಳಗಿ ತುಪ್ಪದ ದೀಪದಿಂದ ಆರತಿ ಮಾಡಬೇಕು.

- ಈ ಸಂದರ್ಭದಲ್ಲಿ ಅಲ್ಲಿ ನೆರೆದಿರುವ ಎಲ್ಲರೂ ಅಕ್ಷತೆಯನ್ನು ಹಾಕಿ ಆಶೀರ್ವಾದ ಮಾಡಬೇಕು.

ನಂತರ ವಧುವರರನ್ನು ಅಕ್ಕ–ಪಕ್ಕ ಕೂರಿಸಿ ವಧುವಿನ ಸೆರಗಿನ ತುದಿಗೆ ವೀಳ್ಯೆದೆಲೆ–2, ಅಡಿಕೆ–2, ದಕ್ಷಿಣೆಯಾಗಿ 11 ರೂಪಾಯಿಗಳನ್ನು ವಧುವಿನ ಸಹೋದರಿಯು ಸಣ್ಣ ಗಂಟುಹಾಕಿ ಆ ತುದಿಯನ್ನು ವರನ ಶಲ್ಯದ ಒಂದು ತುದಿಯನ್ನು ಸೇರಿಸಿ ಕಟ್ಟಬೇಕು.

ಶಾಸ್ತ್ರ ಮುಗಿದ ಬಳಿಕ ದಕ್ಷಿಣೆ ಮತ್ತು ವೀಳೆಯದೆಲೆ, ಅಡಿಕೆಗಳನ್ನು ವಧುವಿನ ಸೋದರಿಯು ಬಿಚ್ಚಿ ಪುರೋಹಿತರಿಗೆ ಅಥವಾ ವಧುವಿಗೆ ಕೊಡುವುದು.

***ಸೂಚನೆ:*** ಜೀರಿಗೆ ಮತ್ತು ಬೆಲ್ಲವನ್ನು ಒಟ್ಟಿಗೆ ಬೆರೆಸಿದಾಗ ಅವುಗಳಲ್ಲಿ ಧನಾತ್ಮಕ ಶಕ್ತಿಯು ಸಂಚಯವಾಗಿದ್ದು ಜೀರಿಗೆ–ಬೆಲ್ಲದ ಮಿಶ್ರಣವನ್ನು ವಧು ವರರ ತಲೆಯ ಮೇಲಿನಿಂದ ಹಾಕಿದಾಗ ಧನಾತ್ಮಕ ಶಕ್ತಿಯು ವಧುವರರ ಶಿರಸ್ಸಿನಲ್ಲಿ ಇರುವ ಸಹಸ್ರಾರದ ಮುಖೇನ ಆಜ್ಞಾಚಕ್ರವನ್ನು ತಲುಪಿ ಅದನ್ನು ಸಮನಾಗಿ ಜಾಗೃತಿಗೊಳಿಸುತ್ತದೆ. ನಂತರ ಅಂತರಪಟವನ್ನು ತೆರೆದ ಮೇಲೆ ವಧುವರರು ಒಬ್ಬರನ್ನೊಬ್ಬರು ದೃಷ್ಟಿಸಿದಾಗ ಇಬ್ಬರ ಮನಃಪಟಲದಲ್ಲಿನ ತರಂಗಗಳನ್ನು ಆದಷ್ಟೂ ಸಮೀಕರಣಗೊಳಿಸಿ ಅವರಲ್ಲಿ ಸಾಧ್ಯವಾದಷ್ಟರ ಮಟ್ಟಿಗೆ ಅನ್ಯೋನ್ಯತೆಯನ್ನು ಉಂಟುಮಾಡಲು ಸಹಕಾರಿಯಾಗಿದೆ.

ತುಪ್ಪ ಹಾಗೂ ಅರಿಶಿನದೊಂದಿಗೆ ಬೆರೆಸಿದ ಅಕ್ಕಿಯ ಅಕ್ಷತೆಯನ್ನು ಹಾಕಿ ನವ ವಧುವರರಿಗೆ ಆಶೀರ್ವಾದ ಮಾಡುವ ಪದ್ಧತಿಯ ಹಿಂದಿನ ಬಯಕೆ, ಅವರ ಬಾಳಿನಲ್ಲಿ ಯಾವುದೇ ಕೆಡುಕು ಮತ್ತು ಆಪಾದನೆಗಳಿಲ್ಲದೆ ಸುಗುಣರಾಗುತ್ತಾ ದೀರ್ಘಾಯುಷ್ಯ ಹೊಂದಲಿ ಎಂಬುದು.

ಅಕ್ಕಿಯನ್ನು ವಧು ವರರ ನೆತ್ತಿಯ ಮೇಲೆ ಹಾಕಿಸುವುದರ ಉದ್ದೇಶವೇನೆಂದರೆ ವಧು ವರರ ನೆತ್ತಿಯ ಮೇಲಿನ ಸಹಸ್ರಾರದ ಚಕ್ರದಲ್ಲಿರುವ ಅಧಿದೇವತೆಯು ಶುಕ್ರ ಧಾತುವಿನ ವೃದ್ಧಿಗಾಗಿ ಮಾಡುವ ಕಾರ್ಯ.

**ಗೌರಿ ಪೂಜೆ :**

ವಧುವಿಗೆ ದೀರ್ಘಕಾಲ ಮಾಂಗಲ್ಯ ಯೋಗ ಲಭಿಸುವಂತೆ ಸಂಕಲ್ಪಿಸಿಕೊಂಡು ವಧುವಿನ ಕೈಯಲ್ಲಿ ತನ್ಮೂಲಕ ಮಾಡಿಸುವ ಪೂಜಾ ವಿಧಿ ಗಂಡನಿಗೆ ದೀರ್ಘಾಯಸ್ಸನ್ನು ದಯಪಾಲಿಸುವಂತೆ ಗೌರಿಯನ್ನು ಬೇಡಿಕೊಳ್ಳುವುದು.

- ಎರಡು ಇಸ್ತ್ರಿ ಎಲೆಯಲ್ಲಿ ಒಂದೂವರೆ ಸೇರು ಅಕ್ಕಿಯನ್ನು ಹರಡಿ ಅದರ ಮೇಲೆ ಐದು ತಾಂಬೂಲವನ್ನು ಸಿದ್ಧಪಡಿಸಬೇಕು. ಪ್ರತೀ ತಾಂಬೂಲದಲ್ಲಿ ವೀಳೆಯದೆಲೆ–2, ಅಡಿಕೆ–2, ಬಾಳೆಹಣ್ಣು–2 ಮತ್ತು ದಕ್ಷಿಣೆ ಕಾಸು ಇರಬೇಕು. ವಧುವಿನ ಕೈಗಳಿಂದ ತಾಂಬೂಲಗಳನ್ನು ಗೌರಿ ಎಂದು ಭಾವಿಸಿ ಅವುಗಳಿಗೆ ಎರಡೆರಡು ಸಲ ಅರಿಶಿಣ ಕುಂಕುಮ ಹೂಗಳನ್ನಿಟ್ಟು ನಂತರ ವಧುವು ಗಂಧದ ಕಡ್ಡಿ ಬೆಳಗಿ ತೆಂಗಿನ ಕಾಯಿ ಒಡೆದು ಕರ್ಪೂರದ ಮಂಗಳಾರತಿ ಮಾಡಿ ತಾನು ಮೊದಲು ಆರತಿ ತೆಗೆದುಕೊಂಡು ನಂತರ ಫಲ ತಾಂಬೂಲ ವಿತರಣೆ ಮಾಡಬೇಕು.
- ಐವರು ಮುತ್ತೈದೆಯರು (ಮದುವೆ ಕಾರ್ಯ ಮಾಡಿಕೊಡುವವರ ಕಡೆಯಿಂದ –3, ಮದುವೆ ಮಾಡಿಸಿಕೊಳ್ಳುವವರ ಕಡೆಯಿಂದ –2) ವಧುವಿಗೆ 2 ಬಾರಿ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟು ನಂತರ ವಧುವು ಮುತ್ತೈದೆಗೆ 2 ಬಾರಿ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟ ಮೇಲೆ ವರನ ಸಹಿತ ತಾಂಬೂಲವನ್ನು ನೀಡಿದ ಮೇಲೆ ಮುತ್ತೈದೆಯು ತಮ್ಮ ಸೆರಗಿನಲ್ಲಿ ತಾಂಬೂಲವನ್ನು ಸ್ವೀಕರಿಸಿ, ಅಕ್ಷತೆಯನ್ನು ಹಾಕಿ ಆಶೀರ್ವಾದ ಮಾಡಬೇಕು.

**ಹೋಮ ಶಾಸ್ತ್ರ ಮತ್ತು ಸಪ್ತಪದಿ:**

- ಹೋಮಕುಂಡವನ್ನು ತಂದು ಮಂಟಪದಲ್ಲಿರಿಸಿ ಹೋಮದ ಕಡ್ಡಿಗಳನ್ನು ಅದರಲ್ಲಿ ಹಾಕಿ ಇಬ್ಬರು ಮುತ್ತೈದೆಯರು ತುಪ್ಪದ ಜ್ಯೋತಿಯನ್ನು ತಂದು ಕುಂಡದಲ್ಲಿ ಇರಿಸಿ ನಂತರ ಹೋಮಕುಂಡದ ಎದಿರು ಕುಳಿತು ಅರಿಶಿನ ಕುಂಕುಮವನ್ನು ತೆಗೆದುಕೊಂಡು ಹೋಗಬೇಕು.
- ಇದಾದ ನಂತರ ಪುರೋಹಿತರ ಮಾರ್ಗದರ್ಶನದಲ್ಲಿ ಹೋಮಶಾಸ್ತ್ರವನ್ನು ನೆರವೇರಿಸಬೇಕು.
- ಮನೆಯ ಹೆಣ್ಣು ಮಗಳು ಮೂರುಕಾಲಿನಮಣೆಯ ಸಮೇತ ಕಳಸವನ್ನು ತೆಗೆದುಕೊಂಡು ಅವರ ಜೊತೆಗೆ ವಧುವಿನ ಬಲಗೈನ ಕಿರುಬೆರಳನ್ನು ವರನು ತನ್ನ ಬಲಗೈನ ಕಿರುಬೆರಳಿನಲ್ಲಿ ಹಿಡಿದುಕೊಂಡು



ಹೋಮಕುಂಡದ ಸುತ್ತಾ ಸಪ್ತಪದಿ ಹಾಕಬೇಕು ಜೊತೆಗೆ ಹೋಮಕುಂಡಕ್ಕೆ ಮೂರು ಬಾರಿ ಪ್ರದಕ್ಷಿಣೆ ಹಾಕಬೇಕು.

- ಪ್ರತೀ ಪ್ರದಕ್ಷಿಣೆಯಲ್ಲಿ ಮಣೆಗಳ ಎದುರಿಗೆ ಇರಿಸಿದ ಎರಡು ಇಸ್ತ್ರಿ ಎಲೆಗಳಲ್ಲಿರುವ ಅಕ್ಕಿಯ ಮೇಲೆ ವಧುವರರನ್ನು ನಿಲ್ಲಿಸಿ ವಧುವಿನ ತಮ್ಮನಿಂದ ಪಡೆದ ನೆಲ್ಲನ್ನು ವಧೂವರರು ಒಟ್ಟಿಗೆ ಹೋಮಕುಂಡಕ್ಕೆ ಹಾಕಬೇಕು.
- ನಂತರ ಮತ್ತೆರಡು ಇಸ್ತ್ರಿ ಎಲೆಗಳಲ್ಲಿ ಅಕ್ಕಿಯ ಮೇಲೆ ಇರಿಸಿರುವ ಗಂಧದ ಕಲ್ಲಿಗೆ ವಧುವಿನ ಬಲಗಾಲಿನ ಹೆಬ್ಬೆರಳನ್ನು ಮುಟ್ಟಿಸಿ ಹೆಜ್ಜೆಗಳನ್ನು ಮುಂದುವರಿಸಬೇಕು.
- ಸಪ್ತಪದಿ ಮುಗಿದ ನಂತರ ವಧುವು ವರನ ಪಾದಗಳಿಗೆ ನಮಸ್ಕರಿಸಬೇಕು ಪ್ರತಿಯಾಗಿ ವರನು ಆಶೀರ್ವಾದವನ್ನು ಮಾಡಬೇಕು.
- ನಂತರ, ವಧೂವರರು ಮಣೆಗಳ ಮೇಲೆ ಕುಳಿತುಕೊಳ್ಳಬೇಕು.
- ವರನ ಕಡೆಯವರು ವಧುವಿನ ತಮ್ಮನಿಗೆ ತಾಂಬೂಲವನ್ನು ಕೊಡಬೇಕು.

**ಸಪ್ತಪದಿಯ ಆಶಯ:**

ಮೊದಲನೆಯ ಹೆಜ್ಜೆ – ಸಹ ಜೀವನಕ್ಕಾಗಿ, ಎರಡನೆಯ ಹೆಜ್ಜೆ – ಜೀವನ ಪರ್ಯಂತ ಸ್ನೇಹದಿಂದಿರಲು, ಮೂರನೆಯ ಹೆಜ್ಜೆ – ಎಂದಿಗೂ ಒಟ್ಟಾಗಿ ಇರುವುದಕ್ಕಾಗಿ, ನಾಲ್ಕನೆಯ ಹೆಜ್ಜೆ – ಸಬಲ ಸಹ ಜೀವನಕ್ಕಾಗಿ, ಐದನೆಯ ಹೆಜ್ಜೆ – ಆರೋಗ್ಯ ಮತ್ತು ಸಂಪತ್ತು ವೃದ್ಧಿಗಾಗಿ, ಆರನೆಯ ಹೆಜ್ಜೆ – ಸಂತಾನ ವೃದ್ಧಿಗಾಗಿ, ಏಳನೆಯ ಹೆಜ್ಜೆ – ಸುಖ ದುಃಖಗಳನ್ನು ಹಂಚಿಕೊಳ್ಳುವುದಕ್ಕಾಗಿ.

**ಪ್ರಸ್ಥದ ಉಡುಗೆಯನ್ನು ಓದಿಸುವುದು :**

ಮದುವೆ ಕಾರ್ಯ ನಡೆಸಿಕೊಡುತ್ತಿರುವ ಕುಟುಂಬದವರು ವಧು–ವರರ ಪ್ರಸ್ಥದ ಉಡುಗೆಗಳನ್ನು ಒಂದು ತಟ್ಟೆಯಲ್ಲಿಟ್ಟು ಅದರ ಮೇಲೆ ತಾಂಬೂಲ ರೂಪದಲ್ಲಿ ಎರಡು ವೀಳೆಯದೆಲೆ, 2 ಅಡಿಕೆ, 2 ಬಾಳೆಹಣ್ಣು, ದಕ್ಷಿಣೆಕಾಸನ್ನು ಇಟ್ಟು ಮತ್ತೊಂದು ತಟ್ಟೆಯಲ್ಲಿ ಪ್ರಸ್ಥದ ಸಮಯದಲ್ಲಿ ವಧುವಿನ ಮಡಿಲನ್ನು ತುಂಬುವ ಪಂಚ ಫಲಗಳನ್ನಿಟ್ಟು ಅವುಗಳನ್ನು ಮಂಟಪದಲ್ಲಿರುವ ಪುರೋಹಿತರ ಬಳಿತಂದು ಅವರಿಂದ ಓದಿಸಿ ನಂತರ ತಾಂಬೂಲವನ್ನು ಪುರೋಹಿತರಿಗೆ ಕೊಡಬೇಕು.

**ಫಲ ತಾಂಬೂಲ ಪೂಜೆ** ಎಂದರೆ ಕಂಕಣಗಳನ್ನು ತನ್ನ ಕೈಗಳಿಗೆ ಕಟ್ಟಿಕೊಂಡ ವಧುವರರನ್ನು ಲಕ್ಷ್ಮೀ ನಾರಾಯಣರ ಸ್ವರೂಪವಾಗಿ ಭಾವಿಸುವುದರಿಂದ ಮತ್ತು ಅವರಿಬ್ಬರು ಕೂಡಿ ಫಲತಾಂಬೂಲಗಳಿಗೆ ಪೂಜೆ ಗೈದಿರುವುದರಿಂದ ಆ ಫಲತಾಂಬೂಲಗಳಲ್ಲಿ ಸಂತಾನ ಗೋಪಾಲನ ಆವಾಹನೆಯಾಗಿರುವುದು ಆ ಕಾರಣಕ್ಕೆ ಆ ಫಲತಾಂಬೂಲಗಳನ್ನು ಸಂತಾನವಿಲ್ಲದ ಮುತ್ತೈದೆಯರಿಗೆ ಕೊಡಿಸಿದರೆ ಅವರಿಗೆ ಸಂತಾನ ಭಾಗ್ಯ ಲಭ್ಯವಾಗುವುದೆಂಬ ನಂಬಿಕೆ.

1 ಎರಡು ಇಸ್ತ್ರಿ ಎಲೆಗಳನ್ನು ಹಾಸಿ ಅವುಗಳ ಮೇಲೆ ಒಂದೂವರೆ ಸೇರು ಅಕ್ಕಿಯನ್ನು ಹರಡಿ ಅದರ ಮೇಲೆ ಐದು ತಾಂಬೂಲವನ್ನು ಸಿದ್ಧಪಡಿಸಬೇಕು. ಪ್ರತೀ ತಾಂಬೂಲದಲ್ಲಿ ವೀಳೆಯದೆಲೆ–2, ಅಡಿಕೆ–2, ತೆಂಗಿನಕಾಯಿ–1 ಮತ್ತು ದಕ್ಷಿಣೆ ಕಾಸು ಇರಬೇಕು.

1 ವಧುವರರ ಮುಂದೆ ಇಟ್ಟಿರುವ ತೆಂಗಿನಕಾಯಿಯು ಫಲತಾಂಬೂಲಗಳಿಗೆ ವಧುವರರ ಕೈಗಳಿಂದ 2 ಬಾರಿ ಅರಿಶಿನ 2 ಬಾರಿ ಕುಂಕುಮವನ್ನು ಇರಿಸಿ ಒಂದೊಂದು ಹೂವನ್ನು ಇಟ್ಟು ನಂತರ ಗಂಧದಕಡ್ಡಿಗಳನ್ನು ಬೆಳಗಿಸಿ ಒಂದು ತೆಂಗಿನಕಾಯಿಯನ್ನು ಒಡೆಸಿ ಕರ್ಪೂರದ ಆರತಿ ಮಾಡಿ ನಂತರ ಮೊದಲು ವಧು ವರರು ಆರತಿ ತೆಗೆದು ಕೊಂಡು ಮುಂದೆ ಫಲ ತಾಂಬೂಲವನ್ನು ಮುತ್ತೈದೆಯವರಿಗೆ ಕೊಡಬೇಕು.

1 ಐವರು ಮುತ್ತೈದೆಯರು (ಮದುವೆ ಕಾರ್ಯ ಮಾಡಿಕೊಡುವವರ ಮನೆಯ ಕಡೆಯಿಂದ ಮೂವರು ಮತ್ತು ಮದುವೆ ಕಾರ್ಯ ಮಾಡಿಸಿಕೊಳ್ಳುವವರ ಮನೆಯ ಕಡೆಯಿಂದ ಇಬ್ಬರು) ವಧುವರರಿಗೆ 2 ಬಾರಿ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟು ನಂತರ ವಧುವು ಮುತ್ತೈದೆಗೆ 2 ಬಾರಿ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟ ಮೇಲೆ ವರನ ಸಹಿತ ಫಲ ತಾಂಬೂಲವನ್ನು ನೀಡಿದ ಮೇಲೆ ಮುತ್ತೈದೆಯು ತಮ್ಮ ಸೆರಗಿನಲ್ಲಿ ಫಲ ತಾಂಬೂಲವನ್ನು ಸ್ವೀಕರಿಸಿ, ಅಕ್ಷತೆಯ ಸಮೇತವಾದ ಆಶೀರ್ವಾದ ಮಾಡಬೇಕು.



**ವಧುವರರು ಹೆಸರು ಹೇಳುವ ಶಾಸ್ತ್ರ:**

1 ವಧುವರರ ಮುಂದೆ ಒಂದು ಬೇಸಿನ್ನಲ್ಲಿ ವಧುವಿಗೆಂದು ಗಂಟಿನ ಸಾಮಗ್ರಿ ಮತ್ತೊಂದು ಬೇಸಿನ್ನಲ್ಲಿ ವರನಿಗೆಂದು ಗಂಟಿನ ಸಾಮಗ್ರಿಗಳನ್ನು ಇಡಬೇಕು.

1 ಮೂವರು ಮುತ್ತೈದೆಯರು ದೀಪಸ್ತಂಭಗಳಿಗೆ ಮತ್ತು ಕಳಸಕ್ಕೆ ಅರಿಶಿನ ಕುಂಕುಮ ಮತ್ತು ಹೂವನ್ನಿಟ್ಟು ವಧುವರರಿಗೆ ಅರಿಶಿನ ಹಚ್ಚಿ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟು ಕಳಸದ ತಟ್ಟೆಯಲ್ಲಿರುವ ಅಕ್ಕಿಯನ್ನು ತೆಗೆದುಕೊಂಡು ಕಳಸಕ್ಕೂ ಮತ್ತು ವಧೂವರರಿಗೆ ಸಾಸೆಯನ್ನು ಪಂಚಭೂತಗಳಾದ ಭೂಮಿ, ಜಲ, ಅಗ್ನಿ, ವಾಯು ಮತ್ತು ಆಕಾಶ ಎಂದು ಸ್ಮರಿಸಿಕೊಂಡು ಮಾಡುವುದು (ಕಳಸದ ಮೇಲೆ ಮೂರು ಬಾರಿ, ವಧು ವರರ ಮೇಲೆ 5 ಬಾರಿ ಸಾಸೆ ಮಾಡುವುದು).

1 ಇದಾದ ನಂತರ ಮುತ್ತೈದೆಯರು ತಮ್ಮ ಗಂಡನ ವಂಶದ ಹೆಸರು ಹಾಗೂ ಗಂಡನ ಹೆಸರಿನ ಜೊತೆಗೆ ಮಾಮ ಎಂಬ ಪದವನ್ನು ಸೇರಿಸಿ ಹೇಳಿ ವಧುವರರಿಂದ ಎರಡು ವೀಳೆಯದೆಲೆ ಹಾಗೂ ಎರಡು ಅಡಿಕೆಗಳನ್ನು ತಾಂಬೂಲ ರೂಪದಲ್ಲಿ ತಮ್ಮ ಸೆರಗೊಡ್ಡಿ ಪಡೆಯತಕ್ಕದ್ದು.

1 ಆಮೇಲೆ ವಧೂವರರು ಕುಳಿತಿರುವ ಜಾಗವನ್ನು ಅದಲುಬದಲಾಯಿಸಿ ಕೂರಿಸಿದ ಮೇಲೆ ವಧುವನ್ನು ಎಬ್ಬಿಸಿ ಅವಳ ಕೈಯಿಂದ ದೀಪಸ್ತಂಭಗಳಿಗೆ ಮತ್ತು ಕಳಸಕ್ಕೆ ಅರಿಶಿನ ಕುಂಕುಮ ಮತ್ತು ಹೂವನ್ನಿಟ್ಟು ನಂತರ ವರನ ಕೆನ್ನೆಗಳಿಗೆ ಅರಿಶಿನ ಹಚ್ಚಿ ವರನ ಮನೆತನದ ಮತ್ತು ವರನ ಹೆಸರಿನ ಜೊತೆಗೆ ಮಾಮ ಎಂಬ ಪದವನ್ನು ಸೇರಿಸಿ ಕೈ ಹಾಗೂ ಪಾದಗಳಿಗೆ ಅರಿಶಿನ ಹಚ್ಚಲು ಅನುಮತಿ ಕೇಳಬೇಕು.

1 ಅನುಮತಿ ಸಿಕ್ಕ ಮೇಲೆ ಆತನ ಕೈಗಳಿಗೆ ಮತ್ತು ಪಾದಗಳಿಗೆ ಅರಿಶಿನ ಹಚ್ಚಿ ಹಣೆಗೆ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟು ಅಕ್ಕಿಯಿಂದ ಮೊದಲು ಕಳಸಕ್ಕೆ ನಂತರ ವರನಿಗೆ ಸಾಸೆಯನ್ನು ಮಾಡಬೇಕು.

1 ಆಮೇಲೆ ಗಂಟಿನ ಸಾಮಗ್ರಿಗಳಿರುವ ಬೇಸಿನ್‌ಗಳಿಗೆ, ಅರಿಶಿನ ಕುಂಕುಮದ ತಟ್ಟೆಗಳಿಗೆ ವರನ ಕೈಗಳಿಂದ ನಮಸ್ಕಾರ ಮಾಡಿಸಬೇಕು.

1 ಮತ್ತೆ ವರನ ಮನೆತನದ ಮತ್ತು ವರನ ಹೆಸರಿನ ಜೊತೆಗೆ ಮಾಮ ಎಂಬ ಪದವನ್ನು ಸೇರಿಸಿ ಹೇಳಿ ತಾಂಬೂಲವನ್ನು ಕೇಳಿ ಪಡೆಯಬೇಕು.

- ನಂತರ ಮತ್ತೆ ವರನ ಮನೆತನದ ಮತ್ತು ವರನ ಹೆಸರಿನ ಜೊತೆಗೆ ಮಾಮ ಎಂಬ ಪದವನ್ನು ಸೇರಿಸಿ, ಹೇಳಿ ತಮ್ಮ ಸ್ಥಳದ ಬದಲಾವಣೆ ಮಾಡಿಕೊಡಿ ಎಂದು ಕೇಳಬೇಕು (ನಮ್ಮ ಛತ್ರವನ್ನು ಬಿಟ್ಟು ನಿಮ್ಮ ಛತ್ರಕ್ಕೆ ಹೋಗಿ ಎನ್ನುವುದು).
- ಆಗ ವಧುವಿನ ಸ್ಥಾನದಲ್ಲಿ ಕುಳಿತಿರುವ ವರನು ಎದ್ದು ತನ್ನ ಸ್ವಸ್ಥಾನದಲ್ಲಿ ಕುಳಿತುಕೊಳ್ಳಬೇಕು.
- ಮುಂದೆ ವರನನ್ನು ಎಬ್ಬಿಸಿ ವಧುವನ್ನು ವರನ ಜಾಗದಲ್ಲಿ ಕೂರಿಸಿ ವರನ ಕೈಯಿಂದ ದೀಪಸ್ತಂಭಗಳಿಗೆ ಮತ್ತು ಕಳಸಕ್ಕೆ ಅರಿಶಿನ ಕುಂಕುಮ ಮತ್ತು ಹೂವನ್ನಿರಿಸಿ ನಂತರ ವಧುವಿನ ಕೆನ್ನೆಗಳಿಗೆ ಅರಿಶಿನ ಹಚ್ಚಿ ವಧುವಿನ ಹೆಸರನ್ನು ಹೇಳಿ ಕೈಗಳಿಗೆ ಅರಿಶಿನ ಹಚ್ಚಲು ಅನುಮತಿ ಕೇಳಬೇಕು.
- ಅನುಮತಿ ಸಿಕ್ಕ ಮೇಲೆ ಆಕೆಯ ಕೈಗಳಿಗೆ ಅರಿಶಿನ ಹಚ್ಚಿ ಹಣೆಗೆ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟು ಅಕ್ಕಿಯಿಂದ ಮೊದಲು ಕಳಸಕ್ಕೆ ನಂತರ ವಧುವಿಗೆ ಸಾಸೆಯನ್ನು ಮಾಡಬೇಕು.
- ಆಮೇಲೆ ಅರಿಶಿನ ಕುಂಕುಮದ ತಟ್ಟೆಗಳಿಗೆ ಹಾಗೂ ಗಂಟಿನ ಸಾಮಗ್ರಿಗಳಿರುವ ಬೇಸಿನ್ಗಳಿಗೆ ವಧುವಿನ ಕೈಗಳಿಂದ ನಮಸ್ಕಾರ ಮಾಡಿಸಬೇಕು.
- ಮತ್ತೆ ವಧುವಿನ ಹೆಸರನ್ನು ಹೇಳಿ ತಾಂಬೂಲವನ್ನು ಕೇಳಿ ಪಡೆಯಬೇಕು.
- ನಂತರ ಮತ್ತೆ ವಧುವಿನ ಹೆಸರನ್ನು ಹೇಳಿ ತಮ್ಮ ಸ್ಥಳದ ಬದಲಾವಣೆ ಮಾಡಿಕೊಡಿ ಎಂದು ಕೇಳಬೇಕು (ನಮ್ಮ ಛತ್ರವನ್ನು ಬಿಟ್ಟು ನಿಮ್ಮ ಛತ್ರಕ್ಕೆ ಹೋಗಿ ಎನ್ನುವುದು).
- ಆನಂತರ ವಧುವು ತನ್ನ ಸ್ವಸ್ಥಾನದಲ್ಲಿ ಕುಳಿತ ಮೇಲೆ ವರನು ತನ್ನ ಜಾಗದಲ್ಲಿ ಆಸೀನನಾಗಬೇಕು.

ಆಮೇಲೆ ವಧುವಿನ ಸೋದರಿಯು ವಧುವಿನ ಸೆರಗಿನ ತುದಿಯನ್ನು ವರನ ಶಲ್ಯದ ತುದಿಗೆ ಸೇರಿಸಿ ಗಂಟು ಹಾಕಬೇಕು.

ಮುತ್ತೈದೆಯರು ಕೆಂಪುನೀರಿನ ಆರತಿಯನ್ನು ಆರತಿ ಹಾಡು ಹಾಡುತ್ತಾ ಮಾಡಿ ಇಬ್ಬರ ಹಣೆಗಳಿಗೆ ಎರಡು ಬಾರಿ ತಿಲಕವನ್ನಿರಿಸಿ ಕೆಂಪು ನೀರನ್ನು ಛತ್ರದ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡ ಸುರಿದು ಹಿಂದಿರುಗಿ ದಕ್ಷಿಣೆಯನ್ನು ತಾಂಬೂಲದೊಂದಿಗೆ ಪಡೆಯಬೇಕು.



**ಅರುಂಧತಿ ನಕ್ಷತ್ರ ದರ್ಶನ:**

ಅನಾದಿ ಕಾಲದಿಂದ ಆದರ್ಶ ದಂಪತಿಗಳೆಂದೇ ಪ್ರಖ್ಯಾತರಾದ ಅರುಂಧತಿ–ವಸಿಷ್ಠರು ತಮ್ಮ ವೈವಾಹಿಕ ಜೀವನದಲ್ಲಿ ಬಂದೊದಗಿದ ಅಡಚಣೆ ಮತ್ತು ಅವಮಾನಗಳನ್ನು ಯಶಸ್ವೀಯಾಗಿ ನಿಭಾಯಿಸಿ ಮುಂದಿನ ಪೀಳಿಗೆಗೆ ಮಾದರಿಯಾದ್ದರಿಂದಲೂ ಮತ್ತು ಖಗೋಳ ಶಾಸ್ತ್ರದ ಪ್ರಕಾರ ಯುಗಳನಕ್ಷತ್ರಗಳಲ್ಲಿ ಯಾವಾಗಲೂ ಒಂದು ನಕ್ಷತ್ರವು ಸ್ಥಿರವಾಗಿದ್ದೂ ಸನಿಹದ ಮತ್ತೊಂದು ನಕ್ಷತ್ರವು ಸ್ಥಿರ ನಕ್ಷತ್ರದ ಸುತ್ತಲೂ ಪ್ರದಕ್ಷಿಣೆ ಹಾಕುತ್ತಿರುವಂತೆ ಗೋಚರವಾಗುವುದು. ಆದರೆ ಇದಕ್ಕೆ ಹೊರತಾಗಿ ಸಪ್ತರ್ಷಿಮಂಡಲದ ನಕ್ಷತ್ರ ಪುಂಜದಲ್ಲಿರುವ ವಸಿಷ್ಠ ಮತ್ತು ಅರುಂಧತಿಯೆಂಬ ಯುಗಳನಕ್ಷತ್ರಗಳು ಸದಾ ಒಟ್ಟಿಗೆ ಚಲನೆಯಲ್ಲಿರುತ್ತವೆ! ಇದರ ಭಾವಾರ್ಥ, ಪತಿಯು ಸದಾ ಪತ್ನಿಯ ಸುತ್ತಾ ಸುತ್ತದೇ, ಹಾಗೆಯೆ ಪತ್ನಿಯು ಸದಾ ಪತಿಯ ತಾಳಕ್ಕೆ ಕುಣಿಯದೇ ಇಬ್ಬರೂ ಯಾವಾಗಲೂ ಒಬ್ಬರಿಗೊಬ್ಬರು ಬದ್ಧರಾಗಿ, ಆಸರೆಯಾಗಿ ಜೊತೆಜೊತೆಯಾಗಿ ನಡೆದು ತಮ್ಮ ಬಾಳನ್ನು ನಡೆಸಲಿ ಎಂಬುದು.

**ಶಾಸ್ತ್ರದ ವಿಧಾನ:**

- ಕಳಸ ಹಿಡಿದ ಮುತ್ತೈದೆ, ವಧುವರರು, ಪುರೋಹಿತರು ಮತ್ತು ಇನ್ನಿತರ ಮುತ್ತೈದೆಯರೊಂದಿಗೆ ಛತ್ರದ ಮುಂಭಾಗಕ್ಕೆ ಬಂದು ಆಕಾಶದಲ್ಲಿನ ಅರುಂಧತಿ ನಕ್ಷತ್ರಕ್ಕೆ ವಧುವರರಿಂದ ಪೂಜೆ ಮಾಡಿಸಿ ನಕ್ಷತ್ರ ದರ್ಶನ ಮಾಡಿಸಬೇಕು.
- ತದನಂತರ, ಮುತ್ತೈದೆಯರು ವಧುವರರಿಗೆ ಅಕ್ಷತೆಯ ಸಮೇತ ಆಶೀರ್ವಾದವನ್ನು ಮಾಡಬೇಕು.
- ನಂತರ ವಧುವರರನ್ನು ವಧುವಿನ ಕೊಠಡಿಯ ಮುಂಬಾಗಿಲಿಗೆ ಕರೆತರುವುದು.
- ಬಾಗಿಲಿನ ಹೊಸ್ತಿಲ ಒಳಗಡೆ ಪಾವಡದ ತಟ್ಟೆಯ ಮೇಲೆ ಒಂದು ಬಿಳಿ ವಸ್ತ್ರ ಹಾಸಿ ಅದರ ಮೇಲೆ ಅಂಗುದಾರದಿಂದ (ಅರಿಶಿನದ ನೀರಿನಲ್ಲಿ ಅದ್ದಿದ ಹತ್ತಿಯ ದಾರ) ಕಟ್ಟಿದ ಮತ್ತು ಬಿಳಿ ಹೂವಿನ ಹಾರವನ್ನು ಸುತ್ತಿದ ಒಂದು ಸೌತೇಕಾಯಿಯನ್ನು ಇರಿಸಿರಬೇಕು.
- ಬಾಗಿಲಿನ ಮುಂದೆ ನಿಂತಿರುವ ವಧುವರರಿಗೆ ವಧುವಿನ ತಮ್ಮನು ಅವರನ್ನುದ್ದೇಶಿಸಿ "ನಿಮಗೆ ಹುಟ್ಟುವ ಮೊದಲ ಹೆಣ್ಣು ಮಗಳನ್ನು

ನನಗೇ ಕೊಟ್ಟು ಮದುವೆ ಮಾಡಿಕೊಡಬೇಕು" ಎಂದು ಕೇಳಬೇಕು.

- ಅದಕ್ಕೆ ಪ್ರತ್ಯುತ್ತರವಾಗಿ ವಧುವು ವರನ ಅಪ್ಪಣೆ ಪಡೆದು ಸಮ್ಮತಿ ಸೂಚಿಸಬೇಕು.
- ಇದಾದ ಮೇಲೆ, ವಧುವರರಿಗೆ ಕೆಂಪು ನೀರಿನ ಎರಡು ಏಕಾರತಿಗಳನ್ನು ಬೆಳಗಿ ಅವರಿಗೆ ತಿಲಕವನ್ನು ಇಟ್ಟ ಮೇಲೆ ವಧುವರರಿಬ್ಬರು ಒಟ್ಟಿಗೆ ಪಾವಡದ ತಟ್ಟೆಯಲ್ಲಿ ತಮ್ಮ ಬಲಗಾಲುಗಳನ್ನಿಟ್ಟು ಕೋಣೆಯೊಳಗೆ ಬರತಕ್ಕದ್ದು.
- ಕೆಂಪು ನೀರನ್ನು ಛತ್ರದ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿಯಬೇಕು.

**ಹರಣೆ ಕುಡಿಕೆ ವಿತರಣೆ:**

ವಧುವು ತುಂಬಿದ ಮನೆಗೆ ಸೊಸೆಯಾಗಿ ಹೋಗುವಾಗ, ವರನ ಮನೆಯ ಬಾಲೆಯರಿಗೆ ಮುಚ್ಚಿದ ಬಾಗಿನವನ್ನು ಕೊಡುವುದು ಯಾಕೆಂದರೆ, ಯಾವಾಗಲೂ ತಾನು ಆ ಮನೆಯನ್ನು ತುಂಬಿದ ಮನೆಯನ್ನಾಗಿಸುವೆನೆಂದೂ ಮತ್ತು ಆ ಮನೆಯನ್ನು ಒಡೆಯಲು ಅವಕಾಶ ಕೊಡುವುದಿಲ್ಲವೆಂಬ ಪ್ರಮಾಣ ಮಾಡಿಸುವ ಕಾರ್ಯಕ್ರಮ. ಅದೇ ರೀತಿ ವರನು ತಾನು ತುಂಬಿದ ಮನೆಯಿಂದ ಬಂದ ಹೆಣ್ಣನ್ನು ಮದುವೆಯಾದ್ದರಿಂದ ಆಕೆಯನ್ನು ತುಂಬಾ ಎಚ್ಚರಿಕೆಯಿಂದ ಕಾಪಾಡುತ್ತೇನೆ ಎಂದು ಭಾಷೆ ಕೊಡುವುದೂ ಆಗಿದೆ. ಅಲ್ಲದೆ ಗಂಡನ ಮನೆಯಲ್ಲಿನ ಹೆಣ್ಣು ಮಕ್ಕಳು ಹಾಗೂ ಹೊಸದಾಗಿ ಬರಲಿರುವ ಸೊಸೆಯ ನಡುವೆ ಪರಸ್ಪರ ಉಂಟಾಗುವ ಈರ್ಷ್ಯೆಯನ್ನು ತೊಡೆದು ಅಕ್ಕರೆ ಸೌಹಾರ್ದತೆಗಳನ್ನು ಬೆಸೆಯುವ ತಂತ್ರವೂ ಜೊತೆಗೆ ವಧುವಿನ ಮನೆಯಲ್ಲಿನ ಹೆಣ್ಣು ಮಕ್ಕಳು ಮತ್ತು ವರನ ನಡುವೆ ಅವಿನಾಭಾವ ಸಲುಗೆ ಉಂಟುಮಾಡುವ ಉದ್ದೇಶ ಈ ಕಾರ್ಯಕ್ರಮದಲ್ಲಿ ಅಡಗಿದೆ.

**ಶಾಸ್ತ್ರದ ವಿಧಾನ:**

- ವಧುವಿನ ಕೋಣೆಯೊಳಗೆ ಬಂದ ವಧುವರರನ್ನು ದೇವರ ಮೂಲೆಯಲ್ಲಿರುವ ದೇವರ ಎದಿರು ಎರಡು ಮಣೆಗಳನ್ನು ಹಾಕಿ ಅದರ ಮೇಲೆ ಬಿಳಿವಸ್ತ್ರವನ್ನು ಹಾಸಿ ವಧುವರರನ್ನು ಅವುಗಳ ಮೇಲೆ ಕೂರಿಸಬೇಕು.



- ನಂತರ, ಇಬ್ಬರ ಕೈಗಳಿಂದ ದೀಪಸ್ತಂಭಗಳಿಗೆ ದೇವರಿಗೆ ಮತ್ತು ಹರಣೆ ಕುಡಿಕೆಗಳಿಗೆ ಅರಿಶಿನ ಕುಂಕುಮ ಮತ್ತು ಹೂವುಗಳನ್ನಿರಿಸಿ ಗಂಧದ ಕಡ್ಡಿಗಳನ್ನು ಹಚ್ಚಿಸಿ ತೆಂಗಿನಕಾಯಿಯನ್ನು ಒಡೆಸಿ ತುಪ್ಪದಾರತಿ ಬೆಳಗಿಸಬೇಕು.
- ಆಮೇಲೆ ವಧುವಿನ ಕಡೆಯ ಮೂವರು ಬಾಲಕನ್ಯೆಯರು ಮತ್ತು ವರನ ಕಡೆಯ ಎರಡು ಬಾಲಕನ್ಯೆಯರಿಗೆ ಹರಣೆ ಕುಡಿಕೆಗಳನ್ನು ವಧುವರರು ಕೊಡಬೇಕು.
- ವಧುವಿನ ಕಡೆಯ ಬಾಲಕನ್ಯೆಯರು ಒಬ್ಬೊಬ್ಬರಾಗಿ ಬಂದು ವಧುವರರ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟು ವರನನ್ನುದ್ದೇಶಿಸಿ "ಮುತ್ತೈದೆ ಮಗನೆ, ಮುಚ್ಚು ಬಾಗಿನ ಕೊಡು" ಎಂದು ಕೇಳಬೇಕು.
- ಆಗ ವರನು ಬಾಲಕನ್ಯೆಯ ಹಣೆಗೆ ತಿಲಕ ಇಟ್ಟು, ಬಾಲಕನ್ಯೆಯನ್ನು ಉದ್ದೇಶಿಸಿ "ಮುತ್ತೈದೆ ಮಗಳೇ, ಮುಚ್ಚು ಬಾಗಿನ ತೆಗೆದುಕೋ" ಎಂದು ಹೇಳಿ ಒಂದು ಹರಣೆ ಕುಡಿಕೆಯನ್ನು ವಧುವಿನೊಟ್ಟಿಗೆ ಸೇರಿ ಕೊಡಬೇಕು.
- ನಂತರ, ವರನ ಕಡೆಯ ಬಾಲಕನ್ಯೆಯರು ಒಬ್ಬೊಬ್ಬರಾಗಿ ಬಂದು ವಧುವರರ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಹೂವನ್ನು ಕೊಟ್ಟು ವಧುವನ್ನುದ್ದೇಶಿಸಿ "ಮುತ್ತೈದೆ ಮಗಳೆ, ಮುಚ್ಚು ಬಾಗಿನ ಕೊಡು" ಎಂದು ಕೇಳಬೇಕು.
- ಆಗ ವಧುವು ಬಾಲಕನ್ಯೆಯ ಹಣೆಗೆ ತಿಲಕ ಇಟ್ಟು, ಬಾಲಕನ್ಯೆಯನ್ನು ಉದ್ದೇಶಿಸಿ "ಮುತ್ತೈದೆ ಮಗಳೇ, ಮುಚ್ಚು ಬಾಗಿನ ತೆಗೆದುಕೋ" ಎಂದು ಹೇಳಿ ಒಂದು ಹರಣೆ ಕುಡಿಕೆಯನ್ನು ವರನೊಟ್ಟಿಗೆಸೇರಿ ಕೊಡಬೇಕು.
- ಇದಾದ ನಂತರ, ವಧುವರರು ಪರಸ್ಪರ ತಮ್ಮ ಕೈಗಳಿಗೆ ಕಟ್ಟಿರುವ ಕಂಕಣಗಳನ್ನು ಬಿಚ್ಚಿ ಕಳಸದ ತಟ್ಟೆಯಲ್ಲಿ ಇರಿಸಬೇಕು.
- ವಧುವಿನ ಸೆರಗಿನ ತುದಿ ಮತ್ತು ವರನ ಶಲ್ಯದ ತುದಿಗಳನ್ನು ಸೇರಿಸಿ ಹಾಕಿರುವ ಗಂಟನ್ನು ಪರಸ್ಪರರು ಬಿಚ್ಚಬೇಕು.
- ತರುವಾಯ, ವಧು ವರರ ಸೋದರಮಾವಂದಿರು ತಮ್ಮಗಳ ತಲೆಗೆ ಟೋಪಿಯನ್ನು ಹಾಕಿಕೊಂಡು ಭುಜದ ಮೇಲೆ ಶಾಲನ್ನು ಹೊದ್ದುಕೊಂಡು ವಧು ವರರ ಹಣೆಗೆ ಕಟ್ಟಿರುವ ಬಾಸಿಂಗಗಳನ್ನು ಪ್ರತ್ಯೇಕವಾಗಿ ಬಿಚ್ಚಿ ಕಳಸದ ತಟ್ಟೆಯಲ್ಲಿರಿಸಬೇಕು.

- ತೆಗೆದಿರುವ ಎರಡು ಬಾಸಿಂಗ ಮತ್ತು ಎರಡು ಕಂಕಣಗಳನ್ನು ವಧು ವರರಿಗೆ ಪಂಚಕಲಶವನ್ನು ತೋರಿಸಲು ದೇವಸ್ಥಾನಕ್ಕೆ ಹೋದಾಗ ಅವರಿಬ್ಬರ ಕೈಯಲ್ಲಿ ಅಲ್ಲಿರುವ ಗಂಟೆಗೆ ಅವುಗಳನ್ನು ಕಟ್ಟಿಸಬೇಕು.

**ಊಟದ ಸಮಯ...**

**ವಧುವರರನ್ನು ವಧುವಿನ ಕೋಣೆಗೆ / ಮನೆಗೆ ಕಳುಹಿಸುವ ಶಾಸ್ತ್ರ:**

- ಮಂಟಪದಲ್ಲಿ ಎರಡು ಮಣೆಗಳ ಮೇಲೆ ಬಿಳಿ ವಸ್ತ್ರವನ್ನು ಹಾಸಿ ಅದರ ಮೇಲೆ ವಧುವರರನ್ನು ಕೂರಿಸಿ, ಮಣೆಯ ಎರಡೂ ಬದಿಗಳಲ್ಲಿ ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ಒಂದು ಬೇಸಿನ್ನಲ್ಲಿ ವಧುವಿನ ಗಂಟಿನ ಸಾಮಗ್ರಿಗಳು ಮತ್ತು ಇನ್ನೊಂದು ಬೇಸಿನ್ನಲ್ಲಿ ವರನ ಗಂಟಿನ ಸಾಮಗ್ರಿಗಳು ಮತ್ತು ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆ ಮತ್ತು ಬಿಡಿ ಹೂವುಗಳನ್ನಿರಿಸಬೇಕು.
- ಮುಂದೆ, ಮನೆಯ ಹೆಣ್ಣುಮಗಳು ಅಲ್ಲಿಗೆ ಬಂದು ದೀಪಸ್ತಂಭಗಳಿಗೆ ಮತ್ತು ವಧುವರರಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.
- ಎದುರಿಗಿರುವ ಎರಡು ಬೇಸಿನ್ ಹಾಗೂ ಅರಿಶಿನ, ಕುಂಕುಮದ ತಟ್ಟೆಗಳಿಗೆ ವಧುವರರ ಕೈಯಲ್ಲಿ ನಮಸ್ಕಾರ ಮಾಡಿಸಿ ಪ್ರತ್ಯೇಕವಾಗಿ ವಧುವರರಿಗೆ ಎರಡು ಗಂಟುಗಳನ್ನು ಕಟ್ಟಬೇಕು.
- ನಂತರ ವಧುವರರು ಗಂಟುಗಳನ್ನು ಬೇಸಿನ್ನಲ್ಲಿ ಇರಿಸಿ ಎದ್ದು ಬಂದು ನೆರೆದಿರುವ ಹಿರಿಯರ ಪಾದಗಳಿಗೆ ನಮಸ್ಕರಿಸಿ ಅವರಿಂದ ಅಕ್ಷತೆಯ ಸಮೇತವಾಗಿ ಆಶೀರ್ವಾದವನ್ನು ಪಡೆಯಬೇಕು. ನಂತರ ವಧುವರರು ಮಣೆಗಳ ಮೇಲೆ ಕುಳಿತುಕೊಂಡು ಗಂಟುಗಳನ್ನು ತಮ್ಮ ತೊಡೆಗಳ ಮೇಲೆ ಇರಿಸಿಕೊಂಡು ಅಲ್ಲಿ ನೆರೆದಿರುವವರಿಗೆಲ್ಲ ಕೇಳಿಸುವಂತೆ "ಎಲ್ಲರಿಗೂ, ಹೋಗಿಬರುವೆವು" ಎಂದು ಹೇಳಿ ಎದ್ದು ವಧುವಿನ ಮನೆಗೆ ಒಬ್ಬ ಮುತ್ತೈದೆಯೊಡನೆ ಬರತಕ್ಕದ್ದು.
- ಮುತ್ತೈದೆಯು ತಮ್ಮೊಂದಿಗೆ ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆ ಹಾಗೂ ಬಿಡಿ ಹೂಗಳನ್ನು ತರಬೇಕು.



**ವಧುವಿನ ಕೋಣೆಯಲ್ಲಿ / ಮನೆಯಲ್ಲಿ ವಧುವರರನ್ನು ಬರಮಾಡಿಕೊಳ್ಳುವಿಕೆ:**

- ವಧುವಿನ ಮನೆಗೆ ಗಂಟುಗಳನ್ನು ಕೈಯಲ್ಲಿ ಹಿಡಿದು ಬಂದ ವಧೂವರರನ್ನು ಬಾಗಿಲಿನಲ್ಲಿ ತಡೆದು ಮುತ್ತೈದೆಯು ಕೆಂಪು ನೀರಿನ ಆರತಿ ಮಾಡಿ ವಧುವರರ ಕಾಲುಗಳನ್ನು ತೊಳೆಯಬೇಕು.
- ಆಮೇಲೆ ಮನೆಯ ಅಳಿಯಂದಿರು ಒಂದು ತೆಂಗಿನಕಾಯಿಯಿಂದ ವಧುವರರಿಗೆ ಇಳೇ ತೆಗೆದು ತೆಂಗಿನಕಾಯಿಯನ್ನು ಒಡೆದ ಮೇಲೆ ಮನೆಯ ಒಳಗೆ ಬರಮಾಡಿಕೊಳ್ಳಬೇಕು.
- ಮನೆಯೊಳಗೆ ಬಂದ ವಧುವರರನ್ನು ಪೂರ್ವ ಅಥವಾ ಉತ್ತರಾಭಿಮುಖವಾಗಿ ಸಿದ್ಧ ಪಡಿಸಿರುವ ಮಣೆಗಳ ಮೇಲೆ ಬಲಗಡೆಯಿಂದ ಬರಮಾಡಿಕೊಂಡು ಮಣೆಗಳ ಮೇಲೆ ಕೂರಿಸಬೇಕು.
- ನಂತರ, ಮಣೆಗಳ ಎದುರಿಗಿರಿಸುವ ಎರಡು ದೀಪಸ್ತಂಭಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ವಧುವರರೊಡನೆ ಬಂದಿರುವವರಿಗೂ ಮತ್ತು ಮನೆಯಲ್ಲಿ ನೆರೆದಿರುವವರೆಲ್ಲರಿಗೂ ನಿಂಬೆ ಹಣ್ಣಿನ ಪಾನಕವನ್ನು ಕುಡಿಯಲು ಕೊಡಬೇಕು.
- ಪಾನಕವನ್ನು ಅವರೆಲ್ಲ ಕುಡಿದ ಮೇಲೆ, ಒಬ್ಬ ಮುತ್ತೈದೆಯು ದೀಪಸ್ತಂಭಗಳಿಗೆ ಹಾಗೂ ವಧುವರರಿಗೆ ಅರಿಶಿನ ಕುಂಕುಮವನ್ನಿಟ್ಟು ಹೂವನ್ನು ಕೊಡಬೇಕು.
- ನಂತರ, ವಧುವರರ ತೊಡೆಯ ಮೇಲಿರುವ ಗಂಟುಗಳನ್ನು ಪ್ರತ್ಯೇಕವಾದ ಬೇಸಿನ್ನಲ್ಲಿ ಪಡೆದು ದೇವರ ಕೋಣೆಯಲ್ಲಿ ಇರಿಸಬೇಕು.

ನಂತರ ಬಿಡುವಿನ ವೇಳೆ.

**ವಧುವರರನ್ನು ವರನ ಕೋಣೆಗೆ / ಮನೆಗೆ ಕರೆತರುವುದು:**

- ವಿರಾಮ ಕಳೆದ ನಂತರ ಮತ್ತೆ ಪೂರ್ವಾಭಿಮುಖ ಅಥವಾ ಉತ್ತರಾಭಿಮುಖವಾಗಿ ಸಿದ್ಧ ಪಡಿಸಿರುವ ಮಣೆಗಳ ಮೇಲೆ ವಧೂವರರನ್ನು ಮಣೆಗಳ ಬಲಗಡೆಯಿಂದ ಕರೆತಂದು ಕೂರಿಸಬೇಕು.
- ಎದುರಿಗಿರಿಸುವ ಎರಡು ದೀಪಸ್ತಂಭಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

- ಒಬ್ಬ ಮುತ್ತೈದೆಯು ದೀಪಸ್ತಂಭಗಳಿಗೆ ಹಾಗೂ ವಧುವರರಿಗೆ ಅರಿಶಿನ ಕುಂಕುಮವನ್ನಿಟ್ಟು ಹೂವನ್ನು ಕೊಡಬೇಕು.
- ದೇವರ ಕೋಣೆಯಿಂದ ಎರಡು ಗಂಟುಗಳನ್ನು ತಂದು ವಧುವಿನ ಕೈಯಲ್ಲಿ ಅವುಗಳಿಗೆ ನಮಸ್ಕಾರ ಮಾಡಿಸಿ ಅವರ ಕೈಗಳಿಗೆ ಕೊಡಬೇಕು.
- ಗಂಟನ್ನು ಕೈಯಲ್ಲಿ ಹಿಡಿದುಕೊಂಡು ಮಣೆಯ ಎಡಗಡೆಯಿಂದ ಎದ್ದು ಬಂದ ವಧುವರರನ್ನು ಅರಿಶಿನ, ಕುಂಕುಮದ ತಟ್ಟೆ ಸಹಿತವಿರುವ ಒಬ್ಬ ಮುತ್ತೈದೆಯೊಡನೆ ವರನ ಕೋಣೆಗೆ ಕರೆದುಕೊಂಡು ಹೋಗತಕ್ಕದ್ದು.

**ವಧುವರರನ್ನು ವರನ ಕೋಣೆಯಲ್ಲಿ / ಮನೆಯಲ್ಲಿ ಬರಮಾಡಿಕೊಳ್ಳುವಿಕೆ:**

- ವರನ ಮನೆಗೆ ಗಂಟುಗಳನ್ನು ಕೈಯಲ್ಲಿ ಹಿಡಿದು ಬಂದ ವಧೂವರರನ್ನು ಮನೆಯ ಮುಂಬಾಗಿಲಿನಲ್ಲಿ ತಡೆದು ಮುತ್ತೈದೆಯು ಕೆಂಪು ನೀರಿನ ಆರತಿ ಮಾಡಿ, ವಧುವರರ ಕಾಲುಗಳನ್ನು ತೊಳೆಯಬೇಕು.
- ಆಮೇಲೆ ಮನೆಯ ಅಳಿಯಂದಿರು ಒಂದು ತೆಂಗಿನಕಾಯಿಯಿಂದ ವಧುವರರಿಗೆ ಇಳೇ ತೆಗೆದು ತೆಂಗಿನಕಾಯಿಯನ್ನು ಒಡೆದ ಮೇಲೆ ವಧುವರರನ್ನು ಮನೆಯ ಒಳಗೆ ಬರಮಾಡಿಕೊಳ್ಳಬೇಕು.
- ಮನೆಯೊಳಗೆ ಬಂದ ಮೇಲೆ ವಧುವರರನ್ನು ಪೂರ್ವಾಭಿಮುಖ ಅಥವಾ ಉತ್ತರಾಭಿಮುಖವಾಗಿ ಸಿದ್ಧ ಪಡಿಸಿರುವ ಮಣೆಗಳ ಬಳಿಗೆ ಮಣೆಗಳ ಬಲಗಡೆಯಿಂದ ಕರೆದು ತಂದು ಮಣೆಗಳ ಮೇಲೆ ಗಂಟಿನ ಸಮೇತ ಕೂರಿಸಬೇಕು.
- ಮಣೆಗಳ ಎದುರಿಗಿರಿಸುವ ಎರಡು ದೀಪಸ್ತಂಭಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ವಧುವರರೊಡನೆ ಬಂದಿರುವವರಿಗೂ ಮತ್ತು ಅಲ್ಲಿ ನೆರೆದಿರುವವರೆಲ್ಲರಿಗೂ ನಿಂಬೆ ಹಣ್ಣಿನ ಪಾನಕವನ್ನು ಕುಡಿಯಲು ಕೊಡಬೇಕು.
- ಅವರೆಲ್ಲರು ಪಾನಕವನ್ನು ಕುಡಿದ ಮೇಲೆ, ಒಬ್ಬ ಮುತ್ತೈದೆಯು ದೀಪಸ್ತಂಭಗಳಿಗೆ ಹಾಗೂ ವಧುವರರಿಗೆ ಅರಿಶಿನ ಕುಂಕುಮವನ್ನಿಟ್ಟು ಹೂವನ್ನು ಕೊಡಬೇಕು.

ನಂತರ, ವಧುವರರ ತೊಡೆಯ ಮೇಲಿರುವ ಗಂಟುಗಳನ್ನು ಪ್ರತ್ಯೇಕವಾದ ಬೇಸಿನ್ಗಳಲ್ಲಿ ಪಡೆದು ದೇವರ ಕೋಣೆಯಲ್ಲಿ ಇರಿಸಬೇಕು.



**ಈಗ ಬಿಡುವಿನ ವೇಳೆ.**

**ಪಂಚಕಲಶ ದರ್ಶನ** : ದೇವಸ್ಥಾನದ ಮುಂಭಾಗದಲ್ಲಿನ ಧ್ವಜಸ್ತಂಭದ ಮೇಲಿರುವ ಐದು ಕಲಶಗಳನ್ನು ನವ ವಧುವರರಿಗೆ ತೋರಿಸುವ ಉದ್ದೇಶ, ಹಿಂದುಗಳ ನಂಬಿಕೆಯಂತೆ ದೇಶದುದ್ದಗಲಕ್ಕೂ ಹರಡಿಕೊಂಡಿರುವ ಐದು ಪುಣ್ಯಕ್ಷೇತ್ರಗಳಾದ ಕಾಶಿ, ಕಂಚಿ, ಆವಂತಿ, ಪುರಿ ಮತ್ತು ದ್ವಾರಕಾ ಕ್ಷೇತ್ರಗಳನ್ನು ಸಂದರ್ಶಿಸಿ ಪಡೆಯುವ ಪುಣ್ಯದ ಫಲಕ್ಕೆ ಸರಿಸಮಾನವೆಂಬುದೇ ಆಗಿದೆ.

- ಮುಖ ಮಾರ್ಜನ ಮುಗಿಸಿದ ವಧುವರರ ಜೊತೆಗೆ ವರನ ಮನೆಯ ಮುತ್ತೈದೆಯರು ಪೂಜಾಸಾಮಗ್ರಿಗಳೊಂದಿಗೆ ದೇವಸ್ಥಾನಕ್ಕೆ ಹೊರಡತಕ್ಕದ್ದು.
- ಹಾಗೆಯೇ ವಧುವಿನ ಮನೆಯ ಮುತ್ತೈದೆಯರೂ ಸಹ ಪೂಜಾಸಾಮಗ್ರಿಗಳೊಂದಿಗೆ ದೇವಸ್ಥಾನಕ್ಕೆ ನೇರವಾಗಿ ಬರತಕ್ಕದ್ದು.
- ಪುರೋಹಿತರ ಅಥವಾ ದೇವಸ್ಥಾನದ ಅರ್ಚಕರ ಮಾರ್ಗದರ್ಶನದಲ್ಲಿ ಪಂಚಕಲಶ ದರ್ಶನ ಮಾಡಿ ಪಾರ್ವತೀ ಪರಮೇಶ್ವರರ ಪೂಜೆಯನ್ನು ಮುಗಿಸಿದ ಮೇಲೆ ನೆರೆದಿರುವ ವಧುವರರ ಮನೆಯವರ ಮುತ್ತೈದೆಯರು ಪರಸ್ಪರ ತಾಂಬೂಲವನ್ನು ಬದಲಾಯಿಸಿಕೊಳ್ಳಬೇಕು.
- ನಂತರ, ವಧುವರರಿಗೆ ಕಟ್ಟಿದ್ದ ಬಾಸಿಂಗಗಳು ಮತ್ತು ಕಂಕಣಗಳನ್ನು ದೇವಸ್ಥಾನದ ಘಂಟೆಗೆ ಕಟ್ಟಬೇಕು.
- ಇದಾದ ತರುವಾಯ, ವರನ ಮನೆಗೆ ಹಿಂದಿರುಗತಕ್ಕದ್ದು.
  ಸ್ವಲ್ಪ ಹೊತ್ತು ಸುಧಾರಿಸಿಕೊಂಡು, ಶುಭ ಸಮಯ ನೋಡಿಕೊಂಡು ವಧುವಿನ ಮನೆಗೆ ಪ್ರಸ್ಥದ ಶಾಸ್ತ್ರಕ್ಕೆ ವಧುವರರೊಡನೆ ಬಂಧುಮಿತ್ರರು ತೆರಳಬೇಕು.

**ಗಂಡಿನ ಮನೆಯವರ ಊಟದ ದಿನ ಅರಿಶಿನ ಮತ್ತು ಎಣ್ಣೆ ಹಚ್ಚುವ ಶಾಸ್ತ್ರ: ಸಿದ್ಧತೆ:**

- ಮದುವೆಯಾದ ಮೂರು ಅಥವಾ ಐದು ದಿನಗಳ ತರುವಾಯ ಈ ಶಾಸ್ತ್ರ ಮಾಡಲು ಮೊದಲಿಗೆ ಉತ್ತರ ಅಥವಾ ಪೂರ್ವಾಭಿಮುಖವಾಗಿ ಮೂರು ಮಣೆಗಳನ್ನು ಒಂದರ ಪಕ್ಕ ಮತ್ತೊಂದನ್ನು ಹಾಕಿ ಅವುಗಳ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು.
- ಮಣೆಗಳ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

- ವರನ ಬಲಗಡೆ ಇರುವ ಮಣೆಯಲ್ಲಿ ವಧುವು, ಮತ್ತೊಂದರಲ್ಲಿ ವರನು ಇನ್ನೊಂದರಲ್ಲಿ ವರನ ಅಕ್ಕನ ಅಥವಾ ತಂಗಿಯ ಮಗನನ್ನು "ಒತ್ತು ಮನೆ ಲಿಂಗ"ದವನನ್ನಾಗಿ ಕೂರಿಸಬೇಕು.
- ವಧುವಿನ ಉಡುಗೆ ಸಾಧಾರಣವಾದ ಸೀರೆ ಮತ್ತು ಕುಪ್ಪಸ.
- ವರನ ಉಡುಗೆ ಪಂಚೆ ಮತ್ತು ಶಲ್ಯ.
- ಒತ್ತು ಮನೆ ಲಿಂಗನ ಉಡುಗೆಯೆಂದರೆ ಪಂಚೆ, ಶಲ್ಯ, ತಲೆಗೆ ಇಸ್ತ್ರಿಎಲೆಯ ಟೋಪಿ, ಹಣೆಗೆ ಅರಿಶಿನ ಕುಂಕುಮದ ಮೂರುನಾಮ ಹಾಕಿ ಕಿವಿಗೆ ಮತ್ತು ಕೊರಳಿಗೆ ಹಣ್ಣುಗಳ, ತರಕಾರಿಗಳ ಮತ್ತು ಸಿಹಿ ತಿಂಡಿಗಳ ಹಾರಗಳನ್ನು ಮಾಡಿ ಹಾಕಿರಬೇಕು.
- ಆತನು ಶಾಸ್ತ್ರ ಮುಗಿಯುವವರೆಗೂ ಅವುಗಳನ್ನು ಕಿತ್ತುಕೊಂಡು ತಿನ್ನುತ್ತಿರಬೇಕು.

**ಇವರುಗಳ ಮುಂದಿಡುವ ಸಾಮಗ್ರಿಗಳು:**

- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆ ಮತ್ತು ಬಿಡಿ ಹೂವುಗಳು.
- ಮತ್ತೊಂದು ತಟ್ಟೆಯಲ್ಲಿ ವೀಳೆಯದೆಲೆ ಹಾಗೂ ಅಡಿಕೆ.
- ಇನ್ನೊಂದು ತಟ್ಟೆಯಲ್ಲಿ ಮೂರು ಬಿಳಿಯ ಹೂವಿನ ಹಾರಗಳು.
- ಒಂದು ಲೋಟದಲ್ಲಿ ನೀರು ಮತ್ತೊಂದು ಲೋಟದಲ್ಲಿ ಹರಳೆಣ್ಣೆ.

***ಸೂಚನೆ:*** ಇಲ್ಲಿ ಒತ್ತು ಮನೆ ಲಿಂಗನ ಪ್ರಸ್ತುತತೆ ಏನೆಂದರೆ, ಆಗ ತಾನೆ ಪ್ರಸ್ಥದ ಶಾಸ್ತ್ರ ಮುಗಿಸಿ ಬಂದಿರುವ ವಧು ವರರು ನಾಚಿಕೆಯಿಂದ ಕುಗ್ಗಿರುವುದಲ್ಲದೇ ಅವರ ದೇಹಗಳು ಹಸಿತನವನ್ನು ಉಳಿಸಿಕೊಂಡಿರುವುದರಿಂದ ಕುಟುಂಬ ವರ್ಗದವರು ಮತ್ತು ಆಹ್ವಾನಿತರ ಗಮನವನ್ನು ಅವರಿಬ್ಬರಿಂದ ಬೇರೆಡೆಗೆ ಸೆಳೆಯಲು ಮತ್ತು ವಧುವರರಲ್ಲಿ ಸ್ಥೈರ್ಯವನ್ನು ಮೂಡಿಸಿ ನಿರಾಳಗೊಳಿಸುವುದೇ ಆಗಿದೆ.

**ವಿಧಾನ:**

- ಮೂರು, ಐದು ಅಥವಾ ಒಂಭತ್ತು ಮುತ್ತೈದೆಯರು ಕ್ರಮವಾಗಿ ಬಂದು ಮೊದಲು ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.
- ನಂತರ ವರನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನದ ಕೈಗಳಿಂದ ಬಳಿದು ಹಣೆಗೆ ಎರಡು ಬಾರಿ ಕುಂಕುಮವನ್ನು ಇಟ್ಟು ಕೈಗೆ ಹೂವನ್ನು ಕೊಡಬೇಕು.



- ಆಮೇಲೆ ವಧುವಿನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನದ ಕೈಗಳಿಂದ ಬಳಿದು ಹಣೆಗೆ ಎರಡು ಬಾರಿ ಕುಂಕುಮವನ್ನು ಇಟ್ಟು ಕೈಗೆ ಹೂವನ್ನು ಕೊಡಬೇಕು.
- ಆನಂತರ "ಒತ್ತು ಮನೆ ಲಿಂಗ"ನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನದ ಕೈಗಳಿಂದ ಬಳಿದು ಹಣೆಗೆ ಎರಡು ಬಾರಿ ಕುಂಕುಮವನ್ನು ಇಟ್ಟು ಕೈಗೆ ಹೂವನ್ನು ಕೊಡಬೇಕು.
- ಆಮೇಲೆ ಮೂವರ ತಲೆಯ ಮೇಲೆ ಹರಳೆಣ್ಣೆಯನ್ನು ತಲಾ ಮೂರು ಬಾರಿ ತಟ್ಟಬೇಕು.
- ನಂತರ ಮೂವರ ಕೈಯಲ್ಲೂ ಅರಿಶಿನ ಕುಂಕುಮದ ತಟ್ಟೆಗೆ ನಮಸ್ಕಾರ ಮಾಡಿಸಬೇಕು.
- ಇದಾದ ಮೇಲೆ ಮೂವರು ಸೇರಿಕೊಂಡು ತಾಂಬೂಲ ರೂಪದಲ್ಲಿ ಮುತ್ತೈದೆಗೆ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳನ್ನು ನೀಡಬೇಕು.
- ಮುತ್ತೈದೆಯು ತನ್ನ ಗಂಡನ ಮನೆತನದ ಮತ್ತು ಗಂಡನ ಹೆಸರಿನ ಜೊತೆಗೆ "ಮಾಮ" ಎಂಬ ಪದವನ್ನು ಸೇರಿಸಿ ಹೇಳಿ ತನ್ನ ಸೆರಗೊಡ್ಡಿ ಪಡೆಯತಕ್ಕದ್ದು.
- ಮುತ್ತೈದೆಯರ ಸರದಿ ಮುಗಿದ ಬಳಿಕ ವಧುವನ್ನು ಎಬ್ಬಿಸಿ ವರನನ್ನು ವಧುವಿನ ಜಾಗದಲ್ಲಿ ಕೂರಿಸಬೇಕು.
- ವಧುವು ಮೊದಲು ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.
- ನಂತರ ವರನ ಕೆನ್ನೆಗಳಿಗೆ ಅರಿಶಿನದ ಕೈಗಳಿಂದ ಬಳಿದು ವರನ ಮನೆತನದ ಮತ್ತು ವರನ ಹೆಸರಿನ ಜೊತೆಗೆ "ಮಾಮ" ಎಂಬ ಪದವನ್ನು ಸೇರಿಸಿ ವರನನ್ನುದ್ದೇಶಿಸಿ "ಅರಿಶಿನ ಹಚ್ಚಲು ಕೈಗಳನ್ನು ಕೊಡಿ" ಎಂದು ಮನವಿ ಮಾಡಬೇಕು.
- ನಂತರ ವರನ ಕೈ ಹಾಗೂ ಪಾದಗಳಿಗೆ ಅರಿಶಿನವನ್ನು ಹಚ್ಚಿ, ಹಣೆಗೆ ಎರಡು ಬಾರಿ ಕುಂಕುಮವನ್ನು ಇಟ್ಟು ಕೈಗೆ ಹೂವನ್ನು ಕೊಡಬೇಕು.
- ಆನಂತರ "ಒತ್ತು ಮನೆ ಲಿಂಗ"ನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನದ ಕೈಗಳಿಂದ ಬಳಿದು ಹಣೆಗೆ ಎರಡು ಬಾರಿ ಕುಂಕುಮವನ್ನು ಇಟ್ಟು ಕೈಗೆ ಹೂವನ್ನು ಕೊಡಬೇಕು.

- ನಂತರ, ವರನ ಹಾಗೂ "ಒತ್ತು ಮನೆ ಲಿಂಗ"ನ ತಲೆಯ ಮೇಲೆ ಹರಳೆಣ್ಣೆಯನ್ನು ತಲಾ ಮೂರು ಬಾರಿ ತಟ್ಟಬೇಕು.
- ನಂತರ ಇಬ್ಬರ ಕೈಯಲ್ಲೂ ಅರಿಶಿನ ಕುಂಕುಮದ ತಟ್ಟೆಗೆ ನಮಸ್ಕಾರ ಮಾಡಿಸಬೇಕು.
- ಮುಂದೆ ವರನ ಮನೆತನದ ಮತ್ತು ವರನ ಹೆಸರಿನ ಜೊತೆಗೆ "ಮಾಮ" ಎಂಬ ಪದವನ್ನು ಸೇರಿಸಿ ವರನನ್ನುದ್ದೇಶಿಸಿ ತಾಂಬೂಲವನ್ನು ಕೊಡಿ ಎಂದು ಕೇಳಿ, ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳನ್ನು ತಾಂಬೂಲ ರೂಪದಲ್ಲಿ ತನ್ನ ಸೆರಗೊಡ್ಡಿ ಪಡೆಯತಕ್ಕದ್ದು.
- ಇದಾದ ಮೇಲೆ ವರನ ಮನೆತನದ ಮತ್ತು ವರನ ಹೆಸರಿನ ಜೊತೆಗೆ "ಮಾಮ" ಎಂಬ ಪದವನ್ನು ಸೇರಿಸಿ ವರನನ್ನುದ್ದೇಶಿಸಿ ಮಣೆಯ ಮೇಲಿನ ತಮ್ಮ ಜಾಗವನ್ನು ಬಿಟ್ಟು ಕೊಡಲು ಮನವಿ ಮಾಡಬೇಕು.
- ಮನವಿಯನ್ನು ಪುರಸ್ಕರಿಸಿದ ವರನು ವಧುವಿನ ಜಾಗದಿಂದ ಎದ್ದು ಮಣೆಗಳ ಎಡಗಡೆಯಿಂದ ಮುಂದೆ ಬರಬೇಕು. ಈಗ, ವಧುವು ವರನ ಜಾಗದಲ್ಲಿ ಹೋಗಿ ಕುಳಿತುಕೊಳ್ಳಬೇಕು.
- ವರನು, ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಟ್ಟು ವಧುವಿನ ಕೆನ್ನೆಗಳಿಗೆ ಅರಿಶಿನ ಬಳಿಯಬೇಕು.
- ವಧುವಿನ ಹೆಸರನ್ನು ಹೇಳಿ ಕೈಗಳಿಗೆ ಅರಿಶಿನ ಹಚ್ಚಲು ಕೇಳಿ ಪಡೆದು ಅರಿಶಿನ ಹಚ್ಚಬೇಕು.
- ನಂತರ ವಧುವಿನ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಹೂವನ್ನು ಕೊಡಬೇಕು.
- ಆನಂತರ "ಒತ್ತು ಮನೆ ಲಿಂಗ"ನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನದ ಕೈಗಳಿಂದ ಬಳಿದು ಹಣೆಗೆ ಎರಡು ಬಾರಿ ಕುಂಕುಮವನ್ನು ಇಟ್ಟು ಕೈಗೆ ಹೂವನ್ನು ಕೊಡಬೇಕು.
- ನಂತರ ಇಬ್ಬರ ತಲೆಯ ಮೇಲೆ ಮೂರು ಬಾರಿ ಹರಳೆಣ್ಣೆಯನ್ನು ತಟ್ಟಿ ಅವರಿಬ್ಬರ ಕೈಯಲ್ಲಿ ಅರಿಶಿನ ಕುಂಕುಮದ ತಟ್ಟೆಗೆ ನಮಸ್ಕಾರ ಮಾಡಿಸಬೇಕು.
- ಮುಂದೆ ವಧುವಿನ ಹೆಸರನ್ನು ಹೇಳಿ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳ ತಾಂಬೂಲವನ್ನು ಪಡೆಯತಕ್ಕದ್ದು.
- ಇದಾದ ಮೇಲೆ ವರನ ಜಾಗದಲ್ಲಿ ಕುಳಿತಿರುವ ವಧುವನ್ನುದ್ದೇಶಿಸಿ, ನಿನ್ನ ಜಾಗಕ್ಕೆ ಹಿಂದಿರುಗಿ ಆ ಜಾಗದಲ್ಲಿ ಕುಳಿತುಕೊಳ್ಳುವಂತೆ ಮನವಿ ಮಾಡಿ, ವಧುವರರು ತಮ್ಮ ಮೊದಲಿನ ಜಾಗಗಳಲ್ಲಿ ಕುಳಿತುಕೊಳ್ಳಬೇಕು.



ನಂತರ ಮೂವರು ಮುತ್ತೈದೆಯರು ಕೆಂಪು ನೀರಿನ ಆರತಿಯನ್ನು ಹಾಡು ಹಾಡುತ್ತ ಆರತಿ ಮಾಡಿ ವಧುವರರಿಗೆ ಮತ್ತು ಒತ್ತುಮನೆ ಲಿಂಗುವಿಗೆ ತಿಲಕವನ್ನಿಟ್ಟು ಮನೆಯ ಮುಂಬಾಗಿಲಿನಲ್ಲಿ ಆರತಿ ನೀರನ್ನು ಅಡ್ಡಲಾಗಿ ಎಡಭಾಗದಿಂದ ಬಲಗಡೆ ಬರುವಂತೆ ಸುರಿಯಬೇಕು. ಆಮೇಲೆ ಮೂವರನ್ನು ಸ್ನಾನಕ್ಕೆ ಎಬ್ಬಿಸಬೇಕು.

- ಮೊದಲು ವಧುವು ಸ್ನಾನ ಮುಗಿಸಿ ಬಂದ ಮೇಲೆ ವರನ ಸ್ನಾನಕ್ಕೆ ನೀರೆರೆದು ಸಹಾಯ ಮಾಡಬೇಕು.
- ಸ್ನಾನ ಮುಗಿಸಿ ಬಂದ ವರನಿಗೆ ವಧುವು, ಕೋಣೆಯ ಬಾಗಿಲಿನಲ್ಲಿ ತಡೆದು ಹಾಡು ಹೇಳುತ್ತಾ ಒಂದು ಜೊತೆ ನೀಲಾಂಜನ ದೀಪದ ಸಹಿತ ಕೆಂಪು ನೀರಿನ ಆರತಿ ತಟ್ಟೆಯಿಂದ ಆರತಿ ಬೆಳಗಬೇಕು
- ಆಮೇಲೆ ವರನ ಹಣೆಗೆ ತಿಲಕವನ್ನಿಟ್ಟು ಮನೆಯ ಮುಂಬಾಗಿಲಿನಲ್ಲಿ ಆರತಿ ನೀರನ್ನು ಅಡ್ಡಲಾಗಿ ಎಡಭಾಗದಿಂದ ಬಲಗಡೆ ಬರುವಂತೆ ಸುರಿಯಬೇಕು.
- ಖಾಲಿಯಾದ ಆರತಿ ತಟ್ಟೆಯೊಡನೆ ಹಿಂದಿರುಗಿ ಬಂದ ವಧುವಿಗೆ, ವರನು ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳ ತಾಂಬೂಲವನ್ನು ದಕ್ಷಿಣೆ ಹಣದೊಂದಿಗೆ ನೀಡಬೇಕು.
- "ಒತ್ತು ಮನೆ ಲಿಂಗ"ನಿಗೆ ವರನ ಮನೆಯವರು ಸ್ನಾನ ಮಾಡಿಸಿ ಆತನಿಗೆ ತಮ್ಮ ಶಕ್ತ್ಯಾನುಸಾರ ತಾಂಬೂಲದ ಜೊತೆಗೆ ಒಂದು ಜೊತೆ ಹೊಸ ಬಟ್ಟೆ ಅಥವಾ ದಕ್ಷಿಣೆ ಹಣವನ್ನು ಕೊಡಬೇಕು.

**ವಧುವರರನ್ನು ವರನ ಮನೆಗೆ ಕಳುಹಿಸುವಿಕೆ:**

- ವರನ ಮನೆಯವರು ವಧುವರರನ್ನು ಕರೆಯಲು ವರನ ಅಕ್ಕ ಮತ್ತು ಭಾವ ಅಥವಾ ಸೋದರತ್ತೆ ಮತ್ತು ಸೋದರಮಾವನವರು ಕಡ್ಲೆಬೆಲ್ಲದ ಗಂಟು ಮತ್ತು ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಹೂವಿರುವ ತಟ್ಟೆಯ ಸಮೇತ ವಧುವಿನ ಮನೆಗೆ ಬರತಕ್ಕದ್ದು.
- ಆ ದಿನ ಮಧ್ಯಾಹ್ನ ವರನ ಮನೆಯ ಬಳಗ ಮತ್ತು ಸ್ನೇಹಿತರು, ವಧುವಿನ ಮನೆಯ ಬಳಗ ಮತ್ತು ಸ್ನೇಹಿತರನ್ನು ವಧುವಿನ ಮನೆಗೆ ಊಟಕ್ಕೆ ಆಹ್ವಾನಿಸಬೇಕು.

1 ಭೋಜನ ಕಾರ್ಯಕ್ರಮ ಮುಗಿದ ಬಳಿಕ ಸಂಜೆಯ ವೇಳೆಗೆ ವಧುವರರ ಕೈಯಲ್ಲಿ ಚಪ್ಪರದ ಪೂಜೆಯನ್ನು ಮಾಡಿಸಿ ಕಟ್ಟಿರುವ ಮಾವಿನ ಕುಡಿಯಲ್ಲಿ ಒಂದನ್ನು ಕಿತ್ತು ಚಪ್ಪರದ ಮೇಲೆ ಎಸೆಯಬೇಕು.

1 ಇದಾದ ನಂತರ ವಧುವರರನ್ನು, ಉತ್ತರ ಅಥವಾ ಪೂರ್ವಾಭಿಮುಖವಾಗಿ ಹಾಕಿ, ಬಿಳಿಯ ವಸ್ತ್ರವನ್ನು ಹಾಸಿರುವ ಮಣೆಗಳ ಮೇಲೆ ಬಲಗಡೆಯಿಂದ ಬರುವಂತೆ ತಿಳಿಸಿ, ಆ ಮಣೆಗಳ ಮೇಲೆ ವಧುವರರನ್ನು ಕೂರಿಸಬೇಕು.

ನಂತರ, ವಧುವಿನ ಸೋದರತ್ತೆಯವರು ಮೊದಲು ವರನ ನಂತರ ವಧುವಿನ ಕಡ್ಲೆಬೆಲ್ಲದ ಗಂಟನ್ನು ಕಟ್ಟಬೇಕು.

1 ಗಂಟುಗಳನ್ನು ಕಟ್ಟಿದ ಮೇಲೆ, ವಧುವರರು ಎದ್ದು ನಿಂತು ನೆರೆದಿರುವ ಹಿರಿಯರೆಲ್ಲರ ಪಾದಗಳಿಗೆ ನಮಸ್ಕರಿಸಿ ಅಕ್ಷತೆಯ ಸಮೇತ ಆಶೀರ್ವಾದ ಪಡೆದ ಮೇಲೆ ಎಲ್ಲರಿಗೂ ಕೇಳಿಸುವಂತೆ, "ಹೋಗಿ ಬರುವೆವು" ಎಂದು ತಿಳಿಸಿ ಹೊರಡತಕ್ಕದ್ದು.

**ವರನ ಗಂಟಿಗೆ ಬೇಕಾಗುವ ಸಾಮಗ್ರಿಗಳು:**

1 ಹುರಿಗಡಲೆ (ಕಡ್ಲೆ ಪಪ್ಪು) 2½ ಕೆ.ಜಿ., ಅರಿಶಿನ, ಕುಂಕುಮ – ತಲಾ ಎರಡು ಪೊಟ್ಟಣಗಳು, ತೆಂಗಿನಕಾಯಿ (ನಾರಿರುವುದು) – 2, ವೀಳೆಯದೆಲೆ – 11, ಅಡಿಕೆ – 100 ಗ್ರಾಂ, ಬಾಳೆಹಣ್ಣು – 11, ಅರಿಶಿನದ ಕೊಂಬು – 5, ಖರ್ಜೂರ – 5, ಬೆಲ್ಲದ ಉಂಡೆ – 5, ಒಂದು ಮೊಳ ಬಿಳಿ ಹೂವು, ಬೆಳ್ಳಿ ಲೋಟ – 1 ಮತ್ತು ಇವೆಲ್ಲಾ ಸಾಮಗ್ರಿಗಳನ್ನು ಕಟ್ಟಲು 1½ ಮೀಟರ್ ಉದ್ದದ ಬಿಳಿ ಬಟ್ಟೆ ಮತ್ತು ಸುತ್ತಿ ಗಂಟು ಹಾಕಲು ಬಿಳಿ ದಾರ.

**ವಧುವಿನ ಗಂಟಿಗೆ ಬೇಕಾಗುವ ಸಾಮಗ್ರಿಗಳು:**

1 ಹುರಿಗಡಲೆ (ಕಡ್ಲೆ ಪಪ್ಪು) 2½ ಕೆ.ಜಿ., ಅರಿಶಿನ, ಕುಂಕುಮಕ್ಕೆಂದು ಬಟ್ಟಲುಗಳು – ಎರಡು, ತಳದ ಕೊಬ್ಬರಿ ಬಟ್ಟಲು – 2, ವೀಳೆಯದೆಲೆ – 11, ಅಡಿಕೆ – 100 ಗ್ರಾಂ ಬಾಳೆಹಣ್ಣು – 11, ಅರಿಶಿನದ ಕೊಂಬು – 5, ಖರ್ಜೂರ – 5, ಬೆಲ್ಲದ ಉಂಡೆ – 5, ಒಂದು ಮೊಳ ಬಿಳಿ ಹೂವು, ಒಂದು ಬೆಳ್ಳಿ ಲೋಟದಲ್ಲಿ ಸ್ವಲ್ಪ ಪಂಚಧಾನ್ಯ (ಅಕ್ಕಿ, ಗೋಧಿ, ತೊಗರಿ, ಹೆಸರು ಮತ್ತು ಕಡಲೆ), 11 ರೂಪಾಯಿಯ ದಕ್ಷಿಣೆಯ ಜೊತೆಗೆ ಒಂದು ಲಕ್ಷ್ಮೀನಾರಾಯಣರ ವಿಗ್ರಹವನ್ನಿಟ್ಟು ಒಂದು ಅರಿಶಿನದ ಬಟ್ಟೆಯಲ್ಲಿ ಭದ್ರವಾಗಿ



ಸುತ್ತಬೇಕು. ಹಸಿರು ಬಣ್ಣದ ರವಿಕೆ ಬಟ್ಟೆ – 1, ತಟ್ಟೆ, ಲೋಟ ಮತ್ತು ಚಮಚ – ತಲಾ ಎರಡು ಮತ್ತು ಇವೆಲ್ಲಾ ಸಾಮಗ್ರಿಗಳನ್ನು ಕಟ್ಟಲು 1½ ಮೀಟರ್ ಉದ್ದದ ಬಿಳಿ ಬಟ್ಟೆ ಮತ್ತು ಸುತ್ತಿ ಗಂಟು ಹಾಕಲು ಬಿಳಿ ದಾರ ಹಾಗೂ ಹಣ್ಣುಗಳು, ಸಿಹಿ ಮತ್ತು ಖಾರದ ತಿಂಡಿ – ತಲಾ ಮೂರು ತರಹದ್ದು.

***ಸೂಚನೆ:***

1. ವಧುವು ತನ್ನ ಬಾಲ್ಯ ಮತ್ತು ಯೌವನದ ದಿನಗಳನ್ನು ತವರು ಮನೆಯಲ್ಲಿ ಸಂತೋಷವಾಗಿ ತನ್ನ ಇಚ್ಛೆಯಂತೆ ತಂದೆ ತಾಯಿಯರ ಮಾರ್ಗದರ್ಶನದಲ್ಲಿ ಕಳೆದು ಈಗ ತವರಿನ ಮನೆಯವರನ್ನು ಬಿಟ್ಟು ಒಬ್ಬಳೇ ತನ್ನ ಗಂಡನ ಮನೆಗೆ ಹೋಗುವಾಗ, ತವರಿನವರ ದುಃಖ ಮತ್ತು ತನ್ನ ದುಗುಡ ಒಂದೆಡೆಯಾದರೆ ಅತ್ತ ಗಂಡನ ಮನೆಯವರಿಗೆ ಸೊಸೆಯ ಬರುವಿಕೆಯ ಸಂತೋಷಗಳ ದ್ವಂದ್ವತೆಯನ್ನು ತೂಗಿಸಲೆಂದು ವಧುವನ್ನು ವರನ ಮನೆಗೆ ಕಳುಹಿಸಿದ ಮೊದಲನೆ ದಿನ ವಧುವು ವರನ ಮನೆಯಲ್ಲಿ ಊಟ ಮಾಡಬಾರದ ಕಾರಣ ರಾತ್ರಿಯೂಟ ಮತ್ತು ಒಂದು ಚೊಂಬಿನಲ್ಲಿ ನೀರನ್ನು ವಧುವಿನ ಮನೆಯಿಂದಲೇ ತರಬೇಕು.

2. ವಧುವರರು, ವರನ ಮನೆಯನ್ನು ತಲುಪುವಷ್ಟರಲ್ಲಿ, ಅವರ ಹಾಸಿಗೆ, ದಿಂಬು ಮತ್ತು ಹೊದಿಕೆಗಳ ಜೊತೆಗೆ ವಧುವಿಗೆ ತವರು ಮನೆಯವರು ಕೊಡುವ ಕಪಾಟನ್ನು (ವಸ್ತ್ರಗಳನ್ನಿಡಲು) ಮೊದಲೇ ತಲುಪಿಸಿರಬೇಕು.

**ವಧು ವರರನ್ನು ವರನ ಮನೆಯಲ್ಲಿ ಬರಮಾಡಿಕೊಳ್ಳುವಿಕೆ:**

1 ಗಂಟುಗಳ ಸಮೇತ ವರನ ಮನೆಯ ಬಾಗಿಲಿಗೆ ಬಂದ ವಧು ವರರಿಗೆ ಮುತ್ತೈದೆಯು ಆರತಿ ಹಾಡು ಹಾಡುತ್ತಾ ಕೆಂಪು ನೀರಿನ ಆರತಿ ಮಾಡಿದ ಮೇಲೆ ಅವರ ಹಣೆಗೆ ಕೆಂಪು ನೀರಿನ ತಿಲಕ ಇಟ್ಟು ಅದನ್ನು ಅವರ ಮುಂದೆ ಅಡ್ಡಲಾಗಿ ಸುರಿದು ಇಬ್ಬರ ಪಾದಗಳನ್ನು ನೀರಿನಿಂದ ತೊಳೆಯಬೇಕು.

1 ನಂತರ ವರನ ಸೋದರಮಾವನವರು ಒಂದು ತೆಂಗಿನಕಾಯಿಯಿಂದ ಇಬ್ಬರಿಗೂ ಇಳೇ ತೆಗೆದು ಕಾಯಿಯನ್ನು ಒಡೆಯಬೇಕು.

**ವಧುವು ಸೇರು ತಳ್ಳುವ ಶಾಸ್ತ್ರ:**

ಪ್ರಥಮ ಬಾರಿಗೆ ತನ್ನ ಗಂಡನ ಮನೆಯನ್ನು ಪ್ರವೇಶ ಮಾಡುತ್ತಿರುವ ನವ ವಧುವು ಮನೆಯ ಮುಂಬಾಗಿಲಿನ ಹೊಸ್ತಿಲ ಮೇಲಿರಿಸಿರುವ ಅಕ್ಕಿ ತುಂಬಿದ ಸೇರನ್ನು, ಅದರ ಮೇಲಿರಿಸಿರುವ ಬೆಲ್ಲದಚ್ಚಿನ ಸಮೇತ ತನ್ನ ಬಲಗಾಲಿನಿಂದ ತಳ್ಳಿ ಮನೆಯೊಳಗೆ ಅಡಿಯಿಡುವ ಮುಖ್ಯೋದ್ದೇಶ, ನವವಧುವನ್ನು ಲಕ್ಷ್ಮೀಸ್ವರೂಪಳಾಗಿ ಪರಿಗಣಿಸಿ, ಆಕೆಯು ಅಕ್ಕಿಯ ಜೊತೆಗೆ ಬೆಲ್ಲವನ್ನು ಮನೆಯಲ್ಲಿ ಹರಡುವ ಮೂಲಕ ಮನೆಯಲ್ಲಿ ಸುಖ, ಶಾಂತಿ ಮತ್ತು ನೆಮ್ಮದಿಗಳು ನೆಲಸಿ ಧನ ಧಾನ್ಯಗಳ ಸಮೃದ್ಧಿಯಾಗಲಿ ಎಂಬ ಆಶಯ.

**ವಿಧಾನ:**

- ಇಳೇ ತೆಗೆದ ತೆಂಗಿನಕಾಯಿಯನ್ನು ಒಡೆದ ಮೇಲೆ ವಧುವರರನ್ನು ಮನೆಯೊಳಗೆ ಕರೆತರಬೇಕು.
- ವಧುವರರನ್ನು, ಉತ್ತರ ಅಥವಾ ಪೂರ್ವಾಭಿಮುಖವಾಗಿ ಹಾಕಿ, ಬಿಳಿಯ ವಸ್ತ್ರವನ್ನು ಹಾಸಿರುವ ಮಣೆಗಳ ಮೇಲೆ ಬಲಗಡೆಯಿಂದ ಬರುವಂತೆ ತಿಳಿಸಿ, ಆ ಮಣೆಗಳ ಮೇಲೆ ಕೂರಿಸಬೇಕು.
- ಆಮೇಲೆ, ಮಣೆಯ ಎರಡೂ ಬದಿಗಳಲ್ಲಿ ಇರಿಸಿರುವ ದೀಪಸ್ತಂಭಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ನಂತರ, ವಧುವನ್ನು ಹೊರತು ಪಡಿಸಿ ಉಳಿದವರೆಲ್ಲರಿಗೆ ನಿಂಬೆ ಹಣ್ಣಿನ ಪಾನಕವನ್ನು ಕೊಡಬೇಕು. (ವಧುವಿಗೆ ನೆರೆ ಮನೆಯಿಂದ ಅಥವಾ ಅಂಗಡಿಯಿಂದ ತಂದ ಪಾನಕವನ್ನು ಕೊಡಬೇಕು).
- ಅವರೆಲ್ಲರೂ ಪಾನಕ ಕುಡಿದ ಬಳಿಕ ಮುತ್ತೈದೆಯೊಬ್ಬರು ದೀಪಸ್ತಂಭಗಳಿಗೆ, ವಧುವರರಿಗೆ ಅರಿಶಿನ ಕುಂಕುಮ ಹಚ್ಚಿ, ಹೂವನ್ನು ಕೊಡಬೇಕು.
- ವಧುವರರು ತಂದಿರುವ ಎರಡು ಕಡ್ಡೆಬೆಲ್ಲದ ಗಂಟುಗಳನ್ನು ಪ್ರತ್ಯೇಕ ಬೇಸಿನ್ನಲ್ಲಿ ಪಡೆದು ದೇವರ ಕೋಣೆಯಲ್ಲಿ ಇರಿಸಬೇಕು.
- ಇದಾದ ನಂತರ, ವಧುವರರಿಬ್ಬರು ಎದ್ದು ಚಪ್ಪರದ ಪೂಜೆಯನ್ನು ಮಾಡಿ ಕಟ್ಟಿರುವ ಮಾವಿನ ಕುಡಿಯಲ್ಲಿ ಒಂದನ್ನು ಕಿತ್ತು ಚಪ್ಪರದ ಮೇಲೆ ಎಸೆಯಬೇಕು.
- ನಂತರ ದೇವರ ಕೋಣೆಯಲ್ಲಿ ದೇವರ ಪೂಜೆಯನ್ನು ಮಾಡಿದ ಮೇಲೆ ಮನೆಯಲ್ಲಿ ನೆರೆದಿರುವ ಎಲ್ಲಾ ಹಿರಿಯರ ಪಾದಗಳಿಗೆ ನಮಸ್ಕರಿಸಿ .ಅವರ ಆಶೀರ್ವಾದವನ್ನು ಅಕ್ಷತೆಯ ಸಮೇತ ಪಡೆಯಬೇಕು.



ಇದಾದ ನಂತರ, ದೇವರ ಕೋಣೆಯಲ್ಲಿ ಇರಿಸಿದ, ವಧುವರರು ತಂದಿರುವ ಕಡ್ಡೆಬೆಲ್ಲದ ಗಂಟುಗಳನ್ನು ಬಿಚ್ಚಿ ಅವುಗಳಲ್ಲಿರುವ ಲಕ್ಷ್ಮೀನಾರಾಯಣರ ವಿಗ್ರಹವನ್ನು ತೆಗೆದು ಒಂದು ತಟ್ಟೆಯಲ್ಲಿಟ್ಟು ಅದಕ್ಕೆ ಹಾಲು, ಜೇನುತುಪ್ಪ, ತುಪ್ಪ, ಮೊಸರು, ಸಕ್ಕರೆ, ಬಾಳೆಹಣ್ಣು ಮತ್ತು ಎಳನೀರಿನಿಂದ ಅಭಿಷೇಕವನ್ನು ಮಾಡಿ ಅರಿಶಿನ ಕುಂಕುಮ, ಹೂವನ್ನಿಟ್ಟು ಗಂಧದಕಡ್ಡಿ ಉರಿಸಿ, ತೆಂಗಿನಕಾಯಿಯನ್ನು ಒಡೆದು ಕರ್ಪೂರದ ಆರತಿ ಮಾಡಬೇಕು.

ನಂತರ ಅಭಿಷೇಕದ ಪ್ರಸಾದವನ್ನು ನೆರೆದಿರುವ ಎಲ್ಲರಿಗೂ ಹಂಚಬೇಕು.

**ವಿವಾಹಕ್ಕೆ ಸಿದ್ಧಪಡಿಸಿಕೊಳ್ಳಬೇಕಾದ ಸಾಮಗ್ರಿಗಳು:**

ದೇವರ ಭಾವಚಿತ್ರಗಳು (ಲಕ್ಷ್ಮೀ, ಸರಸ್ವತಿ, ಗಣಪತಿ ಮತ್ತು ಮನೆದೇವರು) – ತಲಾ ಒಂದು, ಲಗ್ನ ಪತ್ರಿಕೆಗಳು –2, ಅರಿಶಿನ ಮತ್ತು ಕುಂಕುಮ –ತಲಾ ½ ಕೆ.ಜಿ, ಅಕ್ಷತೆ – 2 ಕೆ.ಜಿ, ಅರಿಶಿನದ ಕೊಂಬು / ಕಂಕಣದ ಕೊಂಬುಗಳು – ½ ಕೆ.ಜಿ, 12 ತುಂಡುಗಳು, ಕರ್ಪೂರ –200 ಗ್ರಾಂ, ಗಿಡ್ಡವಾದ ತುಪ್ಪದ ಬತ್ತಿಗಳು – 1 ಹಿಡಿಯಷ್ಟು, ಉದ್ದವಾದ ತುಪ್ಪದ ಬತ್ತಿಗಳು – 1 ಹಿಡಿಯಷ್ಟು, ಗಂಧದ ಕಡ್ಡಿಗಳು – 1 ದೊಡ್ಡ ಪೊಟ್ಟಣ, ವೀಳೆಯದೆಲೆ – 25 ಕಟ್ಟುಗಳು, ಬಟ್ಟಲು ಅಡಿಕೆ – 1 ಕೆ.ಜಿ, ಅಡಿಕೆ ಚೂರುಗಳು – 1 ಕೆ.ಜಿ, ಅಡಿಕೆ ಪುಡಿ – 1 ದೊಡ್ಡ ಪೊಟ್ಟಣ, ಖರ್ಜೂರ 1/4 ಕೆ.ಜಿ, ಒಣದ್ರಾಕ್ಷಿ – ½ ಕೆ.ಜಿ, ಜೇನುತುಪ್ಪ – 1/4 ಕೆ.ಜಿ, ಜನಿವಾರ – 11 ಜೊತೆ, ಅರಳೀ ಸೌದೆ (ಪುಳ್ಳೆ) – ಸ್ವಲ್ಪ, ಅರಳೀ ರೆಂಬೆ – ಸ್ವಲ್ಪ, ಅಕ್ಕಿ ಹಿಟ್ಟು – 1 ಕೆ.ಜಿ, ನೆಲ್ಲು ಅವಲು – 1 ಲೀಟರ್. ದಾರದ ಉಂಡೆ – 2, ತುಪ್ಪ – ½ ಕೆ.ಜಿ, ಜೀರಿಗೆ – 100 ಗ್ರಾಂ, ಉಂಡೆ ಬೆಲ್ಲ – 1 ಕೆ.ಜಿ, ದೀಪಸ್ತಂಭಗಳು – 2 ಜೊತೆ, ದೀಪಗಳಿಗೆ ಎಣ್ಣೆ – 1 ಲೀಟರ್, ಬತ್ತಿಗಳು – ಸ್ವಲ್ಪ ಮತ್ತು ಬೆಂಕಿ ಪೊಟ್ಟಣ –2, ಮಣೆ –6, ಕಳಸ, ಘಂಟೆ ಮತ್ತು ಆರತಿ ತಟ್ಟೆ – ತಲಾ ಒಂದೊಂದು, ತೀವಟಿಗೆ (ಮೂರು ಕಾಲಿನ ಮಣೆ) –1, ಸ್ಟೀಲ್ ತಟ್ಟೆಗಳು –10, ಬಳೆ ಬಿಚ್ಚೋಲೆ –2, ಬಾಚಣಿಗೆ ಮತ್ತು ಸೀರಿಣಿಗೆ – ತಲಾ ಒಂದು, ಅರಿಶಿನ ಕುಂಕುಮದ ಭರಣಿಗಳು – ತಲಾ 2, ನಿಂಬೆ ಹಣ್ಣು – 10, ಬಿಳಿ ಚಿಟ್ಟು – 5 / ತೊಂಡ್ಲ –1, ಬಿಳಿ ಬಟ್ಟೆ (ಒಂದು ಮೀಟರ್ ಉದ್ದದ್ದು) –2, ಬಾಸಿಂಗ 1 ಜೊತೆ, ಚಿಕ್ಕ ಕನ್ನಡಿ –

1, ವಿಭೂತಿ ಉಂಡೆ –1, ಉಂಡೆ ಬೆಲ್ಲ – 100, ಅಕ್ಕಿ –20 ಕೆ.ಜಿ, ಪಾವಡದ ತಟ್ಟೆ 1, ಕೊಬ್ಬರಿ ಬಟ್ಟಲು – 20, ಹರಣೆ ಕುಡಿಕೆಗಳು –5, ದರ್ಬೆ – ಸ್ವಲ್ಪ, ಗಂಧದ ಕಲ್ಲು ಮತ್ತು ಗಂಧದ ಚಕ್ಕೆ – ತಲಾ ಒಂದು, ತಂಬಿಗೆ (ಕಳಸವನ್ನಿಡಲು) –1, ಲೋಟಗಳು – 6, ಮಾವಿನ ಸೊಪ್ಪು – ಸ್ವಲ್ಪ ಮತ್ತು ಬಾಳೆ ಮರ – 1 ಜೊತೆ, ಮಣೆಗಳ ಮೇಲೆ ಹಾಸುವ ಬಿಳಿಯ ಬಟ್ಟೆ – 4, ಬೆಳ್ಳಿ ಮಿಳ್ಳೆ (ಧಾರೆಗೆಂದು) –1, ನವಧಾನ್ಯ (ಅಕ್ಕಿ, ಗೋಧಿ, ತೊಗರಿ, ಹೆಸರು, ಉದ್ದು, ಕಡಲೆ, ಅವರೆ, ಕರೀಎಳ್ಳು ಮತ್ತು ಹುರುಳಿ ಕಾಳುಗಳು) –ತಲಾ ಒಂದು ಹಿಡಿಯಷ್ಟು, ಇಸ್ತ್ರಿ ಎಲೆ (ಊಟದ ಎಲೆ) – 1 ಕಟ್ಟು, ದಕ್ಷಿಣೆಗೆಂದು ಚಿಲ್ಲರೆ ಕಾಸು – ಸುಮಾರು 200 ರೂಪಾಯಿಗಳು, ದೊನ್ನೆ – 1 ಕಟ್ಟು, ವರನ ಪಾದ ತೊಳೆಯಲೆಂದು ಒಂದು ದೊಡ್ಡ ತಟ್ಟೆ ಮತ್ತು ಚೊಂಬು, ಮಾಂಗಲ್ಯ, ಕೊಳಪೆ, ಗುಂಡು, ಬೆಳ್ಳಿ ಬಳೆ, ಕಾಲುಸುತ್ತು ಮತ್ತು ಒಡವೆಗಳು – 1 ಜೊತೆ, ನಿಶ್ಚಿತಾರ್ಥದ ಸೀರೆ, ಲಗ್ನದ ಸೀರೆ, ಮೇಲು ಸೀರೆ, ಉಡುಗೊರೆ ಸೀರೆ ಮತ್ತು ಕಣಗಳು –6, ಪಂಚೆ –2 ಜೊತೆ, ಶಲ್ಯ –2, ಬಿಳಿ ಲಾಂಕ್ಲಾತ್ (ವರನ ಪೇಟಕ್ಕೆಂದು) – 3.90 ಮೀಟರ್, ಜಮಖಾನ –6, ಚಾಪೆಗಳು – 2, ಛತ್ರಿ (ಕೊಡೆ) –1, ಟೋಪಿ – 3, ಶಾಲು –2, ಕೋಲು ಮತ್ತು ಬೀಸಣಿಗೆ ತಲಾ ಒಂದು, ಕಾಗದದ ಚೀಲಗಳು (ತಾಂಬೂಲಕ್ಕೆಂದು) – ಆಹ್ವಾನಿತರ ಸಂಖ್ಯೆಗನು ಗುಣವಾಗಿ, ಹೂವಿನ ಮಾಲೆ (ಸಂಬಂಧ ಮಾಲೆ) –2, ಹೂವಿನ ಹಾರ – 11 ಜೊತೆ, ಬಟ್ಟನ್ಸ್ ಹೂವುಗಳು – 2 ಕೆ.ಜಿ, ಪನ್ನೀರು ಮತ್ತು ಪನ್ನೀರು ಧಾನಿ – 1, ಗಂಧದ ಬಟ್ಟಲುಗಳು –2, ಪಂಚಪತ್ರೆ ಹಾಗೂ ಉದ್ಧರಣೆ – ತಲಾ ಒಂದು, ಸೂಟು ಬೂಟು ಹಾಗೂ ವರನ ವಸ್ತ್ರಗಳು – 1 ಜೊತೆ, ಹೋಳಿಗೆ ಹೆಂಚು (ಹೋಮದ ಕುಂಡಕ್ಕೆ) – 1, ಟ್ರೇಗಳು –6 ಮತ್ತು ಬೇಸಿನ್ಗಳು – 4, ಪುರೋಹಿತರು – ಒಬ್ಬರು, ಓಲಗದವರು – 1 ಗುಂಪು, ನಾಂದಿಶಾಸ್ತ್ರಕ್ಕೆ ಕುಳಿತುಕೊಳ್ಳುವವರಿಗೆ ವಸ್ತ್ರಗಳು – ಪಂಚೆ ಮತ್ತು ಶಲ್ಯ – ಒಂದು ಜೊತೆ, ವರನು ನಾಗರ ಶಾಸ್ತ್ರಕ್ಕೆ ಹೋಗುವಾಗ ಉಡಿಸಲು ಪಂಚೆ ಮತ್ತು ಶಲ್ಯ – ಒಂದು ಜೊತೆ, ಹಾಸಿಗೆ, ದಿಂಬು ಮತ್ತು ಹೊದಿಕೆಗಳು – ಎರಡು ಜೊತೆ, ಕುರ್ಚಿಗಳು – ಆಹ್ವಾನಿತರ ಸಂಖ್ಯೆಗನುಗುಣವಾಗಿ, ಆರತಿ ಬೆಳಗಲು ಏಕಾರತಿ –2, ಧಾರೆಗೆ ಬಂಗಾರದ ಹಣ – 1, ವೈರು, ಹೊಲ್ಡರ್ಗಳು, ಅಡಾಪ್ಟರ್ಗಳು, ಬಲ್ಬು ಮತ್ತು ಇನ್ಸುಲೇಷನ್ ಟೇಪು – 1 ಜೊತೆ, ಮೇಣದ ಬತ್ತಿ – 10, ಪೆಟ್ರೋಮ್ಯಾಕ್ಸ್ – 1, ನಾಲ್ಕು ಬತ್ತಿಗಳು ಮತ್ತು ಬೆಂಕಿ ಪೊಟ್ಟಣ – 1,



ಟಾರ್ಚ್ಗಳು – 2, ಸೀಮೇಸುಣ್ಣ – 2, ಹರಳೆಣ್ಣೆ – 100 ಗ್ರಾಂ, ಕೊಬ್ಬರಿ ಎಣ್ಣೆ – 100 ಗ್ರಾಂ, ಸ್ನೋ, ಪೌಡರ್, ಬಾಚಣಿಗೆ ಮತ್ತು ಕನ್ನಡಿ – 1 ಜೊತೆ, ಸೀಗೇಕಾಯಿ ಪುಡಿ, ಮೈ ಸಾಬೂನು, ಬಟ್ಟೆ ಸಾಬೂನು, ಕೈ ವಸ್ತ್ರಗಳು (ಟವಲ್ಲು) ಮತ್ತು ಪಂಚೆಗಳು – ಒಂದು ಜೊತೆ, ಒಸಗೆಗೆ ಬೇಕಾದ ಸಾಮಗ್ರಿಗಳು, ಹಣ್ಣುಗಳು, ಕಡ್ಲೆ ಪಪ್ಪು, ಬೆಲ್ಲ, ಗಂಟು ಕಟ್ಟಲು ಬಟ್ಟೆಗಳು, ಬಾಳೆಕಂದು, ಮಾವಿನ ಸೊಪ್ಪು ಕಟ್ಟಲು ಹಗ್ಗ, ಪಾತ್ರೆ ಇಳಿಸಲು ಹಳೇಬಟ್ಟೆಗಳು, ಹಗ್ಗ, ಸೌದೆ, ಸೀಮೇ ಎಣ್ಣೆ, ಸಕ್ಕರೆ, ಕಾಫೀಪುಡಿ, ಟೀ ಪುಡಿ, ಹಾಲು, ಮೊಸರು, ತಾಂಬೂಲಕ್ಕೆ ಸುಣ್ಣ, ಅರಿಶಿನ ಕುಂಕುಮಕ್ಕೆ ಬಟ್ಟಲುಗಳು –4, ರಂಗೋಲಿ ಪುಡಿ ಮತ್ತು ಬೀಗಗಳು.

**ಕರಿಮಣಿ ಶಾಸ್ತ್ರ:**

ಆದಿಶಂಕರಾಚಾರ್ಯರು ರಚಿಸಿದ ಸೌಂದರ್ಯ ಲಹರಿಯಲ್ಲಿ ಶಿವನು ಪಾರ್ವತಿಗೆ ಕರಿಮಣೀ ಸಮೇತವಾದ ಮಂಗಲಸೂತ್ರವನ್ನು ಕಟ್ಟಿದನೆಂದಿದೆ. ಲಲಿತಾಸಹಸ್ರನಾಮದಲ್ಲೂ ಮಾಂಗಲ್ಯಧಾರಣವನ್ನು ಪ್ರಸ್ತಾಪಿಸಿದೆ. ಹೀಗೆ ಅನಾದಿ ಕಾಲದಿಂದ ಅನುಸರಿಸಿಕೊಂಡು ಬಂದಿರುವ ಕರಿಮಣಿಗಳನ್ನು ಧರಿಸುವಿಕೆ, ವಿವಾಹಿತ ಮಹಿಳೆಯ ಮೇಲೆ ಯಾವುದೇ ಕೆಟ್ಟದೃಷ್ಟಿ ಬೀಳದಿರಲೆಂದೇ ಮಂಗಲಸೂತ್ರದಲ್ಲಿ ಕಪ್ಪು ಬಣ್ಣದ ಮಣಿಗಳನ್ನು ಸೇರಿಸುತ್ತಾರೆ. ಕಪ್ಪು ಮಣಿಗಳಿಗೆ ಋಣಾತ್ಮಕ ಶಕ್ತಿಕ್ಷೇತ್ರವನ್ನೆಲ್ಲಾ ಹೀರಿಕೊಂಡು ಅದು ಆ ಹೆಣ್ಣು ಮಗಳಿಗೆ ಮತ್ತು ಅವಳ ಕುಟುಂಬಕ್ಕೆ ತಗುಲದಂತೆ ಮಾಡುವ ಗುಣವಿದೆ. ಇನ್ನು ಕರಿಮಣಿಗಳನ್ನು ಪೋಣಿಸುವ ವಿಧಾನವನ್ನು ಗಮನಿಸಿದರೆ ದಾರಕ್ಕೆ ಒಂದೊಂದಾಗಿ ಪೋಣಿಸುವ ಮಣಿಗಳು ಕಡೆಗೆ ಒಂದು ಸುಂದರ ಸರಮಾಲೆಯಾಗುವುದೊ ಅಂತೆಯೇ ಹೆಣ್ಣು ತನ್ನ ಗಂಡನ ಕುಟುಂಬದ ಸೂತ್ರದೊಂದಿಗೆ ಅಷ್ಟೇ ಸುಲಲಿತವಾಗಿ ಬೆರೆತು ಹೊಂದಿಕೊಂಡು ಸಂಸಾರವೆಂಬ ಸರದಲ್ಲಿ ಮಿನುಗಬೇಕು ಎಂಬ ಆಶಯವಿದೆ. ಕರಿಮಣಿ ಸರದ ಮಹತ್ವವನ್ನು ವೈಜ್ಞಾನಿಕ ದೃಷ್ಟಿಯಿಂದ ಅವಲೋಕಿಸಿದರೆ ಆಕೆಯ ಎದೆಯ ಭಾಗದಲ್ಲಿ ಉಂಟಾಗುವ ಉಷ್ಣತೆಯನ್ನು ಹೀರಿಕೊಂಡು ದೇಹಕ್ಕೆ ತಂಪನ್ನೀಯುವುದಲ್ಲದೇ ಮತ್ತೊಂದು ಉಪಯುಕ್ತ ಅಂಶವೆಂದರೆ ಹಾಲುಣಿಸುವ ತಾಯಿಯ ಎದೆ ಹಾಲಿನ ಉಷ್ಣತೆಯನ್ನು ಹೀರಿಕೊಂಡು ಎದೆಹಾಲು ಕೆಡದಂತೆಯೂ ಮತ್ತು ಶಿಶುವಿಗೆ ಹಾಲುಣ್ಣಲು ಅನುಕೂಲವಾದ ಸಮ ಉಷ್ಣತೆಯಲ್ಲಿರಿಸಲು ಸಹಾಯಕವಾಗಿದೆ.

**ವಿಧಾನ:**

ಈ ಕಾರ್ಯವನ್ನು ಹೆಣ್ಣಿನ ತವರು ಮನೆಯವರು ಆಕೆಯ ಮದುವೆಯಾಗಿ ಒಂದು ತಿಂಗಳು ತುಂಬುವುದರ ಒಳಗೆ ನೆರವೇರಿಸಬೇಕು.

- ಒಂದು ಶುಭದಿನವನ್ನು ಗೊತ್ತುಪಡಿಸಿಕೊಂಡು ಕನಿಷ್ಠ ಒಂದು ರಾತ್ರಿಯಾದರೂ ತವರು ಮನೆಯಲ್ಲಿ ಇರಿಸಿಕೊಳ್ಳುವಂತೆ ಹೆಣ್ಣು ಮಗಳನ್ನು ಹಿಂದಿನ ದಿನ ಕರೆತರಬೇಕು
- ಮಾರನೆಯ ದಿನ ಐವರು ಮುತ್ತೈದೆಯರೊಂದಿಗೆ ಮಗಳನ್ನು ಅಕ್ಕಸಾಲಿಯ ಅಂಗಡಿಗೆ ಕರೆದುಕೊಂಡು ಹೋಗಿ ಅಲ್ಲಿ ಖರೀದಿಸಿದ ಕರಿಮಣಿಗಳಿಗೆ ಮುತ್ತೈದೆಯರೆಲ್ಲರು ನಮಸ್ಕರಿಸಬೇಕು.
- ಆಮೇಲೆ ಅಕ್ಕಸಾಲಿಗರ ಕೈಯಲ್ಲಿ ಕರಿಮಣಿ, ಗುಂಡು ಮತ್ತು ಹವಳಗಳೊಂದಿಗೆ ತಾಳಿಯನ್ನು ಸೇರಿಸಿ ಮಾಂಗಲ್ಯ ಸರವನ್ನು (ಕುಟುಂಬದ ಆರ್ಥಿಕ ಸ್ಥಿತಿಯ ಮೇರೆಗೆ ಚಿನ್ನದ ಸರ ಅಥವಾ ಅರಿಶಿನದ ದಾರದ ಸರ) ಸಿದ್ಧಪಡಿಸಿದ ಮೇಲೆ ಮಗಳು ಆ ಸರಕ್ಕೆ ಮೂರು ಬಾರಿ ನಮಸ್ಕರಿಸಿ ತನ್ನ ಕೊರಳಿಗೆ ಹಾಕಿಕೊಳ್ಳಬೇಕು.
- ನಂತರ ಅಲ್ಲಿ ನೆರೆದಿರುವ ಮುತ್ತೈದೆಯರಿಗೆಲ್ಲಾ ಅರಿಶಿನ ಕುಂಕುಮ, ಅಕ್ಷತೆ ಮತ್ತು ಹೂವನ್ನು ಕೊಟ್ಟು ವೀಳೆಯದೆಲೆ –2, ಅಡಿಕೆ –2 ಮತ್ತು ಬಾಳೆಹಣ್ಣು –2 ಇರುವ ತಾಂಬೂಲವನ್ನು ಒಪ್ಪಿಸಿ ಅವರ ಪಾದಗಳಿಗೆರಗಿ ನಮಸ್ಕರಿಸಬೇಕು. ಪ್ರತಿಯಾಗಿ ಮುತ್ತೈದೆಯರು ಆಕೆಗೆ ಅಕ್ಷತೆಯ ಸಮೇತ ಆಶೀರ್ವಾದವನ್ನು ದಯಪಾಲಿಸಬೇಕು.
- ಕಾರ್ಯಕ್ರಮ ನಡೆಯುವ ದಿವಸ ಮಗಳು ಮತ್ತು ಅಳಿಯನ ಮನೆಯವರು ಅಲ್ಲದೇ ಎರಡೂ ಕುಟುಂಬಗಳ ಬಂಧು ಮಿತ್ರರನ್ನು ಆಹ್ವಾನಿಸಿ ಹಬ್ಬದಡುಗೆಯನ್ನು ಯಥಾಶಕ್ತಿ ಮಾಡಿ ಬಡಿಸಿ ಸಹಭೋಜನ ಮಾಡಿ ಆನಂದಿಸುವುದು.
- ಶಾಸ್ತ್ರ ಮುಗಿದ ಬಳಿಕ ಮಗಳನ್ನು ತನ್ನ ಗಂಡನ ಮನೆಗೆ ಕಳುಹಿಸುವಾಗ ಹೊಸ ಸೀರೆ, ರವಿಕೆ ಬಟ್ಟೆ ಮತ್ತು ಸಿಹಿ, ಖಾರದ ತಿಂಡಿಗಳ ಜೊತೆಗೆ ಹಲವು ಹಣ್ಣುಗಳನ್ನು ಕೊಡತಕ್ಕದ್ದು.

**ಮಗಳು ಮದುವೆಯಾದ ವರ್ಷದೊಳಗೆ ಗರ್ಭಿಣಿಯಾಗದಿದ್ದರೆ:**

ಮದುವೆಯ ಶಾಸ್ತ್ರವು ಮುಗಿದ ಬಳಿಕ ಆದಷ್ಟು ಬೇಗ ನವದಂಪತಿಗಳಿಂದ ಒಂದು ಹೊಸ ಜೀವವನ್ನು ನಿರೀಕ್ಷಿಸುವುದು ಎರಡೂ ಕುಟುಂಬಗಳ ಮತ್ತು ಬಂಧು ಮಿತ್ರರ ಸಹಜವಾದ ಆಶಯ. ವರ್ಷ ಕಳೆಯುವುದರೊಳಗೆ



ಕಾರಣಾಂತರಗಳಿಂದ ದಂಪತಿಗಳಿಗೆ ಸಂತಾನ ಭಾಗ್ಯವು ಫಲಿಸದಿದ್ದರೆ ಆ ದಂಪತಿಗಳು ಎಲ್ಲೇ ಹೋಗಲಿ ಬಂಧು ಮಿತ್ರರು ಅವರನ್ನುದ್ದೇಶಿಸಿ "ಶುಭಸಮಾಚಾರವೇನು ಇಲ್ಲವೇ?" ಎಂದು ಹಾಕಿದ ಪ್ರಶ್ನೆಯು ಸಹಜವಾಗಿ ದಂಪತಿಗಳನ್ನು ಕಾಡುತ್ತದೆ. ಹಾಗೆ ಸತತವಾಗಿ ಪ್ರಶ್ನೆಗಳನ್ನು ಕೇಳಿ ಉತ್ತರ ಕೊಡಲು ನೊಂದಿರುವ ಜೀವಗಳಿಗೆ ಸಾಂತ್ವಾನವನ್ನು ನೀಡಿ ಮಾನಸಿಕವಾಗಿ ಹುಮ್ಮಸ್ಸನ್ನು ಹುಟ್ಟುಹಾಕುವ ನಿಟ್ಟಿನಲ್ಲಿ ಪ್ರಾಚೀನರು ಕಂಡುಕೊಂಡ ಪರಿಹಾರವೇ ದಂಪತಿಗಳನ್ನು ತವರಿಗೆ ಆಹ್ವಾನಿಸಿ ಅವರ ಮಡಿಲನ್ನು ಕಡ್ಲೆಬೆಲ್ಲದ ಗಂಟುಗಳಿಂದ ತುಂಬಿ ಅತೀ ಶೀಘ್ರದಲ್ಲಿ ಸಂತಾನ ಪ್ರಾಪ್ತಿಯಾಗಿ ಅವರ ಮಡಿಲು ತುಂಬಲಿ ಎಂದು ಹರಸುವಿಕೆ.

**ಸಿದ್ಧತೆ:**

ಕಾರ್ಯಕ್ರಮಕ್ಕೆ ಶುಭ ದಿನವನ್ನು ನಿಗದಿ ಪಡಿಸಿದ ಮೇಲೆ, ತವರಿನ ಮತ್ತು ಬೀಗರ ಮನೆಯವರ ಬಂಧು ಬಳಗಕ್ಕೆ ಆಹ್ವಾನವನ್ನು ನೀಡಬೇಕು

**ಅಳಿಯನ ಮಡಿಲು ತುಂಬಲು ಬೇಕಾದ ಗಂಟಿನ ಸಾಮಗ್ರಿಗಳು:**

ಹುರಿಗಡಲೆ (ಕಡ್ಲೆ ಪಪ್ಪು) 1½ ಕೆ.ಜಿ., ಅರಿಶಿನ, ಕುಂಕುಮ – ತಲಾ ಎರಡು ಪೊಟ್ಟಣಗಳು, ತೆಂಗಿನಕಾಯಿ (ನಾರಿರುವುದು) – 2, ವೀಳೆಯದೆಲೆ – 11, ಅಡಿಕೆ – 100 ಗ್ರಾಂ, ಬಿಳಿ ಬಣ್ಣದ ಕಟ್ಟಿದ ಹೂವು – 1 ಮೊಳ, ಬಾಳೆಹಣ್ಣು – 11, ಖರ್ಜೂರ – 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು (ಕವಲಿರುವುದು) – 5, ಅಂಗಿ ಮತ್ತು ಷರಾಯಿ ಬಟ್ಟೆ – ಒಂದು ಜೊತೆ. ಈ ಸಾಮಗ್ರಿಗಳನ್ನು ಸೇರಿಸಿ ಗಂಟು ಕಟ್ಟಲು 1½ ಮೀಟರ್ ಉದ್ದದ ಬಿಳಿ ಬಟ್ಟೆ ಮತ್ತು ಅದನ್ನು ಸುತ್ತಿ ಗಂಟು ಹಾಕಲು ಬಿಳಿ ದಾರ.

**ಮಗಳಿನ ಮಡಿಲು ತುಂಬಲು ಬೇಕಾದ ಗಂಟಿನ ಸಾಮಗ್ರಿಗಳು:**

ಹುರಿಗಡಲೆ (ಕಡ್ಲೆ ಪಪ್ಪು) 1½ ಕೆ.ಜಿ., ಅರಿಶಿನ, ಕುಂಕುಮ – ತಲಾ ಎರಡು ಪೊಟ್ಟಣಗಳು, ಕೊಬ್ಬರಿ ಬಟ್ಟಲು – 2, ವೀಳ್ಯೆದೆಲೆ – 11, ಅಡಿಕೆ – 100 ಗ್ರಾಂ, ಬಿಳಿ ಬಣ್ಣದ ಕಟ್ಟಿದ ಹೂವು – 1 ಮೊಳ, ಬಾಳೆಹಣ್ಣು – 11, ಖರ್ಜೂರ – 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು (ಕವಲಿರುವುದು) – 5, ಹಸಿರು ಬಣ್ಣದ ರವಿಕೆ ಬಟ್ಟೆ – 1, ಮನೆಯವರ ಶಕ್ತ್ಯಾನುಸಾರ ಸೀರೆ ಮತ್ತು ರವಿಕೆ ಜೊತೆಗೆ ಇವುಗಳನ್ನೆಲ್ಲಾ ಸೇರಿಸಿ ಕಟ್ಟಲು 1½ ಮೀಟರ್ ಉದ್ದದ ಬಿಳಿ ಬಟ್ಟೆ ಮತ್ತು ಅದನ್ನು ಸುತ್ತಿ ಗಂಟು ಹಾಕಲು ಬಿಳಿ ದಾರ.

**ವಿಧಾನ:**

1 ಕಾರ್ಯಕ್ರಮಕ್ಕೆ ಆಗಮಿಸಿದ ಎಲ್ಲಾ ಆಹ್ವಾನಿತರ ಭೋಜನಾ ನಂತರ, ಪೂರ್ವ ಅಥವಾ ಉತ್ತರಾಭಿಮುಖವಾಗಿ ಎರಡು ಮಣೆಗಳನ್ನು ಹಾಕಿ ಅವುಗಳ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು.

1 ಅವುಗಳ ಎದುರಿಗೆ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

1 ಮಣೆಗಳ ಬಲಭಾಗದಿಂದ ಮಗಳು ಮತ್ತು ಅಳಿಯನನ್ನು ಬರಮಾಡಿಕೊಂಡು ಮಣೆಗಳ ಮೇಲೆ ಕೂರಿಸಬೇಕು.

1 ಮುತ್ತೈದೆಯೊಬ್ಬರು ಬಂದು ದೀಪಸ್ತಂಭಗಳಿಗೆ, ಮಗಳು ಮತ್ತು ಅಳಿಯನಿಗೆ ಅರಿಶಿನ, ಕುಂಕುಮ, ಅಕ್ಷತೆ ಇಟ್ಟು ಹೂವನ್ನು ಕೊಡಬೇಕು.

1 ನಂತರ, ಅರಿಶಿನದ ಕೈಯನ್ನು ಮಾಡಿಕೊಂಡು ಮಗಳು ಮತ್ತು ಅಳಿಯನ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನವನ್ನು ಹಚ್ಚಿ ಅವರುಗಳ ಹಣೆಗೆ ಎರಡು ಬಾರಿ ಕುಂಕುಮವನ್ನಿಡಬೇಕು ಮತ್ತು ಒಂದೊಂದು ಹೂವನ್ನು ಕೊಡಬೇಕು.

1 ಆಮೇಲೆ, ಅರಿಶಿನ ಕುಂಕುಮವಿರುವ ತಟ್ಟೆ, ಮಗಳು ಮತ್ತು ಅಳಿಯನಿಗೆಂದು ಇಟ್ಟಿರುವ ಗಂಟಿನ ಸಾಮಗ್ರಿಗಳಿರುವ ಬೇಸಿನ್ಗಳಿಗೆ ಅವರಿಬ್ಬರಿಂದ ಮೂರು ಬಾರಿ ನಮಸ್ಕಾರ ಮಾಡಿಸಬೇಕು.

1 ನಂತರ, ಮೊದಲು ಅಳಿಯನ ಆಮೇಲೆ ಮಗಳ ಮಡಿಲನ್ನು ಗಂಟಿನ ಸಾಮಗ್ರಿಗಳಿಂದ ತುಂಬಬೇಕು.

1 ತದನಂತರ, ಅವರಿಬ್ಬರಿಗೂ ಕೆಂಪು ನೀರಿನ ಆರತಿಯನ್ನು ಆರತಿ ಹಾಡು ಹಾಡುತ್ತಾ ಬೆಳಗಿ, ಅವರುಗಳ ಹಣೆಗೆ ಎರಡು ಬಾರಿ ತಿಲಕವನ್ನಿಡಬೇಕು.

1 ಕೆಂಪು ನೀರನ್ನು ಮನೆಯ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು ಹಿಂತಿರುಗಿ ಬಂದು ಖಾಲಿಯಾದ ಆರತಿ ತಟ್ಟೆಯನ್ನೊಡ್ಡಿ ದಂಪತಿಗಳ ಕೈಗಳಿಂದ ದಕ್ಷಿಣೆಸಹಿತವಾದ ತಾಂಬೂಲವನ್ನು ಪಡೆಯತಕ್ಕದ್ದು.

1 ಮುಂದೆ, ಅಲ್ಲಿ ನೆರೆದಿರುವ ಎಲ್ಲಾ ಹಿರಿಯರ ಪಾದಗಳಿಗೆ ದಂಪತಿಗಳು ನಮಸ್ಕಾರ ಮಾಡಿ ಅಕ್ಷತೆಯ ಸಮೇತ ಆಶೀರ್ವಾದವನ್ನು ಪಡೆಯಬೇಕು.



ಶುಭ ಘಳಿಗೆಯನ್ನು ನಿಗದಿ ಪಡಿಸಿದ ಸಮಯಕ್ಕೆ ಸರಿಯಾಗಿ ಗಂಡನ ಮನೆಯನ್ನು ತಲಪುವಂತೆ ದಂಪತಿಗಳನ್ನು ತಿಂಡಿ, ತಿನಿಸು ಮತ್ತು ಹಣ್ಣುಗಳೊಂದಿಗೆ ಕೆಲ ಮುತ್ತೈದೆಯರೊಡನೆ ಕಳುಹಿಸಬೇಕು.

ಗಂಡನ ಮನೆ ತಲುಪಿದ ದಂಪತಿಗಳನ್ನು ಮನೆಯ ಮುಂಬಾಗಿಲಿನಲ್ಲಿ ನಿಲ್ಲಿಸಿ, ಕೆಂಪು ನೀರಿನ ಆರತಿಯನ್ನು ಬೆಳಗಿ ಅವರಿಬ್ಬರ ಕಾಲುಗಳನ್ನು ಮುತ್ತೈದೆಯೊಬ್ಬರು ತೊಳೆದು ಮನೆಯೊಳಕ್ಕೆ ಬರಮಾಡಿಕೊಳ್ಳಬೇಕು.

ದಂಪತಿಗಳಿಬ್ಬರು ಮನೆಯಲ್ಲಿರುವ ಹಿರಿಯರ ಪಾದಗಳಿಗೆ ನಮಸ್ಕರಿಸಿ ಅವರಿಂದ ಅಕ್ಷತೆಸಮೇತವಾದ ಆಶೀರ್ವಾದವನ್ನು ಪಡೆಯಬೇಕು.

***ಸೂಚನೆ:*** ಗಂಡನ ಮನೆ ತಲುಪಿದ ರಾತ್ರಿ ಊಟಕ್ಕೆ ಹೆಂಡತಿಯು ತವರಿನಿಂದ ಅಥವಾ ಉಪಹಾರ ಮಂದಿರದಿಂದ ತಂದ ಆಹಾರ ಮತ್ತು ನೀರನ್ನು ಸೇವಿಸಬೇಕು.

**ಮದುವೆಯಾದ ಮಗಳು ಗರ್ಭಿಣಿಯಾದರೆ:**

ಪರಸ್ಪರ ಕೂಡಿದ ಎರಡು ಜೀವಗಳ ದಾಂಪತ್ಯವು ಸಫಲತೆ ಕಾಣುವುದೇ ಸಂತಾನದಿಂದ, ಹೆಣ್ಣು ಪರಿಪೂರ್ಣಳೆನಿಸುವುದೇ ತಾನು ಮತ್ತೊಂದು ಜೀವಕ್ಕೆ ಜನ್ಮ ನೀಡುವುದರಿಂದ ಮತ್ತು ಪುರುಷನು ಸಂತಾನ ಭಾಗ್ಯದಿಂದ ಪಿತೃಋಣವನ್ನು ತೀರಿಸುವಿಕೆ ಹೀಗೆ ಅನೇಕ ಧನಾತ್ಮಕ ಅಂಶಗಳನ್ನು ಒಳಗೊಂಡಿರುವ ಗರ್ಭಾವಸ್ಥೆಯ ಸನ್ನಿವೇಶವನ್ನು ಕೊಂಡಾಡಲು ಪೂರಕವಾಗಿ ಆಚರಿಸುವ ಶಾಸ್ತ್ರವಿದು.

**ಸಿದ್ಧತೆ:**

1 ಗರ್ಭಿಣಿಗೆ 5 ತಿಂಗಳು ತುಂಬುವ ಮೊದಲು ಒಂದು ಶುಭದಿನವನ್ನು ಗೊತ್ತು ಪಡಿಸಿಕೊಂಡು ಗಂಡನ ಮನೆಯವರಿಗೆ ಮುಂಚಿತವಾಗಿ ತಿಳಿಸಿ, ತವರಿನ ಮನೆಯವರ ಹಾಗೂ ಗಂಡನ ಮನೆಯವರ ಪೂರ್ವ ನಿರ್ಧಾರದಂತೆ 3, 5 ದಿವಸ ಅಥವಾ ಒಂದು ವಾರದ ತನಕ ಗರ್ಭಾವಸ್ಥೆಯಲ್ಲಿರುವ ಮಗಳನ್ನು ತವರಿನಲ್ಲಿ ಇರಿಸಿಕೊಂಡು ಕಳುಹಿಸಬೇಕು.

1 ಗರ್ಭಿಣಿಯನ್ನು ಮತ್ತೆ ಆಕೆಯ ಗಂಡನ ಮನೆಗೆ ಕಳುಹಿಸುವ ದಿನ ಅನುಕೂಲಕ್ಕನುಸಾರವಾಗಿ ನೆಂಟರು ಇಷ್ಟರಿಗೆ ಆಹ್ವಾನವನ್ನಿತ್ತು ಹಬ್ಬದಡುಗೆಯನ್ನು ತಯಾರಿಸಿ ಸಹಭೋಜನ ಮಾಡಬೇಕು.

- ಗರ್ಭಿಣಿಗೆ ಒಂದು ರೇಷ್ಮೆ ಸೀರೆ, ರವಿಕೆ ಮತ್ತು ಎರಡೂ ಕೈಗಳ ತುಂಬಾ ಬಳೆಗಳನ್ನು ತೊಡಿಸಿ ಆಕೆಯ ಮಡಿಲನ್ನು ಕಡ್ಲೆಬೆಲ್ಲದ ಗಂಟಿನಿಂದ ತುಂಬಬೇಕು.

**ಗರ್ಭಿಣಿಯ ಮಡಿಲು ತುಂಬಲು ಬೇಕಾದ ಗಂಟಿನ ಸಾಮಗ್ರಿಗಳು:**

- ಹುರಿಗಡಲೆ (ಕಡ್ಲೆ ಪಪ್ಪು) 1½ ಕೆ.ಜಿ., ಅರಿಶಿನ, ಕುಂಕುಮ – ತಲಾ ಎರಡು ಪೊಟ್ಟಣಗಳು, ಕೊಬ್ಬರಿ ಬಟ್ಟಲು – 2, ವೀಳ್ಯೆದೆಲೆ – 11, ಅಡಿಕೆ – 100 ಗ್ರಾಂ, ಬಿಳಿ ಬಣ್ಣದ ಕಟ್ಟಿದ ಹೂವು – 1 ಮೊಳ, ಬಾಳೆಹಣ್ಣು – 11, ಖರ್ಜೂರ – 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು (ಕವಲಿರುವುದು) – 5, ಹಸಿರು ಬಣ್ಣದ ರವಿಕೆ ಬಟ್ಟೆ – 1 ಮತ್ತು ಇವೆಲ್ಲಾ ಸಾಮಗ್ರಿಗಳನ್ನು ಕಟ್ಟಲು 1½ ಮೀಟರ್ ಉದ್ದದ ಬಿಳಿ ಬಟ್ಟೆ ಮತ್ತು ಅದನ್ನು ಸುತ್ತಿ ಗಂಟು ಹಾಕಲು ಬಿಳಿ ದಾರ.

**ವಿಧಾನ:**

- ಕಾರ್ಯಕ್ರಮಕ್ಕೆ ಬಂದ ಎಲ್ಲಾ ಆಹ್ವಾನಿತರ ಭೋಜನಾ ನಂತರ, ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಬೇಕು.
- ಮಣೆಯ ಮೇಲೆ ಬಿಳಿಯ ವಸ್ತ್ರವನ್ನು ಹಾಸಿ ಮಣೆಯ ಎದುರಿಗೆ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ ಮತ್ತು ಅಕ್ಷತೆಯ ಬಟ್ಟಲು ಜೊತೆಗೆ ಬಿಳಿ ಬಿಡಿ ಹೂವುಗಳು ಇರಬೇಕು.
- ಒಂದು ಬೇಸಿನ್ನಲ್ಲಿ ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳನ್ನು ಇರಿಸಬೇಕು.
- ಮಣೆಯ ಬಲಭಾಗದಿಂದ ಗರ್ಭಿಣಿಯನ್ನು ಬರಮಾಡಿಕೊಂಡು ಮಣೆಯ ಮೇಲೆ ಕೂರಿಸಬೇಕು
- ಮುತ್ತೈದೆಯೊಬ್ಬರು ಬಂದು ದೀಪಸ್ತಂಭಗಳಿಗೆ ಮತ್ತು ಆಕೆಗೆ ಅರಿಶಿನ, ಕುಂಕುಮ, ಅಕ್ಷತೆ ಇಟ್ಟು ಹೂವನ್ನು ಕೊಡಬೇಕು.
- ನಂತರ, ಅರಿಶಿನದ ಕೈಯನ್ನು ಮಾಡಿಕೊಂಡು ಆಕೆಯ ಕೆನ್ನೆ, ಕೈ ಹಾಗೂ ಪಾದಗಳಿಗೆ ಅರಿಶಿನವನ್ನು ಹಚ್ಚಿ ಹಣೆಗೆ ಎರಡು ಬಾರಿ ಕುಂಕುಮವನ್ನಿಡಬೇಕು.



- ಆಮೇಲೆ, ಅರಿಶಿನ ಕುಂಕುಮ, ಅಕ್ಷತೆ ಮತ್ತು ಹೂವಿರುವ ತಟ್ಟೆ ಹಾಗೂ ಕಡ್ಲೆಬೆಲ್ಲದ ಗಂಟಿನ ಬೇಸಿನ್ಗೆ ಆಕೆಯಿಂದ ಮೂರು ಬಾರಿ ನಮಸ್ಕಾರ ಮಾಡಿಸಬೇಕು.
- ನಂತರ, ಆಕೆಯ ಮಡಿಲನ್ನು ಕಡ್ಲೆಬೆಲ್ಲದ ಗಂಟಿನ ಸಾಮಗ್ರಿಗಳಿಂದ ತುಂಬಬೇಕು.
- ತದನಂತರ, ಕೆಂಪು ನೀರಿನ ಆರತಿಯನ್ನು ಆರತಿ ಹಾಡು ಹಾಡುತ್ತಾ ಬೆಳಗಿ, ಆಕೆಯ ಹಣೆಗೆ ಎರಡು ಬಾರಿ ತಿಲಕವನ್ನಿಡಬೇಕು.
- ಆರತಿ ಬೆಳಗಿದ ಕೆಂಪು ನೀರನ್ನು ಮನೆಯ ಮುಂಬಾಗಿಲಿನಲ್ಲಿ ಎಡಭಾಗದಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು ಖಾಲಿಯಾದ ಆರತಿ ತಟ್ಟೆಯನ್ನೊಡ್ಡಿ ಆಕೆಯಿಂದ ದಕ್ಷಿಣೆಸಹಿತವಾದ ತಾಂಬೂಲವನ್ನು ಪಡೆಯತಕ್ಕದ್ದು.
- ಮುಂದೆ, ಗರ್ಭಿಣಿಯನ್ನು ಮಣೆಯ ಎಡಭಾಗದಿಂದ ಎಬ್ಬಿಸಿ ಅಲ್ಲಿ ನೆರೆದಿರುವ ಎಲ್ಲಾ ಹಿರಿಯರ ಪಾದಗಳಿಗೆ ಆಕೆಯಿಂದ ನಮಸ್ಕಾರ ಮಾಡಿಸಿ ಅಕ್ಷತೆಯ ಸಮೇತ ಆಶೀರ್ವಾದವನ್ನು ಪಡೆಯುವಂತೆ ತಿಳಿಸಬೇಕು.
- ಇದಾದ ನಂತರ ಮತ್ತೆ ಮಣೆಯ ಬಲಭಾಗದಿಂದ ಬಂದು ಮಣೆಯ ಮೇಲೆ ಕೆಲಕಾಲ ಕುಳಿತುಕೊಂಡು ಕಡ್ಲೆಬೆಲ್ಲದ ಗಂಟನ್ನು ತೆಗೆದುಕೊಂಡು ಮಣೆಯ ಎಡಭಾಗದಿಂದ ಎದ್ದೇಳಬೇಕು.

ಶುಭ ಘಳಿಗೆಯನ್ನು ನಿಗದಿ ಪಡಿಸಿದ ಸಮಯಕ್ಕೆ ಸರಿಯಾಗಿ ಗಂಡನ ಮನೆಯನ್ನು ತಲಪುವಂತೆ ಗರ್ಭಿಣಿಯ ಜೊತೆಗೆ ತಿಂಡಿ, ತಿನಿಸು ಮತ್ತು ಹಣ್ಣುಗಳೊಂದಿಗೆ ಕೆಲ ಮುತ್ತೈದೆಯರೊಡನೆ ಕಳುಹಿಸಬೇಕು.

**ಬಾಲಕಿಯು ದೊಡ್ಡವಳಾದಾಗ (ಪುಷ್ಪವತಿ) ಮಾಡುವ ಶಾಸ್ತ್ರ:**

ಪುಷ್ಪವತಿಯಾಗುವಿಕೆಯು ಹೆಣ್ಣಿಗೆ ಪ್ರಕೃತಿದತ್ತವಾಗಿ ಬಂದಿರುವ ವರದಾನವಲ್ಲದೇ ತಾನು ಮುಂದೆ ಮೆಟ್ಟುವ ಮನೆಯ ವಂಶಾಭಿವೃದ್ಧಿಗೆ ಈ ಕ್ರಿಯೆಯು ನಾಂದಿ ಹಾಡುತ್ತದೆ. ಬಾಲಕಿಯಾಗಿದ್ದವಳು ಹೆಣ್ಣಾಗಿ ಪರಿವರ್ತನೆ ಹೊಂದಿದಾಗ ಸಹಜವಾಗಿ ಪೋಷಕರ ಮನದಲ್ಲಿ ಸಂತಸದೊಡನೆ

ಜವಾಬ್ದಾರಿ ಎಂಬ ಎಚ್ಚರಿಕೆಯ ಗಂಟೆಯು ಸಹ ಬಾರಿಸಲಾರಂಭಿಸುತ್ತದೆ. ಇನ್ನು ಆ ಬಾಲಕಿಗೆ ತನ್ನ ದೇಹದಲ್ಲಾಗುತ್ತಿರುವ ಮಹತ್ತರವಾದ ಬದಲಾವಣೆಯು ಅಚ್ಚರಿಯೊಡನೆ ಆತಂಕವನ್ನು ಒಡ್ಡುತ್ತದೆ. ಹಾಗಾಗೀ ಇಂತಹ ದ್ವಂದ್ವಗಳಲ್ಲಿ ಸಿಲುಕಿರುವ ಪೋಷಕರು ಮತ್ತು ಬಾಲಕಿಗೆ ತಮ್ಮ ಮನಸ್ಸನ್ನು ಸ್ಥಿಮಿತದಲ್ಲಿ ಇರಿಸಿಕೊಂಡು ನೈಸರ್ಗಿಕವಾದ ಈ ಕೊಡುಗೆಯನ್ನು ಮುಕ್ತವಾಗಿ ಸ್ವಾಗತಿಸಿ ಮುಂದಿನ ಕಾರ್ಯಗಳಿಗೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಅಣಿ ಮಾಡಲೆಂದೇ ಇರಬೇಕು ನಮ್ಮ ಹಿರಿಯರು ತಮ್ಮ ಸಮಕ್ಷಮದಲ್ಲಿ ಬಲು ಜಾಗ್ರತೆಯಿಂದ ಈ ಶಾಸ್ತ್ರವನ್ನು ನಡೆಸಲು ಮುಂದಾದದ್ದು.

**ಜ್ಯೋತಿಷ್ಯಾಸ್ತ್ರದ ಪ್ರಕಾರ ಪ್ರಥಮ ಬಾರಿಗೆ ಋತುಮತಿಯಾಗುವ ಕನ್ಯೆಗೆ ಲಭಿಸಬಹುದಾದ; ವಾರ ಫಲಗಳೆಂದರೆ :** ಭಾನುವಾರ –ರೋಗ ಬಾಧೆ, ಸೋಮವಾರ –ಉತ್ತಮ ನಡತೆ, ಮಂಗಳವಾರ –ವಿಧವಾಯೋಗ, ಬುಧವಾರ –ಸಂತಾನ ಪ್ರಾಪ್ತಿ, ಗುರುವಾರ –ಆಭರಣ ಯೋಗ, ಶುಕ್ರವಾರ –ಸುಖ ಪ್ರಾಪ್ತಿ ಮತ್ತು ಶನಿವಾರ –ಅನಿಷ್ಟ.

**ಹಾಗೆಯೇ ತಿಥಿಫಲಗಳೆಂದರೆ :** ಪಾಡ್ಯಮಿಯಲ್ಲಿ –ವಿವಾಹ ನಷ್ಟ, ಬಿದಿಗೆಯಲ್ಲಿ –ಸುಖ, ತದಿಗೆಯಲ್ಲಿ –ಐಶ್ವರ್ಯ, ಚೌತಿಯಲ್ಲಿ –ಆಭರಣ ಭಾಗ್ಯ, ಪಂಚಮಿಯಲ್ಲಿ –ಉತ್ತಮ ಸಂತಾನ ಪ್ರಾಪ್ತಿ, ಷಷ್ಠಿಯಲ್ಲಿ –ಪವಿತ್ರತೆ, ಸಪ್ತಮಿಯಲ್ಲಿ –ಸಂತಾನಭಾಗ್ಯ, ಅಷ್ಟಮಿಯಲ್ಲಿ –ಅನಿಷ್ಟ, ನವಮಿಯಲ್ಲಿ –ದುಃಖ, ದಶಮಿಯಲ್ಲಿ –ಧರ್ಮಗುಣ, ಏಕಾದಶಿಯಲ್ಲಿ –ಪ್ರೀತಿ, ದ್ವಾದಶಿಯಲ್ಲಿ –ರೋಗ, ತ್ರಯೋದಶಿಯಲ್ಲಿ –ಕೋಪ, ಚತುರ್ದಶಿಯಲ್ಲಿ –ದುರ್ನಡತೆ, ಅಮಾವಾಸ್ಯೆಯಲ್ಲಿ –ಮೃತ ಸಂತಾನ ಭಾಗ್ಯ, ಹುಣ್ಣಿಮೆಯಲ್ಲಿ –ಪುತ್ರ ಸಂತಾನ ಭಾಗ್ಯದ ಲಭ್ಯತೆ.

**ಇನ್ನು ನಕ್ಷತ್ರಫಲಗಳೆಂದರೆ :** ಅಶ್ವಿನಿ–ಸೌಭಾಗ್ಯವತಿ, ಭರಣಿ–ವಿಧವಾಯೋಗ, ಕೃತ್ತಿಕಾ–ಸಂತಾನ ನಷ್ಟ, ರೋಹಿಣಿ–ಭಾಗ್ಯಶಾಲಿನಿ, ಮೃಗಶಿರ–ಪತಿಗೆ ಪ್ರೀತಿ ಪಾತ್ರಳು, ಆರಿದ್ರ–ಜಗಳಗಂಟಿತನ, ಪುನರ್ವಸು – ವ್ಯಭಿಚಾರ, ಪುಷ್ಯ–ಸುಖೀ ದಾಂಪತ್ಯ, ಆಶ್ಲೇಷ–ಪುತ್ರ ಶೋಕ, ಮಘಾ –ಪತಿಯ ಬಗ್ಗೆ ನಿರ್ಲಕ್ಷ್ಯತೆ, ಪುಬ್ಬಾ–ಬಂಜೆತನ, ಉತ್ತರಾ–ಮಾನವೀಯತೆ, ಹಸ್ತ –



ರಾಜಯೋಗ, ಚಿತ್ತ –ಬುದ್ಧಿವಂತಿಕೆ, ಸ್ವಾತಿ –ಸೌಭಾಗ್ಯ, ವಿಶಾಖ –ಸನ್ನಡತೆ, ಅನುರಾಧ –ಸಕಲ ಸೌಭಾಗ್ಯ, ಜ್ಯೇಷ್ಠಾ –ಮಹಾಲೋಚನೆ, ಮೂಲಾ – ಸಕಲ ಗುಣ ಸಂಪನ್ನೆ, ಪೂರ್ವಾಷಾಡ –ಉತ್ತಮ ನಡತೆ, ಉತ್ತರಾಷಾಡ – ದಾನಧರ್ಮದಲ್ಲಿ ಆಸಕ್ತಿ, ಶ್ರವಣ –ಭಾಗ್ಯಶಾಲಿ, ಧನಿಷ್ಠ –ಸಕಲ ಸೌಭಾಗ್ಯ, ಶತಭಿಷ –ದೀರ್ಘಸುಮಂಗಲಿ, ಪೂರ್ವಾಭಾದ್ರ –ಬಂಜೆತನ, ಉತ್ತರಾಭಾದ್ರ –ಉತ್ತಮ ದಾಂಪತ್ಯ, ರೇವತಿ –ಉತ್ತಮ ಪುತ್ರ ಸಂತಾನ ಪ್ರಾಪ್ತಿ.

**ಮಾಸಫಲಗಳೆಂದರೆ :** ಚೈತ್ರ, ಜ್ಯೇಷ್ಠ, ಆಷಾಡ, ಭಾದ್ರಪದ, ಕಾರ್ತೀಕ ಮತ್ತು ಪುಷ್ಯ ಮಾಸಗಳು ಅನಿಷ್ಟಕಾರಕ. ವೈಶಾಖ, ಶ್ರಾವಣ, ಆಶ್ಲೇಷ, ಮಾರ್ಗಶಿರ, ಮಾಘ ಮತ್ತು ಫಾಲ್ಗುಣ ಮಾಸಗಳು ಶುಭಪ್ರದವಾದದ್ದು.

**ಲಗ್ನ ಫಲಗಳೆಂದರೆ :** ವೃಷಭ, ಮಿಥುನ, ಕರ್ಕಾಟಕ, ಕನ್ಯಾ, ತುಲಾ, ಧನು ಮತ್ತು ಮೀನ ಪ್ರಶಸ್ತವಾದವುಗಳು. ಮೇಷ, ಸಿಂಹ, ವೃಶ್ಚಿಕ, ಮಕರ ಮತ್ತು ಕುಂಭ ಅನಿಷ್ಟಪ್ರದವೂ ಆಗಿವೆ.

**ಸಿದ್ಧತೆ:**

1 ಶುಭ ಸಮಾಚಾರವನ್ನು ಕೊಂಡಾಡಲು ಮನೆಯನ್ನು ಶುಚಿಗೊಳಿಸಿ ಮಾವಿನ ತಳಿರಿನ ತೋರಣ ಮತ್ತು ಹೂವಿನಿಂದ ಅಲಂಕಾರ ಮಾಡಬೇಕು.

1 ಪ್ರಥಮ ಬಾರಿಗೆ ಋತುಮತಿಯಾದ ಕನ್ಯೆಯು ಅಂದು ರಾತ್ರಿ ಸಂಪೂರ್ಣ ಜಾಗರಣೆಯನ್ನು ಮಾಡಬೇಕು.

1 ಮರುದಿನ ಬೆಳಿಗ್ಗೆ ಋತುಮತಿಯಾದ ಕನ್ಯೆಯನ್ನು ಸ್ನಾನದ ಕೋಣೆಗೆ ಕರೆತರಬೇಕು

1 ಪೂರ್ವ ಅಥವಾ ಉತ್ತರಾಭಿಮುಖವಾಗಿ ಹಾಕಿರುವ ಮಣೆಯ ಮೇಲೆ ಬಲಗಡೆಯಿಂದ ಬರುವಂತೆ ತಿಳಿಸಿ ಮಣೆಯ ಮೇಲೆ ಕೂರಿಸಬೇಕು.

1 ಮೂರು ಅಥವಾ ಐವರು ಸೋದರತ್ತೆಯವರು ಅಥವಾ ಮುತ್ತೈದೆಯರು ಕ್ರಮವಾಗಿ ಕನ್ಯೆಯ ಕೈಗೆ ತಲಾ ಎರಡೆರಡು ಬಾರಿ ಸ್ವಲ್ಪ ಅರಿಶಿನವನ್ನು ಕೊಡಬೇಕು.

1 ಕನ್ಯೆಯು ಅರಿಶಿನವನ್ನು ತನ್ನ ಕೆನ್ನೆಗಳು, ಕೈಗಳು ಮತ್ತು ಪಾದಗಳಿಗೆ ಹಚ್ಚಿಕೊಳ್ಳಬೇಕು.

- ಆಮೇಲೆ ಸೋದರತ್ತೆಯವರುಗಳು ತಲಾ ಎರಡು ಬಾರಿ ಕುಂಕುಮವನ್ನು ಕನ್ಯೆಗೆ ಕೊಡಬೇಕು.
- ಹಾಗೆ ಕೊಟ್ಟ ಕುಂಕುಮವನ್ನು ಕನ್ಯೆಯು ತನ್ನ ಹಣೆಗೆ ಇಟ್ಟುಕೊಳ್ಳತಕ್ಕದ್ದು.
- ಇದಾದ ನಂತರ ಎಲ್ಲರೂ ಕ್ರಮವಾಗಿ ತಲಾ ಮೂರು ಬಾರಿ ಚೊಂಬಿನಿಂದ ಬಿಸಿ ನೀರನ್ನು ಕನ್ಯೆಯ ತಲೆಯ ಮೇಲೆ ಸುರಿಯಬೇಕು. ಮುಂದೆ ಕನ್ಯೆಯು ತನ್ನ ಸ್ನಾನವನ್ನು ಮುಗಿಸಬೇಕು.

**ವಿಧಾನ:**

- ಸ್ನಾನ ಮಾಡಿ ಅಲಂಕೃತಳಾಗಿ ಬಂದ ಕನ್ಯೆಯನ್ನು ಮನೆಯ ಒಂದು ಹೊಸ್ತಿಲಿನ ಮೇಲೆ ಕೂರಿಸಬೇಕು.
- ನೆನೆಸಿ ರುಬ್ಬಿದ ಮೆಂತ್ಯದ ಸಣ್ಣ ಉಂಡೆಯ ಜೊತೆಗೆ ಒಂದು ಕೊಬ್ಬರಿ ಬಟ್ಟಲಿನಲ್ಲಿ ಸ್ವಲ್ಪ ತುಪ್ಪವನ್ನು ಕೊಡಬೇಕು.
- ಮೆಂತ್ಯದ ಉಂಡೆಯನ್ನು ತುಪ್ಪದಲ್ಲಿ ಅದ್ದಿಕೊಂಡು ನುಂಗುವಂತೆ ಕನ್ಯೆಗೆ ಹೇಳಬೇಕು.
- ಕೋಣೆಯಲ್ಲಿ ಉತ್ತರ ಅಥವಾ ಪೂರ್ವಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಒಂದು ಬಿಳಿಯ ವಸ್ತ್ರವನ್ನು ಹಾಸಬೇಕು.
- ಆನಂತರ ಕನ್ಯೆಯನ್ನು ಒಳಗೆ ಕರೆತಂದು, ಮಣೆಯ ಬಲಗಡೆಯಿಂದ ಬರುವಂತೆ ಹೇಳಿ ಅದರ ಮೇಲೆ ಕೂರಿಸಬೇಕು.
- ಮಣೆಯ ಎರಡು ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.

ನಂತರ ಕೆಳಗಿನ ಸಾಮಗ್ರಿಗಳನ್ನು ಆಕೆಯ ಮುಂದೆ ಸಿದ್ಧಪಡಿಸಬೇಕು

- ಒಂದು ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆಯ ಬಟ್ಟಲು, ಬಿಳಿಯ ಬಿಡಿ ಹೂಗಳು ಮತ್ತು ಬಿಳಿಯ ಹೂವಿನ ಹಾರ.
- ಒಂದು ತಟ್ಟೆಯಲ್ಲಿ ವೀಳೆಯದೆಲೆ ಮತ್ತು ಅಡಿಕೆಗಳು.
- ಒಂದು ತಟ್ಟೆಯಲ್ಲಿ $\frac{1}{4}$ ಕೆ. ಜಿ ಕಡ್ಲೆ ಪಪ್ಪು ಮತ್ತು ತಳದ ಕೊಬ್ಬರಿ ಬಟ್ಟಲು.



- ಒಂದು ತಟ್ಟೆಯಲ್ಲಿ ಐದು ತಾಂಬೂಲ (ಪ್ರತೀ ತಾಂಬೂಲದಲ್ಲಿ ವೀಳೆಯದೆಲೆ –2, ಅಡಿಕೆ –2 ಮತ್ತು ಬಾಳೆಹಣ್ಣು –1).
- ಒಂದು ತಟ್ಟೆಯಲ್ಲಿ, ನೆನೆಸಿ ಪುಡಿ ಮಾಡಿದ ಅಕ್ಕಿ ಹಿಟ್ಟಿನೊಂದಿಗೆ ಬೆಲ್ಲದ ಪುಡಿ ಬೆರೆಸಿ ತಯಾರಿಸಿದ ಸಣ್ಣ ಉಂಡೆಗಳು – 5.
- ಒಂದು ತಟ್ಟೆಯಲ್ಲಿ, ನೆನೆಸಿ ಪುಡಿ ಮಾಡಿದ ಕರಿ ಎಳ್ಳಿನ ಹಿಟ್ಟಿನೊಂದಿಗೆ ಬೆಲ್ಲದ ಪುಡಿ ಬೆರೆಸಿ ತಯಾರಿಸಿದ ಸಣ್ಣ ಉಂಡೆಗಳು – 5.
- ಒಂದು ಲೋಟದಲ್ಲಿ ಸ್ವಲ್ಪ ನೀರು.
- ಕನ್ಯೆಯು ಕುಳಿತಿರುವ ಮಣೆಯ ನಾಲ್ಕು ಮೂಲೆಗಳಲ್ಲಿ ತಲಾ ಒಂದೊಂದು ತಾಂಬೂಲವನ್ನಿಟ್ಟು ಆಕೆಯ ಎದಿರು ಮತ್ತೊಂದು ತಾಂಬೂಲವನ್ನಿಡಬೇಕು.
- ನಂತರ, ನಾಲ್ವರು ಮುತ್ತೈದೆಯರು ಸರದಿಯಲ್ಲಿ ಬಂದು ದೀಪಸ್ತಂಭಗಳಿಗೆ ಅರಿಶಿನ, ಕುಂಕುಮ ಮತ್ತು ಹೂವನ್ನಿಟ್ಟು ಕನ್ಯೆಯ ಅಂಗೈಗೆ ಎರಡು ಬಾರಿ ಅರಿಶಿನವನ್ನು ಹಾಕಬೇಕು.
- ಅಂಗೈಲಿರುವ ಅರಿಶಿನವನ್ನು ಕನ್ಯೆಯು ನೀರಿನೊಂದಿಗೆ ಬೆರೆಸಿ ತನ್ನ ಕೆನ್ನೆ, ಕೈ ಹಾಗೂ ಪಾದಗಳಿಗೆ ಹಚ್ಚಿಕೊಳ್ಳಬೇಕು.
- ಆಮೇಲೆ ಕನ್ಯೆಯ ಅಂಗೈಗೆ ಎರಡು ಬಾರಿ ಕುಂಕುಮವನ್ನು ಹಾಕಬೇಕು. ಕನ್ಯೆಯು ಆ ಕುಂಕುಮವನ್ನು ತನ್ನ ಹಣೆಗೆ ಇಟ್ಟುಕೊಳ್ಳತಕ್ಕದ್ದು.
- ನಂತರ, ಕನ್ಯೆಗೆ ಹೂವನ್ನು ಕೊಡಬೇಕು, ಆಕೆಯು ಅದನ್ನು ತನ್ನ ತಲೆಯಲ್ಲಿ ಮುಡಿದುಕೊಳ್ಳಬೇಕು.
- ನಂತರ, ಮೊದಲ ಮುತ್ತೈದೆಯು ದೇವತಾಮೂಲೆಯಲ್ಲಿ ಇರಿಸಿರುವ ತಾಂಬೂಲ, ಅಕ್ಕಿಯ ಉಂಡೆ ಮತ್ತು ಎಳ್ಳಿನ ಉಂಡೆಯನ್ನು ಕನ್ಯೆಗೆ ಕೊಡಬೇಕು.
- ಆನಂತರ ಮಿಕ್ಕ ಮೂವರು ಮುತ್ತೈದೆಯರು ಕ್ರಮವಾಗಿ ಬಂದು ಉಳಿದ ಮೂರು ತಾಂಬೂಲ ಮತ್ತು ಉಂಡೆಗಳನ್ನು ಆಕೆಗೆ ಕೊಡುವುದು.
- ಕಡೆಗೆ ಐದನೆಯ ಮುತ್ತೈದೆಯು ಉಳಿದ ತಾಂಬೂಲ ಮತ್ತು

ಉಂಡೆಗಳನ್ನು ಕೊಡುವುದರ ಜೊತೆಗೆ ಕನ್ಯೆಯ ಮಡಿಲಿಗೆ ಒಂದು ಬಿಳಿಯ ವಸ್ತ್ರವನ್ನು ಹಾಸಿ, ತಟ್ಟೆಯಲ್ಲಿರುವ ಕೊಬ್ಬರಿ ಮತ್ತು ಸ್ವಲ್ಪ ಕಡ್ಲೆಪಪ್ಪನ್ನು ಮೂರು ಬಾರಿ ಹಾಕಬೇಕು.

- ನಂತರ ನೆರೆದಿರುವ ಮುತ್ತೈದೆಯರಿಗೆಲ್ಲಾ ಅರಿಶಿನ ಕುಂಕುಮ ಹೂ ಅಕ್ಷತೆಯ ಜೊತೆಗೆ ತಾಂಬೂಲವನ್ನು ಕೊಡಬೇಕು.
- ಮುಂದೆ, ಕಾರ್ಯಕ್ರಮಕ್ಕೆ ಬಂದ ನೆಂಟರು, ಇಷ್ಟರಿಗೆ ಹಬ್ಬದಡುಗೆಯನ್ನು ಬಡಿಸಿ ಸಹಭೋಜನ ಮಾಡಿ ಆನಂದಿಸುವುದು.
- ಮೇಲಿನ ಕಾರ್ಯವನ್ನು ಮೂರು ದಿನಗಳು ನೆರವೇರಿಸಬೇಕು. ಪ್ರತೀದಿನ ಒಗ್ಗರಣೆ ಹಾಕಿದ ಪುರಿಯನ್ನು ಮುತ್ತೈದೆಯರೊಡಗೂಡಿ ಎಲ್ಲರಿಗೂ ಹಂಚಬೇಕು.
- ಒಂದು ವಾರ ಪೂರ್ತಿ ಕನ್ಯೆಗೆ ಸಿಹಿ ಅಡುಗೆಯನ್ನು ಮಾಡಿ ಕೊಡಬೇಕು.

***ಸೂಚನೆ:*** ಕನ್ಯೆಗೆ ಕೊಟ್ಟಿರುವ ಎಲ್ಲಾ ತಿನಿಸುಗಳನ್ನು ಆಕೆಯು ಅಂದೇ ತಿಂದು ಮುಗಿಸಬೇಕು. ಆಕೆಯ ಊಟಕ್ಕೆ ಅಕ್ಕಿ, ತೊಗರಿ ಬೇಳೆ ಮತ್ತು ಅವರೆ ಬೇಳೆಯಿಂದ ಮಾಡಿದ ಹುಗಿಯನ್ನದ ಜೊತೆಗೆ ಬೆಲ್ಲದ ಪಾನಕವನ್ನು ಬೆರೆಸಿ ಕೊಡಬೇಕು.

**ದೊಡ್ಡ ಒಸಗೆ ಶಾಸ್ತ್ರ:**

ಬಾಲಕಿಯು ಋತುಮತಿಯಾದ 9, 11 ಅಥವಾ 21ನೇ ದಿನ ದೊಡ್ಡ ಒಸಗೆಯನ್ನು ಹಾಕಬೇಕು. ದೊಡ್ಡ ಒಸಗೆಯನ್ನು ಕನ್ಯೆಯ ತಾಯಿಯ ತವರು ಮನೆಯವರು ಮಾಡುವುದು ರೂಢಿ. ಕನ್ಯೆಯ ತಾಯಿಯ ತವರು ಮನೆಯವರು ಹುಡುಗಿಗೆ ಒಂದು ರೇಷ್ಮೆ ಸೀರೆ, ರವಿಕೆ ಮತ್ತು ಒಂದು ಜೊತೆ ಓಲೆಯನ್ನು ಕೊಟ್ಟು ಕೆಳ ನಮೂದಿಸಿರುವ 21 ತಟ್ಟೆಗಳ ಸಾಮಗ್ರಿಯೊಡನೆ ಒಸಗೆ ಹಾಕಬೇಕು.

- ಮೊದಲನೆಯ ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು ಮತ್ತು ಬಿಡಿ ಹೂವುಗಳು.
- ಎರಡನೆಯ ತಟ್ಟೆಯಲ್ಲಿ ವೀಳೆಯದೆಲೆ ಮತ್ತು ಅಡಿಕೆ.
- ಮೂರನೆಯ ತಟ್ಟೆಯಲ್ಲಿ ಕಡ್ಲೆಬೆಲ್ಲದ ಸಾಮಗ್ರಿಗಳಾದ ಮೂರು ಪಾವು (ಮುಕ್ಕಾಲು ಕೆ.ಜಿ.) ಕಡ್ಲೆಪಪ್ಪು, ಹನ್ನೊಂದು ವೀಳೆಯದೆಲೆ, ಐವತ್ತು ಗ್ರಾಂ ಅಡಿಕೆ, ಹನ್ನೊಂದು ಬಾಳೆಹಣ್ಣುಗಳು, ಐದು ಬೆಲ್ಲದ ಉಂಡೆಗಳು, ಐದು ಖರ್ಜೂರಗಳು, ಐದು ಅರಿಶಿನದ ಕೊಂಬುಗಳು, ಅರಿಶಿನ ಮತ್ತು ಕುಂಕುಮದ ಪೊಟ್ಟಣ ತಲಾ ಎರಡೆರಡು, ಎರಡು ಕೊಬ್ಬರಿ ಬಟ್ಟಲು, ಒಂದು ಹಸಿರು ಬಣ್ಣದ ರವಿಕೆ ಬಟ್ಟೆ, ಒಂದು ಮೊಳದಷ್ಟು ಉದ್ದದ ಕಟ್ಟಿದ ಬಿಳಿ ಹೂವುಗಳು.



- ನಾಲ್ಕರಿಂದ ಒಂಭತ್ತನೇ ತಟ್ಟೆಗಳಲ್ಲಿ ಆರು ತರಹದ ಸಿಹಿ ತಿನಿಸುಗಳು.
- ಹತ್ತರಿಂದ ಹದಿನೈದನೇ ತಟ್ಟೆಗಳಲ್ಲಿ ಆರು ತರಹದ ಖಾರದ ತಿನಿಸುಗಳು.
- ಹದಿನಾರರಿಂದ ಇಪ್ಪತ್ತೊಂದನೇ ತಟ್ಟೆಗಳಲ್ಲಿ ಆರು ತರಹದ ಹಣ್ಣುಗಳು ಮತ್ತು ಒಂದು ಲೋಟದಲ್ಲಿ ನೀರು.

**ವಿಧಾನ:**

- ಪೂರ್ವ ಅಥವಾ ಉತ್ತರಾಭಿಮುಖವಾಗಿ ಒಂದು ಮಣೆಯನ್ನು ಹಾಕಿ ಅದರ ಮೇಲೆ ಒಂದು ಬಿಳಿ ವಸ್ತ್ರವನ್ನು ಹಾಸಬೇಕು.
- ಮಣೆಯ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳನ್ನಿರಿಸಿ ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಬೇಕು.
- ಕನ್ಯೆಯು ತನ್ನ ತಾಯಿಯ ತವರು ಮನೆಯವರು ಬಳುವಳಿಯಾಗಿ ಕೊಟ್ಟ ಸೀರೆ, ರವಿಕೆ ಮತ್ತು ಒಡವೆಗಳಲ್ಲದೇ ತನ್ನ ಪೋಷಕರು ಹಾಕಿದ ಒಡವೆಗಳಿಂದ ಅಲಂಕೃತಳಾಗಬೇಕು.
- ನಂತರ, ಕನ್ಯೆಯನ್ನು ಮಣೆಯ ಬಲಭಾಗದಿಂದ ಬರಮಾಡಿಕೊಂಡು ಮಣೆಯ ಮೇಲೆ ಕೂರಿಸಬೇಕು.
- ಕ್ರಮವಾಗಿ ಒಂಭತ್ತು ಮುತ್ತೈದೆಯರು ಬಂದು ಅರಿಶಿನ ಕುಂಕುಮವನ್ನು ದೀಪಸ್ತಂಭಗಳಿಗೆ ಹಚ್ಚಿ ಹೂವನ್ನಿಡಬೇಕು.
- ಕನ್ಯೆಯ ಕೆನ್ನೆ, ಕೈಗಳು ಮತ್ತು ಪಾದಗಳಿಗೆ ಅರಿಶಿನ ಹಚ್ಚಿ, ಹಣೆಗೆ ಕುಂಕುಮವನ್ನು ಎರಡು ಬಾರಿ ಇಟ್ಟು, ಹೂವನ್ನು ಕೊಡಬೇಕು.
- ಪ್ರತೀ ಮುತ್ತೈದೆಯು ತಲಾ ಮೂರು ತರಹದ ತಟ್ಟೆಗಳಿಗೆ ಕನ್ಯೆಯ ಕೈಗಳಿಂದ ನಮಸ್ಕಾರ ಮಾಡಿಸಿ, ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳನ್ನು ತಾಂಬೂಲ ರೂಪದಲ್ಲಿ ತಮ್ಮ ಸೆರಗೊಡ್ಡಿ ಪಡೆಯತಕ್ಕದ್ದು.
- ಆಮೇಲೆ ಮೂವರು ಮುತ್ತೈದೆಯರು ಸೇರಿ ಕೆಂಪು ನೀರಿನ ಆರತಿಯನ್ನು ಆರತಿ ಹಾಡು ಹಾಡುತ್ತಾ ಕನ್ಯೆಗೆ ಬೆಳಗಿ ಆಕೆಯ ಹಣೆಗೆ ಎರಡು ಸಲ ತಿಲಕವನ್ನಿಡಬೇಕು.

- ತಟ್ಟೆಯಲ್ಲಿರುವ ಕೆಂಪು ನೀರನ್ನು ಮನೆಯ ಮುಂಬಾಗಿಲಿನ ಎಡಭಾಗದಿಂದ ಬಲಗಡೆ ಬರುವಂತೆ ಮುಂದೆ ಅಡ್ಡಲಾಗಿ ಸುರಿದು ಹಿಂದಿರುಗಿ ಖಾಲಿಯಾದ ಆರತಿ ತಟ್ಟೆಯನ್ನು ಕನ್ಯೆಯ ಮುಂದೆ ಒಡ್ಡಿ ದಕ್ಷಿಣೆಯ ಸಮೇತ ತಾಂಬೂಲವನ್ನು ಪಡೆಯಬೇಕು.
- ಸಮಾರಂಭಕ್ಕೆ ನೆರೆದಿರುವ ಎಲ್ಲರಿಗೂ ಅರಿಶಿನ ಕುಂಕುಮ, ಅಕ್ಷತೆ ಮತ್ತು ಹೂವಿನ ಜೊತೆಗೆ ತಾಂಬೂಲವನ್ನು ಕೊಡಬೇಕು.

ನಂತರ ಎಲ್ಲರೊಡನೆ ಹಬ್ಬದಡುಗೆಯನ್ನು ಹಂಚಿಕೊಂಡು ಭೋಜನದ ಸವಿಯನ್ನು ಸವಿಯಬೇಕು.

**ನಿಶ್ಚಿತಾರ್ಥದ ಶಾಸ್ತ್ರ:**

ಒಂದು ಹೆಣ್ಣಿಗೆ ಒಂದು ಗಂಡನ್ನು ಮದುವೆಗೆಂದು ಗೊತ್ತು ಮಾಡಿದ ಮೇಲೆ ಕಾರಣಾಂತರಗಳಿಂದ ಅವರ ಮದುವೆಯು ತಡವಾಗುವಂತಿದ್ದರೆ, ಮಾನವರ ಚಂಚಲ ಮನಸ್ಸಿನ ಪ್ರಭಾವವನ್ನು ಅರಿತು ಅದನ್ನು ಹತೋಟಿಯಲ್ಲಿಡಲು ದೇವರ ಹಾಗೂ ಸಮಾಜದ ಎದಿರು ಎರಡು ಕುಟುಂಬಗಳ ನಡುವೆ ಉಂಟಾಗುವ ಸಂಬಂಧವನ್ನು ಪ್ರಚುರಗೊಳಿಸಿ ಪರಸ್ಪರ ಒಪ್ಪಂದಕ್ಕೆ ಬದ್ಧರಾಗಿ ಮುಂದೆ ಆ ಒಪ್ಪಂದವು ಮದುವೆ ಕಾರ್ಯದಲ್ಲಿ ಸುಖಾಂತ್ಯಗೊಳ್ಳಲಿ ಎಂಬ ಆಶಯದೊಡನೆ ಮಾನಸಿಕ ಮತ್ತು ಸಾಮಾಜಿಕ ಕಟ್ಟುಪಾಡುಗಳನ್ನು ಭದ್ರಗೊಳಿಸುವ ನಿಟ್ಟಿನಲ್ಲಿ ಆಚರಿಸುವ ಕಾರ್ಯಕ್ರಮವೇ ನಿಶ್ಚಿತಾರ್ಥ ಶಾಸ್ತ್ರ.

- ನಿಶ್ಚಿತಾರ್ಥದ ಶಾಸ್ತ್ರಕ್ಕೆಂದು ಮೊದಲೇ ಗೊತ್ತುಪಡಿಸಿದ ಛತ್ರ ಅಥವಾ ದೇವಸ್ಥಾನಕ್ಕೆ ಪ್ರಥಮವಾಗಿ ಹೆಣ್ಣಿನ ಕಡೆಯವರು ಹೆಣ್ಣಿನೊಂದಿಗೆ ನಿಗದಿ ಪಡಿಸಿದ ಸಮಯಕ್ಕೆ ಮುಂಚಿತವಾಗಿ ಬಂದಿರತಕ್ಕದ್ದು.
- ನಂತರ, ಗಂಡಿನ ಕಡೆಯವರು ಗಂಡಿನೊಂದಿಗೆ ಬರಬೇಕು. ಮುಂದೆ, ಎಲ್ಲಾ ಆಹ್ವಾನಿತರು ಬಂದ ನಂತರ ಎಲ್ಲರಿಗೂ ನಿಂಬೆ ಹಣ್ಣಿನ ಪಾನಕವನ್ನು ಕೊಡಬೇಕು.
- ದೇವಸ್ಥಾನದಲ್ಲಿ ನಿಶ್ಚಿತಾರ್ಥದ ಶಾಸ್ತ್ರ ನೆರವೇರುತ್ತಿದ್ದರೆ, ಹೆಣ್ಣಿನ ಮತ್ತು ಗಂಡಿನ ಮನೆಯವರು ದೇವರ ಪೂಜೆಗೆ ಪ್ರತ್ಯೇಕವಾಗಿ ಪೂಜಾಸಾಮಗ್ರಿಗಳನ್ನು ಕೊಟ್ಟು ಪೂಜೆ ಮಾಡಿಸಬೇಕು.

**ತರಬೇಕಾದ ಪೂಜಾಸಾಮಗ್ರಿಗಳು:**

- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆ ಬಟ್ಟಲು, ಬಿಡಿಯಾದ ಬಿಳಿ ಹೂವು ಮತ್ತು ಕಟ್ಟಿದ ಬಿಳಿ ಹೂವು.



- ಒಂದು ತಟ್ಟೆಯಲ್ಲಿ ತೆಂಗಿನಕಾಯಿ ಎರಡು, ವೀಳೆಯದೆಲೆ ಮತ್ತು ಅಡಿಕೆ ತಲಾ ಎರಡೆರಡು, ಗಂಧದಕಡ್ಡಿಗಳು, 11 ಬಾಳೆಹಣ್ಣುಗಳು ಮತ್ತು ದಕ್ಷಿಣೆ ಕಾಸು.
- ಮತ್ತೊಂದು ತಟ್ಟೆಯಲ್ಲಿ ಗಂಡಿಗೆಂದು ತಂದಿರುವ ವಸ್ತ್ರಾಭರಣಗಳು.

**ಸಿದ್ಧತೆ :**

ಪೂಜೆಯಾದ ಬಳಿಕ, ಮೊದಲೇ ಸಿದ್ಧಪಡಿಸಿದ ಪೂರ್ವ ಅಥವಾ ಉತ್ತರಾಭಿಮುಖವಾಗಿ ಹಾಕಿರುವ ಒಂದು ಮಣೆ, ಮಣೆಯ ಮೇಲೆ ಬಿಳಿಯ ವಸ್ತ್ರ ಹಾಗೂ ಮಣೆಯ ಎರಡೂ ಬದಿಗಳಲ್ಲಿ ಎರಡು ದೀಪಸ್ತಂಭಗಳು ಮತ್ತು ಅವುಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಿರಬೇಕು. ಆ ಮಣೆಯ ಎದುರಿಗೆ ಬಲಭಾಗದಲ್ಲಿ ಮತ್ತೊಂದು ಮಣೆಯನ್ನು ಪುರೋಹಿತರು ಕುಳಿತುಕೊಳ್ಳುವ ಸಲುವಾಗಿ ಹಾಕಿರಬೇಕು. ಇನ್ನೆರಡು ಮಣೆಗಳನ್ನು ಗಂಡು ಮತ್ತು ಹೆಣ್ಣಿನ ತಂದೆಯರು ಅಥವಾ ಆ ಸ್ಥಾನದಲ್ಲಿರುವವರು ಪುರೋಹಿತರ ಎದುರು ಕುಳಿತುಕೊಳ್ಳಲು ಸಿದ್ಧಪಡಿಸಿಕೊಳ್ಳಬೇಕು.

- ನಂತರ, ಸರ್ವಾಲಂಕೃತಳಾದ ಹೆಣ್ಣನ್ನು ಮಣೆಯ ಬಲಭಾಗದಿಂದ ಬರಮಾಡಿಕೊಂಡು ಬಲಗಾಲನ್ನು ಮೊದಲು ಇರಿಸುವಂತೆ ಮಣೆಯ ಮೇಲೆ ಕೂರಿಸಬೇಕು.
- ಹೆಣ್ಣು ಕುಳಿತಿರುವ ಮಣೆಯ ಮುಂದೆ ಅರಿಶಿನ ಕುಂಕುಮ, ಅಕ್ಷತೆ ಬಟ್ಟಲು, ಬಿಡಿಯಾದ ಬಿಳಿ ಹೂವು ಮತ್ತು ಕಟ್ಟಿದ ಬಿಳಿ ಹೂವುಗಳಿರುವ ತಟ್ಟೆಯನ್ನಿಡಬೇಕು.
- ಮಣೆಯ ಮೇಲೆ ಕುಳಿತಿರುವ ಹೆಣ್ಣಿನ ಎಡಭಾಗದಲ್ಲಿ ಒಂದು ಕುರ್ಚಿಯನ್ನು ಹಾಕಿ ಅದರ ಮೇಲೆ ಗಂಡನ್ನು ಕರೆತಂದು ಕೂರಿಸಬೇಕು. ನಂತರ, ಗಂಡಿನ ಮನೆಯವರು ತಂದಿರುವ ಕೆಳಗೆ ನಮೂದಿಸಿರುವ ಒಂಬತ್ತು ತಟ್ಟೆಗಳನ್ನು ಹೆಣ್ಣಿನ ಮುಂದೆ ಓರಣವಾಗಿ ಜೋಡಿಸಬೇಕು.
- ಮೊದಲನೆಯ ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆ ಬಟ್ಟಲು, ಬಿಡಿಯಾದ ಬಿಳಿ ಹೂವು ಮತ್ತು ಕಟ್ಟಿದ ಬಿಳಿ ಹೂವಿನ ಹಾರಗಳು ಎರಡು.
- ಎರಡನೆಯ ತಟ್ಟೆಯಲ್ಲಿ ರೇಷ್ಮೆ ಸೀರೆ, ರವಿಕೆ ಮತ್ತು ಎರಡು ವೀಳೆಯದೆಲೆ,

ಎರಡು ಅಡಿಕೆ, ಬಾಳೆಹಣ್ಣು ಎರಡು, 11 ರೂಪಾಯಿಯ ದಕ್ಷಿಣೆ ಕಾಸು ಜೊತೆಗೆ ಗಂಡಿನ ಮನೆಯವರ ಅನುಕೂಲಕ್ಕೆ ತಕ್ಕಂತೆ ಉಂಗುರದೊಂದಿಗೆ ಒಡವೆಗಳು.

- ಮೂರನೆಯ ತಟ್ಟೆಯಲ್ಲಿ ವೀಳೆಯದೆಲೆ ಮತ್ತು ಅಡಿಕೆಗಳು.
- ನಾಲ್ಕನೆಯ ತಟ್ಟೆಯಲ್ಲಿ ಬಾಳೆಹಣ್ಣುಗಳು.
- ಐದನೆಯ ತಟ್ಟೆಯಲ್ಲಿ ಸಿಹಿತಿನಿಸು.
- ಆರನೆಯ ತಟ್ಟೆಯಲ್ಲಿ ಪಂಚಫಲಗಳು (ಅನಾನಸ್, ಸೇಬು, ಕಿತ್ತಳೆ, ಸಪೋಟ ಮತ್ತು ಮೋಸಂಬಿ).
- ಏಳನೆಯ ಬೇಸಿನ್ನಲ್ಲಿ ಗಂಟಿನ ಸಾಮಗ್ರಿಗಳಾದ ಕಡ್ಲೆ ಪಪ್ಪು 1½ ಸೇರು, ಅರಿಶಿನ ಕುಂಕುಮದ ಪೊಟ್ಟಣಗಳು ತಲಾ ಎರಡೆರಡು, ವೀಳೆಯದೆಲೆ – 11, ಅಡಿಕೆ – 100 ಗ್ರಾಂ, ತಳದ ಕೊಬ್ಬರಿ ಬಟ್ಟಲು – 2, ಖರ್ಜೂರ – 5, ಬೆಲ್ಲದ ಉಂಡೆ – 5, ಅರಿಶಿನದ ಕೊಂಬು – 5, ಕಟ್ಟಿದ ಬಿಳಿಯ ಹೂವು – 1 ಮೊಳ, ಬಾಳೆಯಹಣ್ಣು – 11 ಮತ್ತು ಹಸಿರು ಬಣ್ಣದ ರವಿಕೆ ಬಟ್ಟೆ – 1 ಮತ್ತು ಗಂಟು ಕಟ್ಟುವ ಬಿಳಿ ವಸ್ತ್ರದ ಜೊತೆಗೆ ಸ್ವಲ್ಪ ದಾರ.
- ಎಂಟು ಮತ್ತು ಒಂಭತ್ತನೆಯ ತಟ್ಟೆಗಳಲ್ಲಿ, ಹೆಣ್ಣು ಮತ್ತು ಗಂಡಿನ ಪೋಷಕರು ಮಾಡಿಕೊಳ್ಳುವ ತಾಂಬೂಲದ ತಟ್ಟೆಗಳ ಬದಲಾವಣೆಗಳಿಗೆಂದು ತಲಾ ಒಂದು ತಟ್ಟೆಯಲ್ಲಿ, ನಾರಿರುವ ತೆಂಗಿನಕಾಯಿ – 1, ವೀಳೆಯದೆಲೆ – 2, ಅಡಿಕೆ – 2, ರಸಬಾಳೆ – 2, ಕಟ್ಟಿದ ಬಿಳಿಯ ಹೂವಿನ ಹಾರ – ಒಂದು ಮತ್ತು ದಕ್ಷಿಣೆ ಕಾಸು 11 ರೂಪಾಯಿಯನ್ನು ಸಿದ್ಧಪಡಿಸಬೇಕು.

**ವಿಧಾನ:**

- ಆಮೇಲೆ, ಗಂಡಿನ ಸೋದರತ್ತೆಯವರು ಅಥವಾ ಅಕ್ಕನವರು ಬಂದು ಮಣೆಯ ಮೇಲೆ ಕುಳಿತಿರುವ ಹೆಣ್ಣಿನ ಹಣೆಗೆ ಕುಂಕುಮವನ್ನು ಎರಡು ಬಾರಿ ಇಟ್ಟು ಹೂವನ್ನು ಕೊಡಬೇಕು.
- ಹೆಣ್ಣಿನ ಕೈಯಲ್ಲಿ ಅರಿಶಿನ ಕುಂಕುಮದ ತಟ್ಟೆಗೆ ಮೂರು ಬಾರಿ ನಮಸ್ಕಾರ ಮಾಡಿಸಬೇಕು.
- ಹೆಣ್ಣಿಗೆಂದು ತಂದಿರುವ ಒಡವೆ ವಸ್ತ್ರಗಳಿರುವ ತಟ್ಟೆಗೂ ಮೂರು ಬಾರಿ ನಮಸ್ಕಾರ ಮಾಡಿಸಿದ ಮೇಲೆ ಆ ತಟ್ಟೆಯನ್ನು ಆಕೆಗೆ ಕೊಟ್ಟು ತಟ್ಟೆಯಲ್ಲಿರುವ ವಸ್ತ್ರಾಭರಣಗಳನ್ನು ಧರಿಸಿಕೊಂಡು ಬರಲು ಹೇಳಬೇಕು.



- ಹೆಣ್ಣಿನ ಸೋದರತ್ತೆಯವರು ಅಥವಾ ಅಕ್ಕನವರು ಬಂದು ಕುರ್ಚಿಯಲ್ಲಿ ಕುಳಿತಿರುವ ಗಂಡಿನ ಹಣೆಗೆ 2 ಬಾರಿ ಕುಂಕುಮವನ್ನು ಇಟ್ಟು, ಹೂವನ್ನು ಕೊಡಬೇಕು.
- ಗಂಡಿನ ಕೈಯಿಂದ ಅರಿಶಿನ ಕುಂಕುಮದ ತಟ್ಟೆಗೆ ಮೂರು ಬಾರಿ ನಮಸ್ಕಾರ ಮಾಡಿಸಬೇಕು.

ಗಂಡಿಗೆಂದು ತಂದಿರುವ ವಸ್ತ್ರಗಳನ್ನಿರಿಸಿರುವ ತಟ್ಟೆಗೂ ಸಹ ಗಂಡಿನ ಕೈಯಲ್ಲಿ ಮೂರು ಸಲ ನಮಸ್ಕಾರ ಮಾಡಿಸಿ ಆ ತಟ್ಟೆಯನ್ನು ಆತನಿಗೆ ಕೊಟ್ಟು ವಸ್ತ್ರ ಬದಲಾಯಿಸಿಕೊಂಡು ಬರಲು ಹೇಳಬೇಕು.

ಹೆಣ್ಣು ಮತ್ತು ಗಂಡು ಇಬ್ಬರೂ ನವವಸ್ತ್ರಾಭರಣಗಳನ್ನು ಧರಿಸಿ ಬಂದ ಮೇಲೆ ಹೆಣ್ಣನ್ನು ಮಣೆಯ ಮೇಲೂ ಗಂಡನ್ನು ಕುರ್ಚಿಯ ಮೇಲೂ ಕೂರಿಸಬೇಕು.

- ಹೆಣ್ಣಿನ ಸೋದರತ್ತೆಯವರು ಅಥವಾ ಅಕ್ಕನವರು ಮೊದಲು ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.
- ಹೆಣ್ಣಿನ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಆಕೆಯ ಕೊರಳಿಗೆ ಹೂವಿನ ಹಾರವನ್ನು ಹಾಕಬೇಕು.
- ಗಂಡಿನ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಆತನ ಕೊರಳಿಗೆ ಹೂವಿನ ಹಾರವನ್ನು ಹಾಕಬೇಕು.
- ನಂತರ, ಗಂಡಿನ ಸೋದರತ್ತೆಯವರು ಅಥವಾ ಅಕ್ಕನವರು ಮೊದಲು ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.
- ಹೆಣ್ಣಿನ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಆಕೆಯ ಕೊರಳಿಗೆ ಹೂವಿನ ಹಾರವನ್ನು ಹಾಕಬೇಕು.
- ಗಂಡಿನ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಆತನ ಕೊರಳಿಗೆ ಹೂವಿನ ಹಾರವನ್ನು ಹಾಕಬೇಕು ನಂತರ, ಪುರೋಹಿತರಿಗೆ ಗಣಪತಿ ಪೂಜೆಯನ್ನು ಮಾಡಲು ಪೂಜಾಸಾಮಗ್ರಿಗಳನ್ನು ಕೊಡಬೇಕು.

**ಗಣಪತಿ ಪೂಜೆಗೆ ಸಿದ್ಧಪಡಿಸುವ ಪೂಜಾ ಸಾಮಗ್ರಿಗಳು:**

ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆ ಬಟ್ಟಲು, ಬಿಳಿಯ ಬಿಡಿ ಹೂವುಗಳು, ಕಟ್ಟಿದ ಹೂವು, ಗಂಧದ ಕಡ್ಡಿ, ಕರ್ಪೂರ, ವೀಳೆಯದೆಲೆ – 2, ಅಡಿಕೆ – 2, ಬಾಳೆಹಣ್ಣು – 2, ತೆಂಗಿನಕಾಯಿ – 1, ಸ್ವಲ್ಪ ಗರಿಕೆ, ಗಂಟೆ, ಪಂಚಪತ್ರೆ, ಉದ್ಧರಣೆ, ಆರತಿ ತಟ್ಟೆ, ಬೆಂಕಿ ಪೊಟ್ಟಣ ಮತ್ತು ದಕ್ಷಿಣೆ ಕಾಸು.

ನಂತರ, ಪುರೋಹಿತರ ಪಕ್ಕ ಮತ್ತು ಎದುರಿನಲ್ಲಿ ಎರಡು ಮಣೆಗಳನ್ನು ಹಾಕಿ ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಿ ಅವುಗಳ ಮೇಲೆ ಹೆಣ್ಣು ಮತ್ತು ಗಂಡಿನ ತಂದೆಯರನ್ನು ಅಥವಾ ಅವರ ಸ್ಥಾನದಲ್ಲಿ ಇರುವ ಹಿರಿಯರನ್ನು ಮಣೆಗಳ ಮೇಲೆ ಕೂರಿಸಿದ ಮೇಲೆ ಅವರ ಕೈಗಳಿಗೆ ಬದಲಾಯಿಸಿಕೊಳ್ಳಲು ಇರುವ ತಾಂಬೂಲದ ತಟ್ಟೆಗಳನ್ನು ಕೊಡಬೇಕು.

- ಇದಾದ ಮೇಲೆ, ಪುರೋಹಿತರು ಗಣಪತಿ ಪೂಜೆಯನ್ನು ನೆರವೇರಿಸಬೇಕು.
- ಪುರೋಹಿತರು ಲಗ್ನಪತ್ರಿಕೆಯನ್ನು ಓದಿ ನೆರೆದಿರುವ ಎಲ್ಲರಿಗೂ ತಿಳಿಸಬೇಕು.
- ಗಂಡು ಮತ್ತು ಹೆಣ್ಣಿನ ತಂದೆಯರು ಪರಸ್ಪರ ಹಣೆಗೆ ಮೂರು ಬಾರಿ ಕುಂಕುಮವನ್ನು ಇಡಬೇಕು.
- ನಂತರ, ಇಬ್ಬರು ತಂದೆಯಂದಿರು ತಮ್ಮ ಕೈಗಳಲ್ಲಿರುವ ತಾಂಬೂಲದ ತಟ್ಟೆಗಳನ್ನು ಬದಲಾಯಿಸಿಕೊಳ್ಳಬೇಕು.
- ನಂತರ, ಹೆಣ್ಣು ಮತ್ತು ಗಂಡನ್ನು ಅಕ್ಕಪಕ್ಕ ಹಾಕಲಾಗಿರುವ ಕುರ್ಚಿಗಳಲ್ಲಿ ಕೂರಿಸಬೇಕು.
- ಮುಂದೆ ಹೆಣ್ಣು ಮತ್ತು ಗಂಡು ಪರಸ್ಪರ ಬೆರಳುಗಳಿಗೆ ಉಂಗುರವನ್ನು ತೊಡಿಸಬೇಕು.

ಹೆಣ್ಣಿನ ಮನೆಯವರು ನೆರೆದಿರುವ ಎಲ್ಲಾ ಮುತ್ತೈದೆಯರಿಗೆ ಅರಿಶಿನ ಕುಂಕುಮ, ಅಕ್ಷತೆ ಮತ್ತು ಹೂವನ್ನು ಕೊಟ್ಟ ನಂತರ ಎಲ್ಲಾ ಆಹ್ವಾನಿತರನ್ನು ಲಘು ಉಪಹಾರದಿಂದ ಸತ್ಕರಿಸಿ ಫಲ ತಾಂಬೂಲವನ್ನು ವಿತರಿಸಬೇಕು.

ಗಂಡಿನ ಮನೆಯವರೂ ಸಹ ನೆರೆದಿರುವ ಎಲ್ಲಾ ಮುತ್ತೈದೆಯರಿಗೆ ಅರಿಶಿನ ಕುಂಕುಮ, ಅಕ್ಷತೆ ಮತ್ತು ಹೂವನ್ನು ಕೊಟ್ಟ ನಂತರ ಎಲ್ಲಾ ಆಹ್ವಾನಿತರಿಗೆ ಸಿಹಿ ಮತ್ತು ಖಾರವನ್ನು ಕೊಟ್ಟು ಸತ್ಕರಿಸಿ ಫಲ ತಾಂಬೂಲವನ್ನು ವಿತರಿಸಬೇಕು.

- ನಂತರ, ಹೆಣ್ಣಿನ ಮತ್ತು ಗಂಡಿನ ಕಡೆಯವರನ್ನು ಸೇರಿಸಿ ಒಂಭತ್ತು ಅಥವಾ ಹನ್ನೊಂದು ಮುತ್ತೈದೆಯರು ಒಬ್ಬೊಬ್ಬರಾಗಿ ಬಂದು ಮೊದಲು ದೀಪಸ್ತಂಭಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.



- ನಂತರ ಗಂಡಿನ ಕೆನ್ನೆ, ಕೈ ಮತ್ತು ಪಾದಗಳಿಗೆ ಅರಿಶಿನ ಹಚ್ಚಿ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಆತನ ಕೈಗೆ ಹೂವನ್ನು ಕೊಡಬೇಕು.
- ಆಮೇಲೆ ಹೆಣ್ಣಿನ ಕೆನ್ನೆ, ಕೈ ಮತ್ತು ಪಾದಗಳಿಗೆ ಅರಿಶಿನ ಹಚ್ಚಿ ಹಣೆಗೆ ಎರಡು ಬಾರಿ ಕುಂಕುಮವನ್ನಿಟ್ಟು ಆಕೆಯ ಕೈಗೆ ಹೂವನ್ನು ಕೊಡಬೇಕು.
- ನಂತರ ಮುತ್ತೈದೆಯರು ತಮ್ಮ ಸೆರಗೊಡ್ಡಿ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳ ತಾಂಬೂಲವನ್ನು ಗಂಡು ಹೆಣ್ಣುಗಳಿಬ್ಬರ ಕೈಗಳಿಂದ ಪಡೆಯಬೇಕು.
- ಎಲ್ಲಾ ಮುತ್ತೈದೆಯರ ಸರದಿಯು ಮುಗಿದ ಬಳಿಕ ಮೂವರು ಮುತ್ತೈದೆಯರು ಒಟ್ಟಿಗೆ ಸೇರಿಕೊಂಡು ಕೆಂಪು ನೀರಿನ ಆರತಿಯನ್ನು ಆರತಿ ಹಾಡು ಹೇಳಿಕೊಂಡು ಮಾಡಬೇಕು.
- ಆರತಿ ನೀರನ್ನು ದೇವಸ್ಥಾನದ ಅಥವಾ ಛತ್ರದ ಮುಂಬಾಗಿಲಿನಲ್ಲಿ ಎಡಗಡೆಯಿಂದ ಬಲಗಡೆ ಬರುವಂತೆ ಅಡ್ಡಲಾಗಿ ಸುರಿದು ಹಿಂದಿರುಗಿ ಬಂದು ಬರಿದಾದ ಆರತಿ ತಟ್ಟೆಯನ್ನು ಗಂಡು ಹೆಣ್ಣಿನ ಮುಂದೆ ತಾಂಬೂಲಕ್ಕಾಗಿ ಒಡ್ಡಬೇಕು.
- ಗಂಡು ಹೆಣ್ಣು ಒಟ್ಟಿಗೆ ಎರಡು ವೀಳೆಯದೆಲೆ ಮತ್ತು ಎರಡು ಅಡಿಕೆಗಳ ತಾಂಬೂಲವನ್ನು ದಕ್ಷಿಣೆ ಕಾಸಿನೊಂದಿಗೆ ಮುತ್ತೈದೆಯರಿಗೆ ನೀಡಬೇಕು.
- ಗಂಡು ಹೆಣ್ಣು ಇಬ್ಬರೂ ಅಲ್ಲಿ ನೆರೆದಿರುವ ಎಲ್ಲಾ ಹಿರಿಯರ ಪಾದಗಳಿಗೆ ನಮಸ್ಕರಿಸಿ ಅವರಿಂದ ಅಕ್ಷತೆಯ ಸಮೇತ ಆಶೀರ್ವಾದವನ್ನು ಪಡೆಯಬೇಕು.

**ಆಷಾಡಕ್ಕೆ ಸೊಸೆಯನ್ನು ತವರಿಗೆ ಕಳುಹಿಸುವುದು:**

ಈ ಶಾಸ್ತ್ರದ ಹಿನ್ನೆಲೆಯನ್ನು ಗ್ರಹಿಸಲು ಪ್ರಯತ್ನಿಸಿದರೆ ಅರಿವಾಗುವ ವಿಚಾರಗಳೆಂದರೆ, ನಮ್ಮ ದೇಶದ ಬಹು ಭಾಗವು ಹಳ್ಳಿಗಳಿಂದ ಕೂಡಿದ್ದು ಹೆಚ್ಚಿನ ಜನರ ಕಾಯಕವೆಂದರೆ ಬೇಸಾಯ. ಆಷಾಡ ಮಾಸದಲ್ಲಿ ವ್ಯವಸಾಯಕ್ಕೆ ಅನುಕೂಲಕರವಾದ ವಾತಾವರಣ ಇರುವುದರಿಂದ ಕುಟುಂಬದ ಸದಸ್ಯರೆಲ್ಲರು ಹೊಲ ಗದ್ದೆಗಳಲ್ಲಿ ಕಾರ್ಯನಿರತರಾಗಬೇಕಾಗಿರುವುದರಿಂದ ಅನಿವಾರ್ಯವಾಗಿ ನವದಂಪತಿಗಳನ್ನು ಬೇರ್ಪಡಿಸಲು ಈ ಉಪಾಯವನ್ನು ಹಮ್ಮಿಕೊಂಡಿರುವುದು ತಿಳಿದು ಬರುತ್ತದೆ. ಮತ್ತೊಂದು ವಿಚಾರವೆಂದರೆ,

ಆಷಾಡ ಮಾಸದಲ್ಲಿ ಹೆಣ್ಣು ಗರ್ಭಿಣಿಯಾದರೆ ಶಿಶುವಿನ ಜನನವು ಚಳಿಗಾಲದಲ್ಲಿ ಆಗುವುದರಿಂದ ಬಾಣಂತಿ ಮತ್ತು ಮಗುವಿನ ಆರೈಕೆ ಕಷ್ಟಕರವಾಗಿರುವುದೇ ಆಗಿದೆ. ಹಾಗಾಗಿ, ಅತ್ತೆ ಸೊಸೆಯರು ಒಂದೇ ಬಾಗಿಲಿನಲ್ಲಿ ಆಷಾಡ ಮಾಸದಲ್ಲಿ ಓಡಾಡಬಾರದೆಂಬ ನಿಯಮವನ್ನು ಬಳಕೆಗೆ ತಂದಿರುವುದು ಸೂಚ್ಯ.

- ಆಷಾಡ ಮಾಸ ಆರಂಭವಾಗುವ ಮುನ್ನಾ ಬರುವ ಅಮಾವಾಸ್ಯೆಗೂ ಮೊದಲು ಎರಡೂ ಕುಟುಂಬಗಳ ಒಪ್ಪಿಗೆಯ ಮೇರೆಗೆ ಮಗಳನ್ನು ತವರಿಗೆ ಕರೆದು ತರಲು ಒಂದು ಶುಭ ದಿನವನ್ನು ನಿಗದಿಪಡಿಸಿದ ಮೇಲೆ, ಆಕೆಯನ್ನು ತನ್ನ ಗಂಡನ ಮನೆಯಿಂದ ತವರಿಗೆ ಕರೆದು ತರುವುದು.
- ನಂತರ, ಆಷಾಡ ಮಾಸ ಮುಗಿದ ತರುವಾಯ ಬರುವ ಅಮಾವಾಸ್ಯೆಯನ್ನು ಕಳೆದ ಮೇಲೆ ಒಂದು ಶುಭ ದಿನವನ್ನು ನಿಗದಿಪಡಿಸಿಕೊಂಡು ಮತ್ತೆ ತಮ್ಮ ಮಗಳನ್ನು ಆಕೆಯ ಗಂಡನ ಮನೆಗೆ ಕಳುಹಿಸತಕ್ಕದ್ದು.
- ಮಗಳನ್ನು ತವರಿಗೆ ಕರೆದೋಯ್ದಾಗ ಮತ್ತು ಹಿಂದಿರುಗಿ ಆಕೆಯ ಗಂಡನ ಮನೆಗೆ ಕಳುಹಿಸುವಾಗ ನೆಂಟರು ಇಷ್ಟರಿಗೆ ಆಹ್ವಾನವನ್ನಿತ್ತು ಆ ಎರಡೂ ದಿನಗಳು ಹಬ್ಬದಡುಗೆಯನ್ನು ಮಾಡಿ ಎಲ್ಲರೊಂದಿಗೆ ಸಹಭೋಜನ ಮಾಡಿ ಆನಂದಿಸುವುದು.

**ನಾಗರಚೌತಿ ಶಾಸ್ತ್ರ:**

ಮದುವೆಯಾದ ವರ್ಷದೊಳಗೆ ಆಗಮಿಸುವ ಶ್ರಾವಣ ಮಾಸದ ನಾಲ್ಕನೆಯ ದಿನ ಅರ್ಥಾತ್ ನಾಗರ ಚತುರ್ಥಿಯ ದಿವಸ ಗಂಡನ ಮನೆಯವರು ನವದಂಪತಿಗಳ ಕೈಗಳಿಂದ ನಾಗರ ಕಲ್ಲಿಗೆ ಪೂಜೆಯನ್ನು ಮಾಡಿಸಬೇಕು. ಈ ಕಾರ್ಯಕ್ರಮವನ್ನು ಹಮ್ಮಿಕೊಂಡಾಗ ಬೀಗರಿಬ್ಬರು ತಮ್ಮ ನೆಂಟರು–ಇಷ್ಟರಿಗೆ ಕಾರ್ಯಕ್ರಮದಲ್ಲಿ ಭಾಗವಹಿಸಲು ಆಹ್ವಾನ ನೀಡಬೇಕು.

**ಸಿದ್ಧತೆ:**

ಸಂತೋಷದ ಕಾರ್ಯಕ್ರಮವನ್ನು ಇನ್ನಷ್ಟು ಉದ್ದೀಪನಗೊಳಿಸಲು ಇಡೀ ಮನೆಯನ್ನು ಶುಭ್ರಗೊಳಿಸಿ ಮಾವಿನ ತಳಿರು, ತೋರಣ ಮತ್ತು



ಹೂವುಗಳಿಂದ ಅಲಂಕರಿಸಬೇಕು.

- ಒಂದು ತಟ್ಟೆಯಲ್ಲಿ ಅರಿಶಿನ ಕುಂಕುಮ, ಅಕ್ಷತೆಯ ಬಟ್ಟಲು, ಬಿಡಿ ಹೂವುಗಳು ಮತ್ತು ಕಟ್ಟಿದ ಬಿಳಿಯ ಹೂವು.
- ಒಂದು ಬುಟ್ಟಿಯಲ್ಲಿ ನಾಗರ ಪೂಜೆಗೆಂದು ಎರಡು ತೆಂಗಿನಕಾಯಿಗಳು, ವೀಳೆಯದೆಲೆ–2, ಅಡಿಕೆ–2, ಬಾಳೆಹಣ್ಣು–2, ದಕ್ಷಿಣೆ ಕಾಸು –11 ರೂಪಾಯಿಗಳು, ಆರತಿ ತಟ್ಟೆ, ಕರ್ಪೂರ, ತುಪ್ಪದ ಬತ್ತಿಗಳು, ಗೆಜ್ಜೆವಸ್ತ್ರ, ಹಸೀಹಾಲು ಮತ್ತು ತುಪ್ಪ ಒಂದು ಲೋಟದಲ್ಲಿ ಮತ್ತು ಬೆಂಕಿಪೊಟ್ಟಣ.
- ಒಂದು ಬುಟ್ಟಿಯಲ್ಲಿ ಒಂದು ತಟ್ಟೆ, ವೀಳೆಯದೆಲೆ –1 ಕಟ್ಟು, ಅಡಿಕೆ – ¼ ಕೆ. ಜಿ ಮತ್ತು ಬಾಳೆಹಣ್ಣು –24.
- ಒಂದು ಚೊಂಬಿನಲ್ಲಿ ನೀರು.

***ಸೂಚನೆ:*** ದಂಪತಿಗಳು ತಮ್ಮ ಮದುವೆಯಲ್ಲಿ ಧಾರೆ ಶಾಸ್ತ್ರಕ್ಕೆ ಧರಿಸಿದ್ದ ವಸ್ತ್ರಗಳನ್ನು ಈ ಕಾರ್ಯಕ್ಕೆ ಧರಿಸಬೇಕು.

**ವಿಧಾನ:**

ನಿಗದಿ ಪಡಿಸಿದ ಶುಭ ಸಮಯದಲ್ಲಿ ದಂಪತಿಗಳಿಬ್ಬರೂ, ಮನೆಯವರು ಮತ್ತು ಆಹ್ವಾನಿತ ಎಲ್ಲಾ ಬಂಧು ಮಿತ್ರರೊಡಗೂಡಿ ತಮ್ಮ ಮನೆಯ ಸಮೀಪವಿರುವ ನಾಗರಕಟ್ಟೆಗೆ ತೆರಳಬೇಕು.

- ನಾಗರಕಲ್ಲುಗಳನ್ನು ದಂಪತಿಗಳಿಬ್ಬರೂ ನೀರಿನಿಂದ ಶುದ್ಧಗೊಳಿಸಬೇಕು.
- ಅರಿಶಿನ ಕುಂಕುಮ, ಹೂವನ್ನಿಟ್ಟು ಗೆಜ್ಜೆವಸ್ತ್ರದಿಂದ ನಾಗರಕಲ್ಲುಗಳನ್ನು ಅಲಂಕರಿಸಬೇಕು.
- ತಂದಿರುವ ತಾಂಬೂಲವನ್ನು ನೈವೇದ್ಯಕ್ಕಿಟ್ಟು ಗಂಧದಕಡ್ಡಿಗಳನ್ನು ಬೆಳಗಿಸಬೇಕು.
- ತಾಂಬೂಲವನ್ನು ನೈವೇದ್ಯ ಮಾಡಿ ಇಬ್ಬರೂ ತಲಾ ಒಂದೊಂದು ತೆಂಗಿನಕಾಯಿಯನ್ನು ಒಡೆಯಬೇಕು.
- ತಂದಿರುವ ತುಪ್ಪ ಮಿಶ್ರಿತ ಹಸೀಹಾಲನ್ನು ಉಪಯೋಗಿಸಿ ನಾಗರಕಲ್ಲಿಗೆ ಒಟ್ಟಿಗೆ ತನಿ ಎರೆಯಬೇಕು.
- ನಂತರ, ತುಪ್ಪದ ಬತ್ತಿಯ ಮಂಗಳಾರತಿಯನ್ನು ಮಾಡಬೇಕು.
- ದಂಪತಿಗಳು ತಾವು ಮೊದಲು ಮಂಗಳಾರತಿಯನ್ನು ತೆಗೆದುಕೊಂಡು

ನಂತರ ಅಲ್ಲಿ ನೆರೆದಿರುವವರಿಗೆಲ್ಲಾ ಮಂಗಳಾರತಿಯನ್ನು ಕೊಡಬೇಕು.

- ನಾಗದೇವರಿಗೆ ನಮಸ್ಕರಿಸಿ ತಮ್ಮಗಳ ಹಣೆಗೆ ಕುಂಕುಮವನ್ನು ಇರಿಸಿಕೊಂಡು ಹೂವನ್ನು ಮುಡಿಯಬೇಕು.
- ಆಮೇಲೆ, ಅಲ್ಲಿ ನೆರೆದಿರುವ ಐವರು ಹಿರಿಯ ಮುತ್ತೈದೆಯರಿಗೆ ಹೆಣ್ಣಿನ ಕೈಗಳಿಂದ ಅರಿಶಿನ ಕುಂಕುಮ ಮತ್ತು ಅಕ್ಷತೆಯನ್ನಿರಿಸಿ ಹೂವನ್ನು ಮತ್ತು ತಾಂಬೂಲವನ್ನು ಕೊಟ್ಟು ಅವರ ಪಾದಗಳಿಗೆರಗಿ ಅವರಿಂದ ಅಕ್ಷತೆಯ ಸಮೇತವಾದ ಆಶೀರ್ವಾದವನ್ನು ಪಡೆಯಬೇಕು.
- ನಂತರ, ನೆರೆದಿರುವ ಇತರರೆಲ್ಲರಿಗೂ ಅರಿಶಿನ ಕುಂಕುಮ ಮತ್ತು ಅಕ್ಷತೆಯನ್ನಿರಿಸಿ ಹೂವನ್ನು ಮತ್ತು ತಾಂಬೂಲವನ್ನು ಕೊಡಬೇಕು.
- ಕೆಲ ಹೊತ್ತು ಸುಧಾರಿಸಿಕೊಂಡು ಎಲ್ಲರೂ ಮನೆಯ ಕಡೆಗೆ ಹೊರಡುವುದು.
- ಮನೆಗೆ ಹಿಂದಿರುಗುವಾಗ ಯಾರಾದರೊಬ್ಬರು ದಂಪತಿಗಳಿಗಿಂತ ಮುಂದೆ ಇದ್ದು, ಚೊಂಬಿನಲ್ಲಿ ಉಳಿಸಿರುವ ನೀರನ್ನು ಮೂರು ಕಡೆ ನಡೆಯುವ ದಾರಿಗಡ್ಡವಾಗಿ ಎಡಗಡೆಯಿಂದ ಬಲಗಡೆ ಬರುವಂತೆ ಸುರಿದು ಅದನ್ನು ದಂಪತಿಗಳು ದಾಟಿಕೊಂಡು ಬರುವಂತೆ ಸೂಚಿಸಬೇಕು.

ಮನೆಗೆ ಹಿಂದಿರುಗಿದ ಮೇಲೆ, ಎಲ್ಲರೊಡಗೂಡಿ ಹಬ್ಬದಡುಗೆಯ ರುಚಿಯನ್ನು ಆಸ್ವಾದಿಸಿ ಸಂತೋಷಿಸುವುದಲ್ಲದೇ ವೀಳೆಯದೆಲೆಯ ತಾಂಬೂಲವನ್ನು ಸವಿಯಲು ಅನುವು ಮಾಡಿಕೊಡಬೇಕು.

## 16. ಅಂತ್ಯೇಷ್ಟಿ

ಜೀವಿಗೆ ಸಲ್ಲಲ್ಪಡುವ ಸಂಸ್ಕಾರಗಳಲ್ಲಿ ಕಡೆಯದೇ ಅಂತ್ಯೇಷ್ಟಿ. ಈ ಸಂಸ್ಕಾರದ ಕಾರಣವೇನೆಂದು ಅವಲೋಕಿಸಿದಾಗ ಗೋಚರವಾಗುವ ವಿಚಾರಗಳೆಂದರೆ ಜೀವಂತವಿದ್ದವರಿಗೆ ಮರಣಶೌಚದಿಂದ ಬಿಡುಗಡೆ ಹಾಗೂ ಭೌತಿಕ ಶರೀರದಿಂದ ಬೇರ್ಪಟ್ಟ ಆತ್ಮಕ್ಕೆ ಚಿರಶಾಂತಿಯ ಕೋರಿಕೆ. ಶರೀರದ ಅಂತ್ಯ ಯಾತ್ರೆಯಿಂದ ಮಾನವನ ಜೀವನಕ್ಕೆ ಅಂಕದ ಪರದೆ ಬೀಳುತ್ತದೆ. ಜೀವವು ದೇಹವನ್ನು ತ್ಯಜಿಸಿದ ನಂತರ ಭೌತಿಕ ಶರೀರವು ಪಂಚಭೂತಗಳಲ್ಲಿ ಬೆರೆತುಹೋಗುತ್ತದೆ. ಬದುಕಿರುವವರೆಗೂ ಪಂಚತತ್ವಗಳು ವ್ಯಕ್ತಿಯ ಶರೀರದಲ್ಲಿ ಕಾಲಾನುಸಾರ ಬೆಳೆಯುತ್ತಾ ಹೋಗಿ ಆನಂತರ ಅಡಗಿಕೊಳ್ಳುತ್ತದೆ. ಉನ್ನತಿಯಿಂದ ಬೆಳೆದ ಶರೀರವು ಅವನತಿಯಲ್ಲಿ ಕಣ್ಮರೆಯಾಗುತ್ತದೆ. ಇದುವೆ



ಪ್ರಕೃತಿಯ ಮೂಲ ನಿಯಮ. ಜೀವಿಸಿರುವವರೆಗೆ ಬದುಕಿನುದ್ದಕ್ಕೂ ವಿವಿಧ ಸಂಸ್ಕಾರಗಳಿಂದ ಸಂಪನ್ನವಾದ ಜೀವಕ್ಕೆ ಮರಣಾನಂತರದಲ್ಲಿಯೂ ಸೂಕ್ತ ಸಂಸ್ಕಾರಗಳು ದೊರೆತು ಸದ್ಗತಿಯು ಪ್ರಾಪ್ತವಾಗಲಿ ಎಂಬ ಸದಾಶಯ ಇಲ್ಲಿದೆ. ಅಮರನಾದ ಆತ್ಮನ ಅನಾದ್ಯನಂತ ಪ್ರಯಾಣದಲ್ಲಿ ಇಹದ ಬದುಕು ಒಂದು ಮಜಲಾದರೆ ಪರದ ಬದುಕು ಮತ್ತೊಂದು ಮಜಲು. ವಾಸ್ತವತೆ ಹೀಗೆನಿಸಿರುವಾಗ ಇಹಪರಗಳೆರಡಕ್ಕೂ ಸಲ್ಲುವಂತೆ ಬದುಕಬೇಕಾದ ಹೊಣೆಗಾರಿಕೆ ನಮ್ಮದು.

ಧರ್ಮಶಾಸ್ತ್ರಗಳನ್ವಯ ಸಾವೆಂಬುದು ಅತ್ಯಂತ ಸಹಜ ಘಟನೆ. ಹುಟ್ಟಿದವರೆಲ್ಲರು ಒಂದಿಲ್ಲೊಂದು ದಿನ ಸಾಯಲೇಬೇಕು. ಹೀಗೆ ಸಹಜ ಮತ್ತು ಅನಿವಾರ್ಯ ಸಂಗತಿಗಳಾದ, ಹುಟ್ಟಿಗಾಗಿ ಹರ್ಷಿಸುವುದಾಗಲೀ ಸಾವಿಗಾಗಿ ಶೋಕವಾಗಲೀ ಸಲ್ಲದು. ಮರಣವೆಂಬುದು ಒಂದು ಮಹಾಯಾತ್ರೆ ನಂಬಿಕೆಯಂತೆ ಆತ್ಮನು ದೇಹವನ್ನು ತೊರೆದು ಪರಲೋಕದತ್ತ ಗೈಯ್ಯುವ ಪ್ರಯಾಣ. ಆದ್ದರಿಂದ ಜೀವಿಗಳೆಲ್ಲರು ಯಾತ್ರಿಕರ ಮನೋಭಾವನೆಯನ್ನು ತಳೆದು, ಯಾತ್ರೆಗೆ ಹೊರಡುವವರು ಸುಖ ಪ್ರಯಾಣವನ್ನು ಹೊಂದಲಿ ಎಂಬ ಆಶಯದೊಂದಿಗೆ ಬಂಧು ಬಾಂಧವರು ಸಹಕರಿಸಬೇಕು.

**ಅಂತ್ಯೇಷ್ಟಿ ವಿಧಿಗಳ ಹಿನ್ನೆಲೆ:**

**ಮಹಾಪ್ರಯಾಣದ ಸಿದ್ಧತೆ** ಯಾವುದೇ ವ್ಯಕ್ತಿಗೆ ತನ್ನ ಮರಣಕಾಲವು ಸಮೀಪಿಸಿದೆ ಎಂಬ ಅರಿವಾದಾಗ ಕೆಲವು ಸೂಚನೆಗಳು ಅವರಿಗೆ ಗೋಚರವಾಗುವುದು ಸಹಜ. ಅವುಗಳ್ಯಾವುವೆಂದರೆ; ತನ್ನ ಸಂಪೂರ್ಣ ದೇಹದ ನೆರಳನ್ನೇನಾದರು ಗಮನಿಸುವ ಸ್ಥಿತಿಯಲ್ಲಿದ್ದರೆ ಶಿರದ ನೆರಳು ಕಾಣಿಸುವುದಿಲ್ಲ ಜೊತೆಗೆ ವ್ಯಕ್ತಪಡಿಸಲಾಗದ ಭಯಗ್ರಸ್ಥ ಸ್ಥಿತಿಯಲ್ಲಿದ್ದು ಹಿಂದಿನ ಜನ್ಮಗಳ ನೆನಪುಗಳು ಮರುಕಳಿಸುತ್ತಿರುತ್ತವೆ. ಇಂತಹ ಸೂಚನೆಗಳಿಂದ ವಂಚಿತರಾಗುವವರು ಯಾರೆಂದರೆ ಅಪಘಾತಕ್ಕೊಳಗಾಗಿ ಜೀವ ತೆತ್ತವರು, ಪ್ರಜ್ಞಾಹೀನ ಸ್ಥಿತಿಯಲ್ಲೇ ಮರಣ ಹೊಂದುವವರು ಮತ್ತು ಕೃತಕ ಜೀವಾಧಾರಗಳೊಂದಿಗೆ ಜೀವನ್ಮರಣ ಸ್ಥಿತಿಯನ್ನೆದುರಿಸುವವರು. ಮರಣಶಯ್ಯೆಯಲ್ಲಿರು ವವರ ಗಮನವನ್ನು ಭಗವಂತನೆಡೆಗೆ ಸೆಳೆಯಲು ವಿಷ್ಣುಸಹಸ್ರನಾಮ, ರಾಮನಾಮ ಭಜನೆ ಅಥವಾ ಗೋವಿಂದ ಭಜನೆಯನ್ನು ಮೆಲುದನಿಯಲ್ಲಿ ಕೇಳಿಸುತ್ತಿರಬೇಕು. ಜೀವಿತಾವಧಿಯಲ್ಲಿ ಬದುಕಿನುದ್ದಕ್ಕೂ ಸತ್ಕಾರ್ಯ ಸತ್ಕರ್ಮಗಳನ್ನಷ್ಟೇ ಪಾಲಿಸಬೇಕೆಂಬ ಅರಿವಿಲ್ಲದಿದ್ದರು ಅಥವಾ

ಅರಿವಿದ್ದರೂ, ಜೀವದ ಕರ್ಮಕ್ಕನುಸಾರವಾಗಿ ಜೀವನ ನಡೆಸಿದ ಬಳಿಕ, ಧೃತಿಗೆಡದೆ ನಿರ್ಭಯವಾಗಿ ಮರಣವನ್ನು ಸ್ವಾಗತಿಸುತ್ತಾ ಆಲಸ್ಯವಿಲ್ಲದೆ ತಾನು ತಿಳಿದೋ, ತಿಳಿಯದೆಯೋ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಯಾವುದೇ ವ್ಯಕ್ತಿಯು, ತನ್ನ ಶರೀರದ ಅನಾರೋಗ್ಯದ ನಿಮಿತ್ತ ಪ್ರಾಯಶ್ಚಿತ್ತ ಮಾಡಿಕೊಳ್ಳಲಾಗದ ಸನ್ನಿವೇಶಗಳಲ್ಲಿ ಬಂಧು ಬಾಂಧವರು ಯಥಾಶಕ್ತಿ ಸಹಕರಿಸಬೇಕಾದ್ದು ಅವರ ಕರ್ತವ್ಯ. ಮುಂದೆ ಮರಣ ಸನ್ನಿಹಿತವಾದ ಸಮಯದಲ್ಲಿ ವ್ಯಕ್ತಿಯ ಬಾಯಿಗೆ ಗಂಗಾಜಲವನ್ನೋ ತುಲಸೀಜಲವನ್ನೋ ಬಿಡುವುದು ವಾಡಿಕೆ.

**ಆತುರದಾನ** ಮರಣಾಸನ್ನ ವ್ಯಕ್ತಿಯು ದಾನವನ್ನು ಮಾಡಬೇಕೆಂದು ಶಾಸ್ತ್ರಗಳ ಪ್ರಕಾರ ಸರ್ವ ವಿಧಿತ. ಗರುಡ ಪುರಾಣದನ್ವಯ ಉಲ್ಲೇಖಿಸಿರುವ ಅಷ್ಟ ಮಹಾದಾನಗಳ ವಸ್ತುಗಳೆಂದರೆ ತಿಲ, ಲೋಹ, ಸುವರ್ಣ, ಹತ್ತಿ, ಲವಣ, ಸಪ್ತಧಾನ್ಯ, ಭೂಮಿ ಮತ್ತು ಆಕಳು. ಇವುಗಳ ಜೊತೆಗೆ ಬೆಲ್ಲ ಮತ್ತು ತುಪ್ಪಗಳನ್ನು ಸೇರಿಸಿದರೆ ದಶದಾನವೆನಿಸುತ್ತದೆ. ಮರಣಕಾಲದಲ್ಲಿ ತಿಲದಾನ ಮರಣಾನಂತರ ತಿಲ ಹೋಮ, ಜಲಾಂಜಲಿಯನ್ನು ಕೊಡುವಲ್ಲಿ ತಿಲಾಂಜಲಿ. ಅಪರಕರ್ಮಗಳಲ್ಲಿ ತಿಲವನ್ನು ಉಪಯೋಗಿಸುವ ಮೂಲೋದ್ದೇಶ ತಿಲಕ್ಕಿರುವ ಮಹಿಮೆಗಳಾದ ಔಷಧೀಯ, ಆರೋಗ್ಯವರ್ಧಕ ಗುಣ ಮತ್ತು ಕ್ರಿಮಿನಾಶಕ ಶಕ್ತಿಯೊಂದಿಗೆ ಹೋಮ ಮಾಡುವ ಜಾಗದಲ್ಲಿ ತಿಲವನ್ನು ಎರಚುವ ಕಾರಣದಿಂದ ಆ ಜಾಗದಲ್ಲಿ ಪೀಡಾಕಾರಕ ರೋಗಾಣುಗಳ ನಾಶದ ಕಾರ್ಯವೂ ನೆರವೇರುತ್ತದೆ. ಅಷ್ಟೇ ಅಲ್ಲದೇ ತಿಲವು ಸ್ನಿಗ್ಧತೆಯ ಪ್ರತೀಕ. ಅರ್ಪಿಸುವ ತಿಲಾಂಜಲಿಯಾದರೂ ಪಿತೃಗಳೊಂದಿಗೆ ಜೀವದ ಸುಮಧುರ ಸಂಬಂಧ ಸ್ಥಾಪನೆಯಾಗಲಿ ಎಂಬ ಉದ್ದೇಶ.

**ಮುಕ್ತಿ** ಪ್ರಾಚೀನರ ಪ್ರಕಾರ ಜೀವದ ಪರಮ ಪುರುಷಾರ್ಥವೆಂದರೆ ಮುಕ್ತಿ, ಭವತಾಪವನ್ನು ಜನ್ಮಾಂತರಗಳ ಅನಾದಿಯಾದ ಚಕ್ರವನ್ನು ಕೊನೆಗೊಳಿಸಿಕೊಳ್ಳುವ ಹಂಬಲ. ಜೀವಿಗಳಲ್ಲಿ ಇದು ಕೆಲವರಿಗೆ ಸುವ್ಯಕ್ತವಾಗಿದ್ದರೆ ಇನ್ನು ಕೆಲವರಲ್ಲಿ ಅವ್ಯಕ್ತವಾಗಿದ್ದೀತು. ಹೇಗೇ ಇದ್ದರೂ ಮರಣ ಕಾಲದಲ್ಲಂತೂ ಆ ಬಯಕೆ ತೀವ್ರವಾಗಿ ಇರುವ ಸಾಧ್ಯತೆ ಹೆಚ್ಚು ಎಂಬುದು ದೃಢ ನಂಬಿಕೆ. ಜೀವಮಾನವಿಡೀ ಮುಕ್ತಿಯ ಸಲುವಾಗಿ ಪ್ರಯತ್ನಿಸದಿದ್ದರೂ ಅಂತ್ಯಕಾಲದಲ್ಲಿ ಸ್ವಲ್ಪ ಪ್ರಯತ್ನಿಸಿದರೂ ಸಾಕು, ಮುಕ್ತಿಯು



ಸುಲಭದಲ್ಲಿ ಲಭ್ಯವಾಗುವುದೆಂದು ಪುರಾಣಗಳ ಭರವಸೆ. ಹಾಗಾಗಿ ಕೇವಲ ಹರಿನಾಮಸ್ಮರಣೆಯಿಂದ, ಗಂಗಾಪಾನ ಮತ್ತು ತುಲಸೀಜಲ ಪಾನ ಮಾಡುವುದರಿಂದ ಮುಕ್ತಿ ದೊರೆಯುವಿಕೆ ನಿಶ್ಚಿತವೆಂಬುದು ಗಾಢವಾದ ನಂಬಿಕೆ. ದುರಾದೃಷ್ಟವಶಾತ್ ಜೀವದ ಕರ್ಮಕ್ಕನುಸಾರವಾಗಿ ಈ ಭಾಗ್ಯವು ಎಲ್ಲರಿಗೂ ಲಭ್ಯವಿಲ್ಲವೆಂಬುದೇ ವಾಸ್ತವ. ಆ ಕಾರಣದಿಂದಲೇ ಮರಣ ಪೂರ್ವದಲ್ಲಿ ನಡೆಸಬೇಕಾಗಿದ್ದ ಕ್ರಿಯೆಗಳನ್ನು ಮರಣಾನಂತರದಲ್ಲಿ ಮಾಡಬೇಕಾಗಿರುವುದು ಅನಿವಾರ್ಯ.

**ಸದ್ಗತಿಗೆ ಕೇಶತ್ಯಾಗ** ಪುತ್ರಾದಿಗಳು ಸ್ವಾಭಾವಿಕವಾಗಿ ಕರ್ತೃಗಳಾಗುವುದರಿಂದ, ಪಿತೃಮೇಧ ಎಂಬ ಹೆಸರೇ ಸೂಚಿಸುವಂತೆ ಅದೊಂದು ಯಜ್ಞ. ಆ ಯಜ್ಞಕ್ಕೆ ತೊಡಗುವ ವ್ಯಕ್ತಿಗಳು ಶುದ್ಧರಾಗಿರಬೇಕೆಂಬ ಬಯಕೆಯಿಂದ ಕೃಚ್ಛತ್ರಯವೂ ಕ್ಷೌರವು ಅಶೌಚನಿವಾರಕ ಎಂಬ ನಿಟ್ಟಿನಲ್ಲಿ ಅವಶ್ಯವಾಗಿದೆ.

**ಶವ ಸ್ನಾನ** ಶವವನ್ನು ಸ್ಮಶಾನಕ್ಕೆ ಒಯ್ಯುವ ಮೊದಲು ಶವಕ್ಕೆ ಸ್ನಾನ ಮಾಡಿಸಬೇಕೆಂಬುದು ಶಾಸ್ತ್ರವಿಧಿ. ಜೀವಂತವಾಗಿದ್ದವರಿಗೆ ಸ್ನಾನದಿಂದ ಪ್ರಯೋಜನವುಂಟು, ಜೀವವೇ ಇಲ್ಲದ ದೇಹಕ್ಕೆ ಸ್ನಾನವಾದರೂ ಏಕೆ? ಎಂಬ ಸರಳ ಪ್ರಶ್ನೆಗೆ ದೊರಕುವ ಉತ್ತರ, ಜಲಸ್ನಾನವೇನಿದ್ದರೂ ಶರೀರಕ್ಕೆ ಮಾತ್ರ ಮನಸ್ಸಿಗಲ್ಲಾ. ಶರೀರ ಶುದ್ಧಿಯಾಯಿತು ಎಂದರೆ ಮನಸ್ಸಿಗೆ "ನಾನು ಶುದ್ಧನಾದೆ" ಎಂಬ ಭಾವನೆ ಮೂಡುವುದರೊಂದಿಗೆ ತತ್ಫಲವಾಗಿ ಶುದ್ಧಿಯ ಸಿದ್ಧಿಯಾಗುತ್ತದೆ. ಹಾಗಾಗಿ, ಮೃತ ಶರೀರಕ್ಕೆ ಸ್ನಾನ ಮಾಡಿಸಿದರೆ, ಜೀವಾತ್ಮವು ಶುದ್ಧಿಯ ಭಾವನೆಯನ್ನು ಹೊಂದೀತೆಂಬ ನಂಬಿಕೆ. ಶವಕ್ಕೆ ಮಾಡಿಸುವ ಸ್ನಾನವು ಮೃತವ್ಯಕ್ತಿಗೆ ಮಾಡುವ ಉಪಕಾರವೆಂಬುದಲ್ಲದೇ ಆ ವ್ಯಕ್ತಿಯ ಮೇಲಿರುವ ಗೌರವ ಅಭಿಮಾನಗಳನ್ನು ಸೂಚಿಸುವ ಸಂಕೇತವೂ ಹೌದು. ಸ್ನಾನ ಕ್ರಿಯೆಯು ಶವದ ಪಾದದಿಂದ ಮೊದಲಾಗುವುದು ಗೌರವ ಸೂಚಕ. ಶವಸ್ನಾನದ ನಂತರ ಅಲಂಕರಣ ವಿಧಿ ತುಲಸಿ, ಹೂವು ಮತ್ತು ಸುಗಂಧ ದ್ರವ್ಯಗಳಿಂದ. ಒಟ್ಟಾರೆ ಈ ವಿಧಿಗಳಿಂದ ಮೃತರ ಬಗ್ಗೆ ಇರುವ ಗೌರವ ಸೂಚನೆ ಜೊತೆಗೆ ರೋಗಾಣು ನಾಶ ಮತ್ತು ದುರ್ಗಂಧ ನಿವಾರಣೆ.

**ಸಿದಿಗೆ** ಶವವನ್ನು ಸ್ಮಶಾನಕ್ಕೆ ಸಾಗಿಸಲು ಅನುಕೂಲವಾಗಲೆಂದು ಸಿದ್ಧಪಡಿಸುವುದು ಸಿದಿಗೆಯನ್ನು. ಶಾಸ್ತ್ರದ ಪ್ರಕಾರ ಔದುಂಬರ ಮರದ ಕಟ್ಟಿಗೆಯಿಂದ ಸಿದಿಗೆಯನ್ನು ತಯಾರಿಸಬೇಕು ಎನ್ನುವುದಕ್ಕೆ ಕಾರಣ ಪಾವಿತ್ರ್ಯದ

ರಕ್ಷಣೆಗಾಗಿ. ಆದರೆ ಪ್ರಸ್ತುತ ಔದುಂಬರದ ಅಲಭ್ಯತೆಯಿಂದ, ಸಾಮಾನ್ಯ ಕಟ್ಟಿಗೆ ಅಥವಾ ಬಿದಿರು, ಅಡಿಕೆ ದಬ್ಬೆಗಳನ್ನು ಬಳಸಲಾಗುತ್ತದೆ. ಶವವನ್ನು ಕಟ್ಟಿದ ಸಿದಿಗೆಗೆ ಹೆಗಲು ಕೊಡುವ ಮುನ್ನ ಶವದ ಪಾದದ ಭಾಗದಲ್ಲಿರುವ ಧೂಳನ್ನು ಪುತ್ರಾದಿಗಳು ಸಪಿಂಡರು ಮೂರು ಬೆರಳುಗಳಿಂದ ಎತ್ತಿಕೊಂಡು ಹೆಗಲ ಮೇಲೆ ಹಾಕಿಕೊಳ್ಳುವ ಕ್ರಿಯೆಯ ಹಿಂದೆ ಅಡಕವಾಗಿರುವ ಉದ್ದೇಶ ಮೃತನ ಪಾಪ, ದೋಷಗಳು ತಮ್ಮನ್ನು ಪೀಡಿಸದಿರಲೆಂಬುದು.

**ಶವಯಾತ್ರೆ** ಅಂತ್ಯೇಷ್ಠಿ ಹೋಮದ ನಂತರ ಶವಾಚ್ಛಾದನ. ಬಿಳಿಯ ದಾರದಿಂದ ಪಾದಾಂಗುಷ್ಠಗಳನ್ನು ಕಟ್ಟಿ, ಪಾದದಿಂದ ಆರಂಭಿಸಿ ಶವಕ್ಕೆ ಹೊಸದಾದ ಬಿಳಿಯ ವಸ್ತ್ರದಿಂದ ಮುಚ್ಚಲಾಗುತ್ತದೆ. ಶವಯಾತ್ರೆಯಲ್ಲಿ ಎಲ್ಲರಿಗಿಂತ ಮುಂದೆ ದಹನ ಸಾಮಗ್ರಿಗಳನ್ನು ಒಯ್ಯುವವ. ಆತನ ಹಿಂದೆ ಅಗ್ನಿ ಸಂಸ್ಕಾರಕ್ಕೆ ಅಗ್ನಿಯನ್ನು ಹಿಡಿದಿರುವವ. ನಂತರ ಶವವಾಹಕರು ಅವರ ಹಿಂದೆ ಇತರರು. ಸಂಪೂರ್ಣ ದಾರಿಯ ಮೂರನೇ ಒಂದು ಭಾಗವನ್ನು ಕ್ರಮಿಸಿದ ಮೇಲೆ ಶವವಿರುವ ಸಿದಿಗೆಯನ್ನು ಇಳಿಸಿ ಅಪ್ರದಕ್ಷಿಣವಾಗಿ ಸುತ್ತು ಹಾಕಬೇಕು. ಈ ಕ್ರಮಕ್ಕೆ ಮೃತನ ಪ್ರಯಾಣಕ್ಕೆ ಶುಭ ಕೋರುವ ಗುರಿಯಿದೆ ಹಾಗೂ ಶವವನ್ನು ಹೊರುವವರಿಗೆ ಹೆಗಲನ್ನು ಬದಲಾಯಿಸಿಕೊಳ್ಳಲು ಮತ್ತು ಸ್ವಲ್ಪ ವಿಶ್ರಾಂತಿ ಪಡೆಯಲು ಅವಕಾಶ. ಇನ್ನು ಯಾವ ಪುತ್ರನು ತನ್ನ ತಂದೆಯ ಶವವನ್ನು ತನ್ನ ಹೆಗಲ ಮೇಲೆ ಹೊತ್ತು ಸ್ಮಶಾನಕ್ಕೆ ಸಾಗುವನೋ ಆತನು ಹೆಜ್ಜೆಹೆಜ್ಜೆಗೂ ಅಶ್ವಮೇಧ ಫಲವನ್ನು ಗಳಿಸುತ್ತಾನೆಂಬುದು ನಂಬಿಕೆಯಾದರೂ ಹಿನ್ನೆಲೆಯನ್ನು ಗಮನಿಸಿದರೆ ಕಂಡುಬರುವುದು ಭಾವನಾತ್ಮಕ ಸಂಬಂಧ. ತಂದೆಯು ಎಳೆಯವನಾಗಿದ್ದ ಮಗನನ್ನು ತನ್ನ ಹೆಗಲು, ಬೆನ್ನು ಮತ್ತು ತಲೆಯ ಮೇಲೆ ಹೊತ್ತಿರುತ್ತಾನಷ್ಟೇ? ಹಾಗಾಗಿ, ಆ ಋಣವನ್ನು ಮಗನಾದವನು ತೀರಿಸಿಕೊಳ್ಳುವ ಒಂದು ಅವಕಾಶ.

**ಶವದಹನ** ಮೃತನಾದ ವ್ಯಕ್ತಿಯ ಶವವನ್ನು ದಹಿಸುವುದು ವೈದಿಕ ಸಂಪ್ರದಾಯಕ್ಕೆ ಒಪ್ಪಿತವಾದ ವ್ಯವಸ್ಥೆಯಾದರೂ ಇದುವೆ ಅತ್ಯಂತ ವೈಜ್ಞಾನಿಕ ಪದ್ಧತಿಯೂ ಕೂಡ ಎಂಬುದಕ್ಕೆ ಕಾರಣ ಅಗ್ನಿದಗ್ಧವಾದ ಶರೀರದ ಅವಶೇಷಗಳೇನು ಉಳಿಯದಿರುವಿಕೆ. ಧಾರ್ಮಿಕ ದೃಷ್ಟಿಯಿಂದ ದಹನವೆಂಬುದು ಒಂದು ಯಜ್ಞ, ಚಿತಾಗ್ನಿಯು ಪವಿತ್ರವಾದದ್ದು;



ಹೋಮಾಗ್ನಿಯಂತೆ. ಪವಿತ್ರವಾದ ಅಗ್ನಿಯಲ್ಲಿ ಅರ್ಪಿಸಿದ ಆಹುತಿಯು ಹೇಗೆ ಆಯಾ ದೇವತೆಗಳಿಗೆ ತಲುಪುವುದೋ ಹಾಗೇ ಅಗ್ನಿಗೆ ಅರ್ಪಿಸಿದ ಶರೀರವೂ ದಿವ್ಯಲೋಕಗಳನ್ನು ತಲುಪುವುದು ಎನ್ನುವ ನಂಬಿಕೆ ಪ್ರಚಲಿತ. ದಹನ ಕ್ರಿಯೆಗೆ ಮುನ್ನ ಶವದ ಬಲಗೈಯ್ಯ ಮೇಲೆ, ಕಣ್ಣು ಮತ್ತು ಮೂಗಿನ ಮೇಲೆ ಸುವರ್ಣ(ಆಜ್ಯ)ವನ್ನು ಇಡಬೇಕು. ಸುವರ್ಣವು ತೈಜಸಧಾತು ಮತ್ತು ಸುವರ್ಣಮಿಶ್ರಿತ ಅಗ್ನಿಯು ಕೀಟನಾಶಕವೂ ಹೌದು. ನಂತರ ಮೊಸರು, ಜೇನು, ಎಳ್ಳು ಮತ್ತು ತಂಡೂಲಗಳನ್ನು ಶವದ ವದನದ ಮತ್ತು ಇತರ ಭಾಗಗಳ ಮೇಲಿಡಬೇಕು. ಕಾರಣ ಅವುಗಳು ದಹನಕ್ರಿಯೆಗೆ ಪೂರಕವಾದವುಗಳು.

ನಂತರ, ನೀರು ತುಂಬಿದ ಮಡಕೆಯನ್ನು ತಲೆಯ ಅಥವಾ ಹೆಗಲ ಮೇಲೆ ಇಟ್ಟುಕೊಂಡು ಮೃತದೇಹಕ್ಕೆ ಅಪ್ರದಕ್ಷಿಣವಾಗಿ ಮೂರು ಸುತ್ತು ಹಾಕಬೇಕು. ಒಂದೊಂದು ಸುತ್ತಿನಲ್ಲೂ ಕಲ್ಲು ಅಥವಾ ಕಬ್ಬಿಣದ ತುಂಡಿನ ಸಹಾಯದಿಂದ ಕೊಡಕ್ಕೆ ತೂತು ಮಾಡಬೇಕು. ಈ ಕ್ರಿಯೆಯ ಸಂಕೇತ, ತೂತು ಮಾಡಿದ ಕೊಡದಿಂದ ಸುರಿಯುವ ಪವಿತ್ರವಾದ ಆ ಜಲಧಾರೆಯು ಜೀವಾತ್ಮನು ಭೂಲೋಕ, ಅಂತರಿಕ್ಷ ಹಾಗೂ ಸ್ವರ್ಗ ಲೋಕಗಳನ್ನು ಜಯಿಸಲು ಅನುಕೂಲವಾಗುವುದೆಂಬ ಭಾವನೆ. ಹೀಗೆ ಮೂರು ಸುತ್ತು ಹಾಕಿ ಶವದ ಶಿರೋಭಾಗದಲ್ಲಿ ಬಂದಾಗ ಮಡಕೆಯನ್ನು ಬೆನ್ನ ಹಿಂಗಡೆಯಿಂದ ನೆಲಕ್ಕೆ ಬೀಳಿಸಬೇಕು. ನಂತರ ಜಲಧಾರೆಯಿಂದ ಆರ್ದ್ರವಾದ ತೃಣಾದಿಗಳನ್ನು ಹಿಡಿದು ಒಡೆದು ಹೋದ ಮಡಕೆಯ ಚೂರಿನಲ್ಲಿರುವ ಜಲವನ್ನು ತೆಗೆದುಕೊಂಡು ಶವದ ವದನಕ್ಕೆ ಸಿಂಪಡಿಸುವ ಉದ್ದೇಶ ಶುದ್ಧೀಕರಣವೆಂಬುದು.

ಮುಂದಿನದು ಶವಕ್ಕೆ ಅಗ್ನಿಯನ್ನಿಡುವ ಕಾರ್ಯ. ಪೃಥ್ವಿಯನ್ನು ಸೇರಲಿ ಎಂದು ಶಿರಸ್ಸಿನ ಭಾಗಕ್ಕೆ, ಅಂತರಿಕ್ಷವನ್ನು ಸೇರಲಿ ಎಂದು ಹೊಕ್ಕುಳಿನ ಭಾಗಕ್ಕೆ ಮತ್ತು ದ್ಯುಲೋಕವನ್ನು ಸೇರಲಿ ಎನ್ನುತ್ತಾ ಪಾದಗಳ ಭಾಗಕ್ಕೆ ಅಗ್ನಿಯನ್ನಿಡಬೇಕು. ಶವ ದಹನದ ಅಂತಿಮ ಭಾಗ ಕಪಾಲಕ್ರಿಯೆ, ಎಂದರೆ ಶಿರಸ್ಸಿನ ಮೂಳೆಯ ಒಡೆಯುವಿಕೆ. ಇದರ ಉದ್ದೇಶ ಜೀವಾತ್ಮನು ಮೋಕ್ಷ ಪಡೆಯಲೆಂಬ ಹಾರೈಕೆ. ಕಪಾಲ ಭೇದನ ಮಾಡದಿದ್ದರೆ, ಅಗ್ನಿಯಿಂದ ಕಪಾಲ ಭೇದನವಾಗುವವರೆಗೂ ಕಾಯಬೇಕು. ಕಪಾಲ ಭೇದನವಾಯಿತೆಂದರೆ ಶರೀರದ ದಹನ ಕ್ರಿಯೆಯು ಅಂತಿಮ ಹಂತದಲ್ಲಿದೆ ಎಂದರ್ಥ. ಕಪಾಲ

ಭೇದನದ ನಂತರ ಆಜ್ಯಾಹುತಿಗಳನ್ನು ಸಮರ್ಪಿಸಿ ಮೃತನಿಗೆ ಸದ್ಗತಿಯು ದೊರೆಯಲಿ ಎಂದು ಪ್ರಾರ್ಥಿಸಬೇಕು.

**ಗೃಹಪ್ರತ್ಯಾಗಮನ** ಶವ ದಹನದ ನಂತರ ಮನೆಗೆ ಮರಳುವ ಮುನ್ನ, ಯಜ್ಞದೀಕ್ಷಿತನು, ಚಿತೆಯ ಪಶ್ಚಿಮ ಭಾಗದಲ್ಲಿ ಇರುವ ನೀರಿನ ಆಸರೆಯಲ್ಲಿ ಜಲಸ್ಪರ್ಶ ಮಾಡಿ ತಲೆಯ ಮೇಲೆ ಪ್ರೋಕ್ಷಿಸಿಕೊಂಡು ಪುಣ್ಯಸ್ನಾನದ ಫಲವನ್ನು ಪಡೆಯಬೇಕು. ಮನೆಗೆ ಮರಳುವಾಗ ಹಿಂತಿರುಗಿ ನೋಡಬಾರದು. ಕಾರಣವೆಂದರೆ ಮೃತನ ಬಗ್ಗೆ ಇರುವ ಮೋಹವು ಆವರಿಸಬಾರದೆಂಬ ಸಂಕೇತ. ಆನಂತರ ಮನೆಯಲ್ಲಿ ಮರಣೋತ್ಕ್ರಮಣವಾದ ಸ್ಥಳದಲ್ಲಿ ಒಂದು ದೀಪವನ್ನು ಹಚ್ಚಿ ಇಡಬೇಕು.

**ಅಸ್ಥಿ ಸಂಚಯನ** ಮೃತ ವ್ಯಕ್ತಿಯ ಎಲುಬುಗಳನ್ನು ಸಂಗ್ರಹಿಸಿ ಅವುಗಳನ್ನು ಹುದುಗಿಡುವ ಕ್ರಿಯೆಯನ್ನು ಅಸ್ಥಿ ಸಂಚಯನವೆನ್ನುವರು.

**ದಶಾಹವಿಧಿ – ಪಿಂಡದಾನ** ದಾಹದಿನದಿಂದ ಮೊದಲ್ಗೊಂಡು ಹತ್ತು ದಿನಗಳವರೆಗೆ ಪ್ರತೀದಿನವೂ ಮೃತನ ಹೆಸರಿನಲ್ಲಿ ಪಿಂಡಪ್ರದಾನ ಮಾಡಬೇಕೆಂಬ ಶಾಸ್ತ್ರದ ನಿಯಮವನ್ನು ಸಾಂಕೇತಿಕ ಕ್ರಿಯೆ ಎಂದು ತಿಳಿದರೆ, ಮೃತರು ಜೀವಿತದಲ್ಲಿದ್ದಾಗ ತಮ್ಮ ಕುಟುಂಬ, ಬಂಧುಬಳಗದವರಿಗೆ ಮಾಡಿದ್ದ ಉಪಕಾರಕ್ಕೆ ಅವರನ್ನು ಕೃತಜ್ಞತೆಯಿಂದ ನೆನೆಯುವುದು. ಧಾರ್ಮಿಕತೆಯ ಚೌಕಟ್ಟಿನಲಿ ದಿಟ್ಟಿಸಿದರೆ, ಮೃತರ ಆತ್ಮದ ಮುಂದಿನ ಪ್ರಯಾಣಕ್ಕೇನಾದರೂ ಅಡಚಣೆಗಳಿದ್ದರೆ ಪಿತೃಗಣಗಳು ಆ ಆತ್ಮಕ್ಕೆ ಸರಿಯಾದ ಮಾರ್ಗದರ್ಶನ ನೀಡಲಿ ಎಂಬ ಆಶಯದಿಂದ ಪಿತೃಗಣಗಳನ್ನು ಸಂಪ್ರೀತರಾಗಿಸಲು ಸಲ್ಲಿಸುವ ಗೌರವ.

**ಅಂತ್ಯೇಷ್ಠಿ ವಿಧಾನ**

ಮನೆಯಲ್ಲಿ ಮರಣವಾದ ಸಂದರ್ಭದಲ್ಲಿ, ತಕ್ಷಣ ಸಮೀಪದ ಆರೋಗ್ಯಕೇಂದ್ರದಿಂದ ವೈದ್ಯರನ್ನು ಬರಮಾಡಿಕೊಂಡೊ ಇಲ್ಲಾ ಆರೋಗ್ಯಕೇಂದ್ರಕ್ಕೆ ಕರೆದೋಯ್ದೋ ಸಾವನ್ನು ಖಚಿತಪಡಿಸಿಕೊಳ್ಳತಕ್ಕದ್ದು.

- ನಂತರ, ಅವಶ್ಯಕವಾಗಿ ತಮ್ಮಲ್ಲಿ ಉಮ್ಮಳಿಸುವ ದುಃಖವನ್ನು ಸಾಧ್ಯವಾದಷ್ಟು ಬದಿಗಿರಿಸಿ ಸಮಾಧಾನ ಮನಸ್ಕರಾಗಿರಬೇಕು.
- ಮೃತರ ದೇಹವನ್ನೊಮ್ಮೆ ಕೂಲಂಕಷವಾಗಿ ಪರೀಕ್ಷಿಸಿ ಮಲ ಮೂತ್ರಾದಿಗಳ ವಿಸರ್ಜನೆಯಾಗಿದೆಯಾ ಎಂದು ಖಚಿತಪಡಿಸಿಕೊಂಡು ತಕ್ಕ ಶೌಚಕ್ರಿಯೆಯನ್ನು ಮುಗಿಸಬೇಕು.



- ಕಣ್ಣುಗಳು ತೆರೆದುಕೊಂಡಿದ್ದರೆ ಕಣ್ಣರೆಪ್ಪೆಗಳನ್ನು ಮುಚ್ಚಬೇಕು.
- ಬಾಯಿ ತೆರೆದುಕೊಂಡಿದ್ದರೆ ಅಥವಾ ಸೊಟ್ಟಗಿದ್ದರೆ ಅದನ್ನು ಸರಿಮಾಡಬೇಕು.
- ಅಂತ್ಯಕ್ರಿಯೆಯು ತಡವಾಗುವ ಸೂಚನೆ ಇದ್ದರೆ ಶವದ ಮೂಗು ಮತ್ತು ಕಿವಿಗಳನ್ನು ಹತ್ತಿಯಿಂದ ಮುಚ್ಚಬೇಕು.
- ಶವದ ಕೈಗಳೆರಡನ್ನು ಮಡಚಿ ಹಸ್ತಗಳು ಎದೆಯ ಮೇಲೆ ಇರುವಂತೆ ಜೋಡಿಸಬೇಕು. ಎರಡೂ ಕಾಲ್ಗಳನ್ನು ನೇರವಾಗಿರಿಸಿ ಹೆಬ್ಬೆರಳುಗಳನ್ನು ಸೇರಿಸಿ ದಾರದಿಂದ ಬಿಗಿಯಬೇಕು.
- ಬಾಯಿ ತೆರೆದುಕೊಳ್ಳುವುದನ್ನು ತಪ್ಪಿಸಲು ಒಂದು ಸಣ್ಣ ಬಿಳಿಯ ವಸ್ತ್ರದಿಂದ ನೆತ್ತಿ ಮತ್ತು ಗದ್ದವನ್ನು ಸೇರಿಸಿ ಭದ್ರವಾಗಿ ಕಟ್ಟಬೇಕು.
- ಶವವನ್ನು ಎರಡು ದಿನಗಳಿಗಿಂತ ಹೆಚ್ಚು ಇರಿಸಿಕೊಳ್ಳಬೇಕಾದ ಪರಿಸ್ಥಿತಿಯಲ್ಲಿ ಶೀತಲ ಪೆಟ್ಟಿಗೆಯ ಸಿದ್ಧತೆ ಮಾಡಿಕೊಳ್ಳಬೇಕು.
- ನಂತರ, ಮೃತರ ಸಾವುಂಟಾದ ಸಮಯವನ್ನು ಸಾಧ್ಯವಾದರೆ ಗುರುತು ಹಾಕಿಕೊಳ್ಳಬೇಕು.
- ಒಂದು ಪಕ್ಷ ಯಾರ ಗಮನಕ್ಕೂ ಬಾರದೇ ನಿದ್ರಿಸಿರುವ ವೇಳೆಯಲ್ಲಿ ಮರಣವಾಗಿದ್ದರೆ, ವೈದ್ಯರ ಸಹಾಯದಿಂದ ಸಾವುಂಟಾದ ಸಮಯವನ್ನು ತಿಳಿದುಕೊಳ್ಳಬೇಕು.
- ಆ ಮರಣದ ಸಮಯದ ಮೇರೆಗೆ ಪುರೋಹಿತರು ವಾರ, ತಿಥಿ ಮತ್ತು ನಕ್ಷತ್ರಗಳಿಗನುಗುಣವಾಗಿ ಸೂಚಿಸುವ ಶಾಂತಿಯನ್ನು ಮುಂದೆ ತಪ್ಪದೇ ನೆರವೇರಿಸಬೇಕಾದ್ದು ಕರ್ತೃವಿನ ಧರ್ಮ.
- ಮುಂದೆ, ಕಾನೂನಿನನ್ವಯ ಬೇಕಾದ ಮೃತರ "ಮರಣ ಪತ್ರ"ವನ್ನು ಮರೆಯದೆ ಸಮೀಪದ ಅರೋಗ್ಯಕೇಂದ್ರ ಮತ್ತು ಸರಕಾರಿ ಕಛೇರಿಯಿಂದ ಪಡೆದುಕೊಂಡು ಜೋಪಾನವಾಗಿ ಇರಿಸಿಕೊಳ್ಳಬೇಕು.
- ಅಂಗಡಿಯಿಂದ ಒಂದು ತೆಂಗಿನಕಾಯಿ, ಗಂಧದ ಕಡ್ಡಿಗಳು ಎರಡು ಪೊಟ್ಟಣ, ಕರ್ಪೂರ ಒಂದು ಪೊಟ್ಟಣ, 100 ಗ್ರಾಂ ಅರಿಶಿನ, 100 ಗ್ರಾಂ ಕುಂಕುಮ, ಒಂದು ವಿಭೂತಿ ಗಟ್ಟಿ ಮತ್ತು ಒಂದು ಹೂವಿನ ಹಾರದ ಜೊತೆಗೆ ಒಂದು ಬೆಂಕಿಪೊಟ್ಟಣವನ್ನು ಹೊಸದಾಗಿ ತರಬೇಕು.
- ನಂತರ, ಶವವನ್ನು ದಕ್ಷಿಣ ದಿಕ್ಕಿಗೆ ತಲೆಯಿರುವಂತೆ ಮಲಗಿಸಿದ ಮೇಲೆ ಒದ್ದೆ ಬಟ್ಟೆಯಿಂದ ಸಂಪೂರ್ಣ ದೇಹವನ್ನು ಶುಚಿಗೊಳಿಸಬೇಕು.

- ಶವದ ಹಣೆಗೆ ಮೂರು ಬೆರಳುಗಳಿಂದ ವಿಭೂತಿಯ ಮೂರುನಾಮವನ್ನು ಬಳಿದು ಕುಂಕುಮವನ್ನಿಟ್ಟು ಪಾದಗಳಿಗೆ ಅರಿಶಿನ ಕುಂಕುಮವನ್ನಿಟ್ಟು ಕೊರಳಿಗೆ ಹೂವಿನ ಹಾರವನ್ನು ಹಾಕಬೇಕು.
- ಮರಣ ಹೊಂದಿದವರು ಸ್ತ್ರೀಯಾಗಿದ್ದರೆ ಆಕೆಯ ಕೆನ್ನೆಗಳಿಗೆ ಅರಿಶಿನವನ್ನು ಹಚ್ಚಬೇಕು.
- ನಂತರ, ಶವದ ತಲೆಯ ಬದಿಯಲ್ಲಿ ಒಂದು ದೀಪವನ್ನು ಬೆಳಗಿಸಿ ಗಂಧದ ಕಡ್ಡಿಗಳನ್ನು ಹಚ್ಚಿ ಒಂದು ಲೋಟದಲ್ಲಿ ಸ್ವಲ್ಪ ಅಕ್ಕಿಯನ್ನು ತುಂಬಿ ಅದರಲ್ಲಿ ಗಂಧದ ಕಡ್ಡಿಗಳನ್ನು ಚುಚ್ಚಬೇಕು.
- ಹಚ್ಚಿದ ದೀಪ ಮತ್ತು ಗಂಧದಕಡ್ಡಿಗಳು ಶವವನ್ನು ಸ್ಮಶಾನಯಾತ್ರೆಗೆ ಕರೆದೊಯ್ಯುವವರೆಗೂ ಉರಿಯುತ್ತಿರುವಂತೆ ಜಾಗ್ರತೆ ವಹಿಸಬೇಕು.
- ಸಂದರ್ಭಕ್ಕನುಸಾರವಾಗಿ, ಶವವನ್ನೇನಾದರೂ ರಾತ್ರಿಯಿಡೀ ಮನೆಯಲ್ಲಿ ಇಟ್ಟುಕೊಳ್ಳಬೇಕಾದ ಪರಿಸ್ಥಿತಿಯೊದಗಿದರೆ, ರಾತ್ರಿ ಪೂರ ಭಜನೆ ಇಲ್ಲಾ, ಧ್ವನಿಮುದ್ರಿತ ಗರುಡ ಪುರಾಣ ಅಥವಾ ದೇವರ ಹಾಡುಗಳನ್ನು ಎಲ್ಲರಿಗೂ ಮೆದುವಾಗಿ ಕೇಳಿಸುವ ವ್ಯವಸ್ಥೆ ಮಾಡಬೇಕು.
- ಮನೆಯವರು ಮತ್ತು ಶವದರ್ಶನಕ್ಕೆ ಬಂದವರು ಶವದ ಸುತ್ತಾ ನೆರೆದಿರಬೇಕು.
- ಶವದ ಅಂತ್ಯಕ್ರಿಯೆ ಆಗುವವರೆಗೂ ಸಾವುಂಟಾದ ಮನೆಯಲ್ಲಿ ಅಡುಗೆಯನ್ನು ತಯಾರಿಸಬಾರದು. ಆದ್ದರಿಂದ ನೆರೆಹೊರೆಯವರು, ಬೀಗರು ಅಥವಾ ದಾಯಾದಿಗಳು ಸಾವಿನ ಮನೆಯವರ ಊಟ, ತಿಂಡಿ ಮತ್ತು ಕಾಫಿಯ ವ್ಯವಸ್ಥೆ ಮಾಡಬೇಕು.
- ಮರಣವಾದ ದಿನದಿಂದ ತಿಥಿ ಕಾರ್ಯ ನೆರವೇರುವವರೆಗೂ ಸಾವು ಉಂಟಾದ ಮನೆಯಲ್ಲಿ ಯಾವುದೇ ರೀತಿಯ ಸೊಪ್ಪಿನ ಸಾರನ್ನು ಮಾಡಬಾರದು.

**ಅಂತ್ಯಕ್ರಿಯೆಯನ್ನು ನಡೆಸಲು ಅರ್ಹರಾದ ಕರ್ತೃಗಳು:**

- ಮಗನ ಸಾವಾದರೆ ಆತನ ತಂದೆ, ತಂದೆಯಿಲ್ಲದಿದ್ದರೆ ತಾಯಿ ಅಂತ್ಯಕ್ರಿಯೆಯನ್ನು ಮಾಡಬೇಕು.



- ಮದುವೆಯಾಗದ ಮಗಳ ಸಾವಾದರೆ ಆಕೆಯ ತಂದೆ, ತಂದೆಯಿಲ್ಲದಿದ್ದರೆ ತಾಯಿ ಅಂತ್ಯಕ್ರಿಯೆಯನ್ನು ಮಾಡಬೇಕು.
- ಹೆಂಡತಿಯ ಸಾವಾದರೆ ಆಕೆಯ ಗಂಡ ಅಥವಾ ಆ ದಂಪತಿಗಳ ಚಿಕ್ಕ ಮಗನು ಅಂತ್ಯಕ್ರಿಯೆಯನ್ನು ಮಾಡಬೇಕು.
- ತಂದೆಯ ಸಾವಾದರೆ ಹಿರಿಯ ಮಗನು, ಮಕ್ಕಳಿಲ್ಲದಿದ್ದರೆ ತಾಯಿಯೆ ಅಂತ್ಯಕ್ರಿಯೆಯನ್ನು ಮಾಡಬೇಕು.

**ಅಂತ್ಯಕ್ರಿಯೆಯ ವೆಚ್ಚ ಹಾಗೂ ಜವಾಬ್ದಾರಿ:**

- ಪುರುಷರ ಮರಣವಾದರೆ ಆತನ ಕುಟುಂಬದವರು ಮತ್ತು ಸ್ತ್ರೀಯ ಮರಣವಾದರೆ ಆಕೆಯ ತವರಿನ ಮನೆಯವರು ಅಂದಿನ ಸಂಪೂರ್ಣ ಖರ್ಚನ್ನು ಕಟ್ಟಿಗೆ ಮತ್ತು ಬಟ್ಟೆಯನ್ನು ತರುವುದರಿಂದ ಹಿಡಿದು ಪೂಜಾಸಾಮಗ್ರಿಗಳು, ಶವವಾಹನದ ವ್ಯವಸ್ಥೆ, ಸ್ಮಶಾನದಲ್ಲಿ ದಹನ ಕ್ರಿಯೆಯನ್ನು ನೆರವೇರಿಸುವವರೆಗಿನ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು.

**ಮನೆಯಲ್ಲಿ ಶವವಿದ್ದಾಗ ನಡೆಸುವ ಕ್ರಿಯೆ:**

- ಅಂತ್ಯಕ್ರಿಯೆಯ ಕಾರ್ಯದ ಜವಾಬ್ದಾರಿಯನ್ನು ವಹಿಸಿಕೊಂಡ ಕುಟುಂಬದವರು ಕಟ್ಟಿಗೆ ಮತ್ತು ಬಟ್ಟೆಯನ್ನು ತಂದು ಅಣಿ ಮಾಡಿಕೊಳ್ಳಬೇಕು.
- ನಿಗದಿ ಪಡಿಸಿದ ಸಮಯಕ್ಕೆ ಸರಿಯಾಗಿ ಶವಕ್ಕೆ ಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು ಶವದ ಶರೀರಕ್ಕೆ ಸುತ್ತಬೇಕು.
- ಸಿದ್ಧ ಮಾಡಿರುವ ಕಟ್ಟಿಗೆಗಳ ಮೇಲೆ ಹಾಸಿಗೆ ಮತ್ತು ದಿಂಬನ್ನಿಟ್ಟು ಅದರ ಮೇಲೆ ಹೊದಿಗೆಯನ್ನು ಹೊದಿಸಿ ಶವವನ್ನು ಅದರ ಮೇಲೆ ಮಲಗಿಸಬೇಕು.
- ಶವದ ಪಾದಗಳ ಬಳಿ ಸಾಂಬ್ರಾಣಿ ಹಾಕಲು ಒಂದು ಬಟ್ಟಲು ಅಥವಾ ಮಣ್ಣಿನ ಪಾತ್ರೆಯಲ್ಲಿ ಸ್ವಲ್ಪ ಕೆಂಡವನ್ನು ಇಡಬೇಕು.
- ನಂತರ, ಕಾರ್ಯವನ್ನು ವಹಿಸಿಕೊಂಡವರ ಸಮ್ಮುಖದಲ್ಲಿ ಕರ್ತೃವು ಶವಕ್ಕೆ ಅರಿಶಿನ ಕುಂಕುಮವನ್ನಿಟ್ಟು ಹೂವಿನಿಂದ ಅಲಂಕರಿಸಬೇಕು.
- ಗಂಧದ ಕಡ್ಡಿಗಳನ್ನು ಹಚ್ಚಿ ತೆಂಗಿನಕಾಯಿಯನ್ನು ಒಡೆದು ನಂತರ ಒಂದು ತೆಂಗಿನಕಾಯಿಯ ಚಿಪ್ಪಿನಲ್ಲಿ ಕರ್ಪೂರದ ಆರತಿಯನ್ನು ಸಿದ್ಧಪಡಿಸಿಕೊಂಡು ಆರತಿಯನ್ನು ಮಾಡಬೇಕು.
- ಒಂದು ಚೊಂಬಿನಲ್ಲಿ ನೀರನ್ನು ತೆಗೆದುಕೊಂಡು ಶವದ ಸುತ್ತಾ ಮೂರು

ಸುತ್ತು ಸುತ್ತಿ ಚೊಂಬಿನಲ್ಲಿರುವ ನೀರನ್ನು ಉದ್ದಕ್ಕೂ ಸುರಿದು ಅಂತಿಮವಾಗಿ ಸಾಂಬ್ರಾಣಿಯನ್ನು ಹಾಕಬೇಕು.

- ಆಮೇಲೆ ಉಳಿದ ಎಲ್ಲರೂ ಶವದ ಪ್ರದಕ್ಷಿಣೆ ಹಾಕಿ, ಸಾಂಬ್ರಾಣಿಯನ್ನು ಅರ್ಪಿಸಿ ನಮಸ್ಕರಿಸಬೇಕು.
- ಮುಂದೆ, ಶವವನ್ನು ಸ್ಮಶಾನಕ್ಕೆ ಶವವಾಹನದ ಅಥವಾ ಸಿದಿಗೆಯ ಸಹಾಯದಿಂದ ಕೊಂಡೊಯ್ಯಬೇಕು.

**ಸ್ಮಶಾನ ತಲುಪಿದ ಮೇಲೆ ಮಾಡುವ ಕ್ರಿಯೆ:**

- ಸ್ಮಶಾನದಲ್ಲಿ ದಹನಕ್ರಿಯೆ ನಡೆಸುವ ಜಾಗದಲ್ಲಿ ಇರಿಸಿರುವ ಕಟ್ಟಿಗೆಗಳ ಮೇಲೆ ಶವನ್ನಿರಿಸಿ ಅದರ ಮೇಲೆ ಉಳಿದ ಅರಿಶಿನ ಕುಂಕುಮ ಮತ್ತು ಹೂವುಗಳನ್ನಿಟ್ಟು ಕಟ್ಟಿಗೆ, ಬೆರಣಿ ಮತ್ತು ತೆಂಗಿನ ಮಟ್ಟೆಯನ್ನು ಜೋಡಿಸಬೇಕು.
- ನೆರೆದಿರುವ ಎಲ್ಲರ ಕೈಯಲ್ಲಿ ಒಂದು ಕೊಬ್ಬರಿ ಬಟ್ಟಲಿನ ಮೂಲಕ ಸ್ವಲ್ಪ ತುಪ್ಪ, ಕರಿಎಳ್ಳು ಮತ್ತು ಸ್ವಲ್ಪ ಗರಿಕೆ ದರ್ಭೆಯನ್ನು ಇಟ್ಟು ಕ್ರಮವಾಗಿ ಶವದ ಮುಖ, ಎದೆ, ಕೈಗಳು, ಕಾಲ್ಗಳು ಮತ್ತು ಹೊಟ್ಟೆಯ ಮೇಲೆ ಇರಿಸಬೇಕು.
- ಆಮೇಲೆ ಸೀಮೇಎಣ್ಣೆಯನ್ನು ಶವದ ಮೇಲೆಲ್ಲಾ ಚಿಮುಕಿಸಬೇಕು.
- ಕರ್ತೃವು ಅಪ್ರದಕ್ಷಿಣೆ ಹಾಕುತ್ತಾ ತನ್ನ ಎಡಗೈಯನ್ನು ಉಪಯೋಗಿಸಿ ಶವಕ್ಕೆ ಬೆಂಕಿಯನ್ನು ಶವದ ಕಾಲಿನೆಡೆಯಿಂದ ಸ್ಪರ್ಶಿಸಿ ದಹನಕ್ರಿಯೆಯನ್ನು ನೆರವೇರಿಸಬೇಕು.
- ಸ್ವಲ್ಪ ಹೊತ್ತಿನ ನಂತರ, ಕರ್ತೃವು ತನ್ನ ಎಡಭುಜದ ಮೇಲೆ ನೀರು ತುಂಬಿದ ಕಪ್ಪು ಬಣ್ಣದ ಮಡಕೆಯನ್ನಿಟ್ಟುಕೊಂಡು ಅಗ್ನಿಸ್ಪರ್ಶವಾಗಿರುವ ಶವದ ಸುತ್ತಾ ಅಪ್ರದಕ್ಷಿಣವಾಗಿ ಮೂರು ಸುತ್ತು ಬರಬೇಕು.
- ಪ್ರತೀ ಸುತ್ತಿನಲ್ಲಿ ಅಂತ್ಯಕ್ರಿಯೆಯ ಕಾರ್ಯವನ್ನು ವಹಿಸಿಕೊಂಡಿರುವ ಕುಟುಂಬದ ಹಿರಿಯರು ಒಂದು ಸಣ್ಣ ಕಲ್ಲು ಅಥವಾ ಕಬ್ಬಿಣದ ತುಂಡಿನ ಸಹಾಯದಿಂದ ಒಂದು ತೂತನ್ನು ಮಾಡಬೇಕು.
- ಕರ್ತೃವು ಮೂರನೇ ಸುತ್ತು ಮುಗಿಸಿ ಶವದ ತಲೆಯ ಭಾಗಕ್ಕೆ ಬಂದಮೇಲೆ ಶವಕ್ಕೆ ಬೆನ್ನು ಮಾಡಿ ಎಡ ಭುಜದ ಮೇಲಿರುವ ಮಡಕೆಯನ್ನು ಹಿಂದಿನಿಂದ ಕೆಳಕ್ಕೆ ಜಾರಿಸಿ ಒಡೆಯಬೇಕು.
- ಕರ್ತೃವು ಹಿಂದಿರುಗಿ ಮತ್ತೆ ಶವವನ್ನು ನೋಡದೆ ನೀರಿನ ಸೆಲೆಯೆಡೆಗೆ



ನಡೆಯಬೇಕು.

- ನಂತರ, ದಹನಕ್ರಿಯೆಯಲ್ಲಿ ಪಾಲ್ಗೊಂಡವರೆಲ್ಲಾ ಅಲ್ಲೆ ಇರುವ ಕೊಳಾಯಿಯಲ್ಲಿ ಅಥವಾ ನೀರಿನ ಸೆಲೆಯಲ್ಲಿ ತಮ್ಮ ಕೈ, ಕಾಲು ಹಾಗೂ ಮುಖವನ್ನು ತೊಳೆದುಕೊಳ್ಳಬೇಕು.
- ಸೂತಕಕ್ಕೆ ಒಳಪಟ್ಟ ಬಂಧು ಮತ್ತು ದಾಯಾದಿಗಳು ತಮ್ಮ ಹಣೆಯಲ್ಲಿರುವ ಕುಂಕುಮವನ್ನು ಅಳಿಸಿಕೊಳ್ಳಬೇಕು.

ಸ್ಮಶಾನದಲ್ಲಿರುವ ಸತ್ಯಹರಿಶ್ಚಂದ್ರನ ದೇವಸ್ಥಾನದಲ್ಲಿ ಹಚ್ಚಿರುವ ದೀಪವನ್ನು ನೋಡಿದ ಮೇಲೆ ಸ್ಮಶಾನದಿಂದ ಹೊರ ಬಂದು ಪ್ರತಿಯೊಬ್ಬರೂ ಒಂದು ಅಡಿಕೆಯನ್ನು ತಮ್ಮ ಬಾಯಲ್ಲಿ ಹಾಕಿಕೊಂಡು ಅಗಿದು ತಿನ್ನಬೇಕು.

***ಸೂಚನೆ:*** ವಿದ್ಯುತ್ ಚಿತಾಗಾರವನ್ನು ಶವದ ದಹನ ಕ್ರಿಯೆಗೆ ಉಪಯೋಗಿಸುತ್ತಿದ್ದರೆ, ಶವಕ್ಕೆ ಅಗ್ನಿಸ್ಪರ್ಶ ಮಾಡದೇ ಶವದ ಕಾಲಿನ ಬಳಿ ಕರ್ಪೂರವನ್ನು ಕರ್ತೃವು ಹಚ್ಚಿಟ್ಟು ಮಿಕ್ಕೆಲ್ಲಾ ಶಾಸ್ತ್ರವನ್ನು ನೆರವೇರಿಸಿದ ನಂತರ ಶವವನ್ನು ಚಿತಾಗಾರದ ಒಳಕ್ಕೆ ಕಳುಹಿಸುವುದು.

**ಶವದ ತೆರವು ಆದ ಮೇಲೆ ಮನೆಯಲ್ಲಿ ನಡೆಸುವ ಕೆಲಸ:**

- ಇತ್ತ, ಸಾವುಂಟಾದ ಮನೆಯಿಂದ ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋದ ಬಳಿಕ ಇಡೀ ಮನೆಯನ್ನು ಒಪ್ಪ ಓರಣವಾಗಿ ಗುಡಿಸಿ ನೀರನ್ನು ಚಿಮುಕಿಸಿ ಒಂದು ಒಣಗಿದ ಬಟ್ಟೆಯ ಸಹಾಯದಿಂದ ಆ ನೀರನ್ನು ಚೆನ್ನಾಗಿ ಒರೆಸಿ ನಂತರ ಮನೆಯ ಮುಂದೆಯು ಕೂಡ ಕಸವನ್ನು ಗುಡಿಸಿ ಸಾಧ್ಯವಾದರೆ ಸಗಣಿ ನೀರನ್ನು ಇಲ್ಲದಿದ್ದರೆ ಬರಿಯ ನೀರನ್ನು ಚಿಮುಕಿಸಬೇಕು.
- ವ್ಯಕ್ತಿಯು ಮರಣ ಹೊಂದಿದ ಅಥವಾ ಶವವನ್ನು ಇಟ್ಟಿದ್ದ ಜಾಗಕ್ಕೆ ಸಮೀಪವಾದ ಗೋಡೆಗೆ ಆನಿಸುವಂತೆ ಒಂದು ಬಿದಿರಿನ ಮೊರವನ್ನಿರಿಸಿ ಅದರ ಮೇಲೆ ಸ್ವಲ್ಪ ಸಗಣಿಯನ್ನಿಟ್ಟು ಅದರ ಮೇಲೆ ಅಂತ್ಯಕ್ರಿಯೆಯ ಜವಾಬ್ದಾರಿಯನ್ನು ವಹಿಸಿಕೊಂಡವರು ತಂದಿರುವ ಹಣತೆಯಲ್ಲಿ ಎಣ್ಣೆಯನ್ನು ಹಾಕಿ ಬತ್ತಿಯನ್ನಿಟ್ಟು ಜ್ಯೋತಿ ಬೆಳಗಿಸಬೇಕು.
- ಸ್ಮಶಾನದಿಂದ ಹಿಂದಿರುಗಿ ಬಂದವರೆಲ್ಲಾ ತಮ್ಮ ಕೈ, ಕಾಲು ಮತ್ತು ಮುಖವನ್ನು ತೊಳೆದುಕೊಂಡು ಮನೆಯ ಒಳಕ್ಕೆ ಹೋಗಿ ಉರಿಯುತ್ತಿರುವ ದೀಪವನ್ನು ನೋಡಿ ಮೂರು ಸುತ್ತು ಪ್ರದಕ್ಷಿಣೆಯನ್ನು ಹಾಕಿ ನಮಸ್ಕಾರವನ್ನು ಮಾಡಿ ಹೊರಗೆ ಬರಬೇಕು.

- ಎಲ್ಲರು ಹೊರ ಬಂದ ಮೇಲೆ, ಒಂದು ಇಸ್ತ್ರಿ ಎಲೆ, ಒಂದು ಚೊಂಬಿನಲ್ಲಿ ನೀರು ಮತ್ತು ಶವದ ಬಳಿ ಇರಿಸಿದ್ದ ಲೋಟದಲ್ಲಿರುವ ಅಕ್ಕಿಯನ್ನು ತೆಗೆದುಕೊಂಡು ಕರ್ತೃವು ಮನೆಯಿಂದ ಹೊರಬರಬೇಕು.
- ಪೂರ್ವಾಭಿಮುಖವಾಗಿ ನಿಂತು ಎಡಗೈಯಲ್ಲಿ ಇಸ್ತ್ರಿಎಲೆಯೊಡನೆ ಅಕ್ಕಿಯಿರುವ ಲೋಟವನ್ನು ಹಿಡಿದುಕೊಂಡು ಲೋಟದಲ್ಲಿರುವ ಅಕ್ಕಿಯನ್ನು ಎಲೆಯ ಮೇಲಿಂದ ನೆಲಕ್ಕೆ ನಿಧಾನವಾಗಿ ಜಾರಿಸುತ್ತಾ ಬಲಗೈಯಿಂದ ಅದರ ಮೇಲೆ ನೀರನ್ನು ಸುರಿಯುತ್ತಾ ಮೂರು ಸುತ್ತು ಬರುವ ಹಾಗೆ ನಿಂತಲ್ಲಿಯೇ ಸುತ್ತು ಹಾಕಬೇಕು.
- ನಂತರ ಪೂರ್ವಾಭಿಮುಖವಾಗಿ ನಿಂತು ಇಸ್ತ್ರಿ ಎಲೆಯನ್ನು ನೆಲದ ಮೇಲೆ ಇಟ್ಟು ಬಲಗೈಯಲ್ಲಿರುವ ಚೊಂಬನ್ನು ಇಸ್ತ್ರಿ ಎಲೆಯ ಮೇಲೆ ಬೋರಲು ಹಾಕಬೇಕು.
- ಅಂತ್ಯಕ್ರಿಯೆಯ ಕಾರ್ಯದ ಜವಾಬ್ದಾರಿಯನ್ನು ವಹಿಸಿಕೊಂಡಿರುವ ಕುಟುಂಬದ ಹಿರಿಯರ ಆದೇಶದಂತೆ ಕರ್ತೃವು ಹಾಲುತುಪ್ಪದ ಶಾಸ್ತ್ರವನ್ನು ನೆರವೇರಿಸುವ ದಿನವನ್ನು ಅಲ್ಲಿ ನೆರೆದಿರುವ ಎಲ್ಲರಿಗೂ ತಿಳಿಸಬೇಕು.
- ಮುಂದೆ, ಶವಸಂಸ್ಕಾರವಾದ ರಾತ್ರಿಯ ಊಟಕ್ಕೆ, "ಹುಳಿಯನ್ನು ತಿನ್ನುವವರು" ಅಂದರೆ ಮರಣವುಂಟಾದ ಮನೆಯವರ ವಂಶಸ್ಥರನ್ನು ಮಾತ್ರ ಉದ್ದೇಶಿಸಿ, ತಮ್ಮ ಮನೆಗಳಿಗೆ ತೆರಳಿ ಸ್ನಾನದ ಕಾರ್ಯವನ್ನು ಮುಗಿಸಿಕೊಂಡು ಊಟಕ್ಕೆ ಬರಬೇಕೆಂದು ಹೇಳಬೇಕು ಮತ್ತು ಅಂದು ಬಿಚ್ಚಿದ ಬಟ್ಟೆಯನ್ನು ಅಂದೇ ಒಗೆಯಬೇಕು.
- ಹುಳಿಯನ್ನವನ್ನು ಮಾಡಲು ಅರ್ಹರು ಯಾರೆಂದರೆ, ದಾಯಾದಿಗಳು, ಬೀಗರು ಅಥವಾ ಮನೆಯ ಹೆಣ್ಣು ಮಗಳು.
- ಇನ್ನು ಮಾಡುವ ಹುಳಿ ಅಡುಗೆಯೆಂದರೆ; ಅನ್ನ, ಹೀರೆಕಾಯಿ, ತೊಗರಿ ಮತ್ತು ಅವರೆಬೇಳೆ, ತೊವ್ವೆ ಸಾರು, ತೊವ್ವೆ ಪಲ್ಯ, ಹುಳಿ ಗೊಜ್ಜು, ಸೌತೇಕಾಯಿಯ ಕೋಸಂಬರಿ, ಒಗ್ಗರಣೆ ಹಾಕಿದ ಮೊಸರು.
- ವೀಳೆಯದೆಲೆ, ಅಡಿಕೆ, ಸುಣ್ಣ ತುಪ್ಪ, ನೀರು, ಪುಡಿಉಪ್ಪು ಮತ್ತು ಇಸ್ತ್ರಿ ಎಲೆಗಳನ್ನು ಸಿದ್ಧಪಡಿಸಿಕೊಳ್ಳಬೇಕು.
- ಅಂದಿನ ರಾತ್ರಿಯ ಊಟವನ್ನು ಮನೆಯ ಸೂತಕಕ್ಕೆ ಒಳಪಟ್ಟ ವಂಶಸ್ಥರು ಮಾತ್ರ ಸೇವಿಸಬೇಕು.
- ಊಟವಾದ ಮೇಲೆ ವೀಳೆಯದೆಲೆ, ಅಡಿಕೆ ಮತ್ತು ಸುಣ್ಣವನ್ನು ಇಸ್ತ್ರಿ



ಎಲೆಯ ಮೇಲೆ ಮಾತ್ರ ಇಟ್ಟು ವಂಶಸ್ಥರಿಗೆ ಸಮರ್ಪಿಸಬೇಕು. ಹೀಗೆ ತಾಂಬೂಲ ಕೊಡುವ ವಿಧಾನವನ್ನು ತಿಥಿ ಕಾರ್ಯವಾಗುವವರೆಗೂ ಪಾಲಿಸಬೇಕು.

- ಈ ಹುಳಿಯಡುಗೆಗೆ ಉಪಯೋಗಿಸಿದ ಪಾತ್ರೆ ಪಗಡಿಗಳನ್ನು ತಿಥಿಕಾರ್ಯ ಪೂರೈಸುವವರೆಗೂ ಅದನ್ನು ತಂದ ಕುಟುಂಬದವರು ಹಿಂದಿರುಗಿ ತೆಗೆದುಕೊಂಡು ಹೋಗುವ ಹಾಗಿಲ್ಲ.
- ನಂತರ, ಮನೆಯಲ್ಲಿ ಒರಗಿಸಿಟ್ಟಿದ್ದ ಮೊರ ಮತ್ತು ಅದರ ಮೇಲಿನ ಹಣತೆಯನ್ನು ಮನೆಯಿಂದ ಹೊರಕ್ಕೆ ತಂದು ಅವುಗಳನ್ನು ಮತ್ತೆಂದು ಉಪಯೋಗಿಸದಂತೆ ಛಿದ್ರಗೊಳಿಸಿ ಬಿಸಾಡಬೇಕು.
- ಹಣತೆ ಇರಿಸಿದ ಜಾಗದಲ್ಲಿ ಒಂದು ಬಟ್ಟಲಿನಲ್ಲಿ ಅದೇತಾನೆ ಸಿದ್ಧವಾದ ಅನ್ನ ಮತ್ತು ಒಂದು ಲೋಟದಲ್ಲಿ ನೀರನ್ನಿಟ್ಟು ಅವುಗಳ ಮೇಲೆ ಒಂದು ಬಿದಿರಿನ ಮಂಕರಿಯನ್ನು ಬೋರಲು ಹಾಕಬೇಕು.
- ರಾತ್ರಿಯಿಟ್ಟ ಅನ್ನ ನೀರನ್ನು ಮಾರನೆಯ ದಿನ ಬೆಳಿಗ್ಗೆ ತೆಗೆದು ಅದನ್ನು ಕಾಗೆಗಳಿಗೆಂದು ಮನೆಯ ಮೇಲೆ ಇಡಬೇಕು. ಈ ಪ್ರಕ್ರಿಯೆಯನ್ನು 11 ದಿನಗಳವರೆಗೂ ನಡೆಸಬೇಕು.

**ಹಾಲು ತುಪ್ಪದ ಶಾಸ್ತ್ರ** (ಮೂರು ಅಥವಾ ಐದನೇ ದಿನದ ಶಾಸ್ತ್ರ):

**ಸಿದ್ಧತೆ:**

ಈ ಕಾರ್ಯಕ್ರಮದ ಖರ್ಚು ವೆಚ್ಚವೆಲ್ಲಾ ಸಾವುಂಟಾದ ಮನೆಯವರೇ ಭರಿಸಬೇಕು.

- ಕ್ಷೌರೀಕರನ್ನು ಸಾಧ್ಯವಾದರೆ ಮನೆಗೆ ಕರೆಯಿಸಿ, ಶವಸಂಸ್ಕಾರ ಮಾಡಿದ ಕರ್ತೃವಿನ ಕೇಶಮುಂಡನ (ತಲೆಗೂದಲು, ಗಡ್ಡ ಮತ್ತು ಮೀಸೆ) ಮಾಡಿಸಬೇಕು.
- ಕೂಳು ಬೇಯಿಸುವವರನ್ನು ಕರೆಸಿ ಕೂಳು ಬೇಯಿಸಲು ಬೇಕಾದ ಪದಾರ್ಥಗಳನ್ನು ತರಲು ದುಡ್ಡನ್ನು ಕೊಟ್ಟು ಅವರನ್ನು ಮಾರುಕಟ್ಟೆಗೆ ಕಳುಹಿಸಬೇಕು.
- ಅವರು ತಂದಿರುವ ಮಣ್ಣಿನ ಮಡಿಕೆ, ಮುಚ್ಚಳ, ದಿನಸಿ ಮತ್ತು ತರಕಾರಿಯನ್ನು ಉಪಯೋಗಿಸಿ ಅವರೇ ಕೂಳು ಬೇಯಿಸಬೇಕು.
- ನಂತರ, ಕೂಳನ್ನು ಬೇಯಿಸಿದ ಪಾತ್ರೆಯನ್ನು ಒಂದು ಬಿಳಿಯ ಪಂಚೆಯಲ್ಲಿ ಬಿಗಿಯಾಗಿ ಸುತ್ತಿ ಕಟ್ಟಬೇಕು.

- ಜೊತೆಗೆ, ಅವರು ತರುವ ಪೂಜಾಸಾಮಗ್ರಿಗಳಾದ ತೆಂಗಿನಕಾಯಿ, ಹೂವು, ಗಂಧದಕಡ್ಡಿಗಳು, ಕರ್ಪೂರ, ಬಾಳೆಹಣ್ಣು, ವೀಳೆಯದೆಲೆ, ಅಡಿಕೆ, ಸುಳಿ ಇರುವ 5 ಬಾಳೆಯ ಎಲೆಗಳು ಮತ್ತು ಬೆಂಕಿ ಪೊಟ್ಟಣದೊಂದಿಗೆ ಸಿದ್ಧವಾಗಿರುವ ಕೂಳನ್ನು ತಗೆದುಕೊಂಡು ಕರ್ತೃವು ಬಿಳಿಯ ಪಂಚೆಯನ್ನುಟ್ಟು ಮತ್ತೊಂದು ಪಂಚೆಯನ್ನು ತಲೆಯ ಮೇಲೆ ಮುಸುಕು ಹಾಕಿಕೊಂಡು ಹಸೀಹಾಲು, ತುಪ್ಪ ಮತ್ತು ಸಾಂಬ್ರಾಣಿ ಪುಡಿಯೊಡನೆ ಸ್ಮಶಾನಕ್ಕೆ ಹೊರಡಬೇಕು.

ಮುಂದೆ, ಈ ಕಾರ್ಯಕ್ರಮಕ್ಕೆ ಭಾಗವಹಿಸಲು ಬಂದಿರುವ ಎಲ್ಲರೊಂದಿಗೆ ಮನೆಯವರು ಮೃತರಿಗೆ ಪ್ರಿಯವಾದ ಎಲ್ಲಾ ತರಹದ ತಿಂಡಿ, ತಿನಿಸು, ಹಣ್ಣು, ಸಿಹಿ, ಖಾರದ ಜೊತೆಗೆ ಅವರಿಗೇನಾದರೂ ದುಶ್ಚಟಗಳಿದ್ದರೆ ಅವುಗಳಿಗೆ ತಕ್ಕಂತೆ ಬೀಡಿ, ಸಿಗರೇಟ್, ಮದ್ಯ, ಮಾಂಸ ಮುಂತಾದವುಗಳನ್ನೆಲ್ಲಾ ಒಪ್ಪ ಓರಣವಾಗಿ ಜೋಡಿಸಿಕೊಂಡು ಸ್ಮಶಾನವನ್ನು ತಲುಪುವುದು.

**ವಿಧಾನ:**

ಪೂರ್ವ ನಿರ್ಧಾರಿತ ಸ್ಥಳದಲ್ಲಿ ಮೃತರ ಅಸ್ಥಿ ಮತ್ತು ಬೂದಿಯಿರುವ ಮಡಕೆಯನ್ನಿರಿಸಿ ಅದರಲ್ಲಿ ತುಂಬೆ ಗಿಡವನ್ನಿಟ್ಟು ಅದರ ಮುಂದೆ ಮೂರು ಸಣ್ಣಕಲ್ಲುಗಳನ್ನು ಇಡಬೇಕು ನಂತರ ಸುಳಿಯಿರುವ ಐದು ಬಾಳೆಯ ಎಲೆಗಳನ್ನು ಹರಡಬೇಕು.

- ಬಾಳೆ ಎಲೆಗಳ ಮೇಲೆ ಮೊದಲು ಕೂಳಿನ ಅಡುಗೆಯನ್ನು ಸಮನಾಗಿ ಬಡಿಸಿ ನಂತರ ಮನೆಯವರು ತಂದಿರುವ ಮೃತವ್ಯಕ್ತಿಗೆ ಇಷ್ಟವಿದ್ದ ಎಲ್ಲಾ ತಿಂಡಿ ತಿನಿಸು ಮತ್ತು ವಸ್ತುಗಳನ್ನು ಎಲ್ಲರೂ ಸೇರಿಕೊಂಡು ಬಡಿಸಬೇಕು.
- ನಂತರ ನೆರೆದಿರುವವರೆಲ್ಲರು ಒಂದು ಲೋಟದಲ್ಲಿ ಹಸೀಹಾಲು ಮತ್ತು ತುಪ್ಪವನ್ನು ಐದೂ ಎಲೆಗಳ ಮೇಲೆ ಸ್ವಲ್ಪ ಸ್ವಲ್ಪವಾಗಿ ಹಾಕಬೇಕು.
- ನಂತರ, ದೇಹಕಾರ್ಯವನ್ನು ನೆರವೇರಿಸಿಕೊಡುವವರ ಸಹಾಯದಿಂದ ಅವರ ಆದೇಶದ ಮೇರೆಗೆ ಮೃತರ ಅಸ್ಥಿ ಮತ್ತು ಬೂದಿಯಿರುವ ಮಡಕೆಗೆ ಮತ್ತು ಮೂರು ಕಲ್ಲುಗಳಿಗೆ ಅರಿಶಿನ ಕುಂಕುಮ ಹೂವನ್ನಿಡಬೇಕು.
- ಗಂಧದಕಡ್ಡಿಗಳನ್ನು ಹಚ್ಚಿ ತೆಂಗಿನಕಾಯಿಯನ್ನು ಒಡೆದು ಅದರ ಒಂದು



ಚಿಪ್ಪಿನಲ್ಲಿ ಕರ್ಪೂರವನ್ನು ಬೆಳಗಿಸಿದ ಮೇಲೆ ಸಾಂಬ್ರಾಣಿಯನ್ನು ಹಾಕಬೇಕು.

- ಆಮೇಲೆ, ಕಾಗೆಗಳು ಬಂದು ಆಹಾರವನ್ನು ಸೇವನೆ ಮಾಡುವುದನ್ನು ಗಮನಿಸಬೇಕು. ಕಾಗೆಗಳೇನಾದರು ಶೀಘ್ರವಾಗಿ ಬಲಗಡೆಯಿಂದ ಬಂದು ಆಹಾರದ ಸೇವನೆ ಮಾಡಿದರೆ ಮೃತರ ಆಯಸ್ಸು ಸಂಪೂರ್ಣ ಮುಗಿದಿದೆ ಎಂಬ ನಂಬಿಕೆಯಿದೆ.
- ಇದಾದ ಬಳಿಕ ಕರ್ತೃವು ಕೆಲವರೊಡಗೂಡಿ ಅಸ್ಥಿಯಿರುವ ಮಡಕೆಯನ್ನು ಯಾವುದಾದರು ನದಿಯ ತೀರಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಅಸ್ಥಿಗೆ ಪೂಜೆಯನ್ನು ಸಲ್ಲಿಸಿ ನದಿಯ ನೀರಿನಲ್ಲಿ ಕದಡಬೇಕು.
- ಮಿಕ್ಕವರು ಸ್ಮಶಾನದಿಂದ ಹೊರಬರುವ ಮುನ್ನ ಅಲ್ಲಿಯೆ ಇರುವ ನಲ್ಲಿ ಅಥವಾ ನೀರಿನ ಸೆಲೆಯಲ್ಲಿ ಕೈಕಾಲು ಮತ್ತು ಮುಖವನ್ನು ತೊಳೆದುಕೊಂಡು ಮನೆಯ ಕಡೆಗೆ ಹೊರಡಬೇಕು.
- ಮನೆಯನ್ನು ತಲುಪಿದ ಮೇಲೆ, ಮನೆಯೊಳಕ್ಕೆ ಬರುವ ಮುನ್ನ ಮತ್ತೆ ತಮ್ಮ ಕೈಕಾಲು ಮತ್ತು ಮುಖವನ್ನು ತೊಳೆದುಕೊಳ್ಳಬೇಕು.

  ಇಂದಿನ ಊಟಕ್ಕೆ ಸಾವುಂಟಾದ ಮನೆಯವರು ಅನ್ನ, ಹೀರೆಕಾಯಿ, ತೊಗರಿಬೇಳೆ ಮತ್ತು ಅವರೆಬೇಳೆಯ ತೊವ್ವೆಸಾರು, ಹುಳಿಗೊಜ್ಜು, ಸೌತೇಕಾಯಿ ಕೋಸಂಬರಿ, ತೊವ್ವೆ ಪಲ್ಯ ಮತ್ತು ಮೊಸರನ್ನು ಸಿದ್ಧಪಡಿಸಬೇಕು. ಆಮೇಲೆ ವೀಳೆಯದೆಲೆ, ಅಡಿಕೆ ಮತ್ತು ಸುಣ್ಣವನ್ನು ಇಸ್ತ್ರಿಎಲೆಯ ಮೇಲೆ ಇಡಬೇಕು.
- ಅಸ್ಥಿಯನ್ನು ವಿಸರ್ಜಿಸಿ ಬಂದ ಮೇಲೆ ಅನುಕೂಲಕ್ಕೆ ತಕ್ಕಂತೆ, ಒಂದೇ ದಿನದಲ್ಲಿ ಮನೆಗೆ ಸುಣ್ಣ ಬಣ್ಣವನ್ನು ಮಾಡಿಸಬೇಕು.
- ಖಾರದ ಪುಡಿಯನ್ನು ಈ ಸಮಯದಲ್ಲಿ ಮಾಡಿದರೆ ಮತ್ತೆ ಒಂದು ವರ್ಷ ಪೂರ್ತಿ ಕಳೆಯುವವರೆಗೂ ಮನೆಯಲ್ಲಿ ಖಾರದ ಪುಡಿಯನ್ನು ಹುರಿಯುವ ಹಾಗೆ ಇಲ್ಲ.
- ಸೂತಕ ಇರುವವರು ಸೂತಕ ಮುಗಿಯುವವರೆಗೂ ತಮ್ಮ ಹಣೆಗಳಿಗೆ ಕುಂಕುಮ ಇರಿಸಿಕೊಳ್ಳಬಾರದು. ತಲೆಗೆ ಹೂವನ್ನು ಮುಡಿಯಬಾರದು ಮತ್ತು ದೇವರ ಪೂಜೆಯನ್ನು ಮಾಡಬಾರದು.

- ಮನೆಯ ಬಾಗಿಲಿನ ಮುಂದೆ ರಂಗೋಲಿಯನ್ನು ಬಿಡಿಸಬಾರದು.
- ಯಾರ ಮನೆಗೂ ಹೋಗಬಾರದು.
- ದೇವರದಾಸರಿಗೆ ದಾನವನ್ನು ಮಾಡಬಾರದು.
- ಭಿಕ್ಷುಕರಿಗೆ ಭಿಕ್ಷೆಯನ್ನು ಹಾಕಬಾರದು.
- ಮಾಂಸಾಹಾರವನ್ನು ವರ್ಜಿಸಬೇಕು.
- ಮೂರನೇ ದಿನದ ಶಾಸ್ತ್ರದ ದಿನ ಬಿಚ್ಚಿದ ಬಟ್ಟೆಯನ್ನು ಅಂದೇ ಒಗೆಯಬೇಕು.

**ಶ್ರಾದ್ಧ:**

**ಸಿದ್ಧತೆ:**

- ಹನ್ನೊಂದನೆಯ ದಿನ ಮನೆಯ ಒಳಹೊರಗೆ ಶುಚಿಗೊಳಿಸಬೇಕು.
- ಸಾಧ್ಯವಾದರೆ ಮನೆಯ ಮುಂಬಾಗಿಲಿನ ಜಾಗವನ್ನು ಸಗಣಿಯಿಂದ ಸಾರಿಸಬೇಕು. ಇಲ್ಲಾ ನೀರಿನಿಂದ ಶುಚಿಗೊಳಿಸಬೇಕು.
- ಕುಟುಂಬದವರೆಲ್ಲರೂ ತಲೆಗೆ ಸ್ನಾನವನ್ನು ಕಡ್ಡಾಯವಾಗಿ ಮಾಡಬೇಕು.
- ಶೌಚದ ವಸ್ತ್ರಗಳನ್ನು ಅಂದೇ ಒಗೆದು ಶುಭ್ರಗೊಳಿಸಬೇಕು.
- ಇಂದಿನ ಅಡುಗೆಯನ್ನು ಸಾವುಂಟಾದ ಮನೆಯವರೇ ತಯಾರಿಸಬೇಕು.
- ಅಡುಗೆಗೆ ಅನ್ನ, ಹೀರೆಕಾಯಿ ತೊವ್ವೆಸಾರು, ತೊವ್ವೆಪಲ್ಯ, ಸೌತೇಕಾಯಿ ಕೋಸಂಬರಿ, ಹುಗೇವು ಅನ್ನ ಮತ್ತು ಬೆಲ್ಲದ ಪಾನಕ.
- ಹುಗೇವು ಅನ್ನದಿಂದ 5 ದೊಡ್ಡ ಮುದ್ದೆಗಳನ್ನು ಮಾಡಿ ಇಸ್ತ್ರಿ ಎಲೆಗಳ ಮೇಲೆ ಇರಿಸಬೇಕು. ಈ 5 ಮುದ್ದೆಗಳ ಮೇಲೆ ಒಂದೊಂದು ಈರುಳ್ಳಿಯ ಬುಡ ಕೆಳಗೆ ಬರುವಂತೆ ಇರಿಸಬೇಕು.
- ಸ್ವಲ್ಪ ಹುಗೇವು ಅನ್ನದಿಂದ ಹಣತೆಯ ಹಾಗೆ ಸಿದ್ಧಪಡಿಸಿ ಅದರಲ್ಲಿ ಉದ್ದವಾದ ಬತ್ತಿಯನ್ನಿರಿಸಿ ತುಪ್ಪವನ್ನು ಹಾಕಬೇಕು.

**ವಿಧಾನ:**

- ಮರಣ ಹೊಂದಿದ ಜಾಗ ಅಥವಾ ಶವವನ್ನು ಇರಿಸಿದ್ದ ಜಾಗದಲ್ಲಿ ಸಿಪ್ಪೆ ತೆಗೆದ ಈರುಳ್ಳಿಯನ್ನು ಬುಡ ಕೆಳಗೆ ಮಾಡಿ ನಿಲ್ಲಿಸಬೇಕು.
- ಇಸ್ತ್ರಿಎಲೆಗಳನ್ನು ಹರಡಿ ಅವುಗಳ ಮೇಲೆ ಐದು ಹುಗೇವು ಅನ್ನದ ಮುದ್ದೆಗಳನ್ನು ಜೊತೆಗೆ ಹುಗೇವು ಅನ್ನದಿಂದ ತಯಾರಿಸಿದ ಹಣತೆಯನ್ನು ಇಡಬೇಕು.



- ನಂತರ ಕರ್ತೃವು ಅವುಗಳಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಟ್ಟು ಗಂಧದಕಡ್ಡಿಗಳನ್ನು ಹಚ್ಚಿ ತೆಂಗಿನಕಾಯಿಯನ್ನು ಒಡೆದು ಒಂದು ಚಿಪ್ಪಿನಲ್ಲಿ ಕರ್ಪೂರವನ್ನು ಬೆಳಗಿಸಬೇಕು.
- ಮುಂದೆ, ಉಳಿದ ಸೂತಕಕ್ಕೆ ಒಳಪಟ್ಟವರೆಲ್ಲರು ಪೂಜೆಯನ್ನು ಮಾಡಿ ಹುಗೇವು ಅನ್ನದ ದೀಪಕ್ಕೆ ಒಂದು ಚಮಚ ತುಪ್ಪವನ್ನು ಹಾಕಭೆಕು.
- ಆಮೇಲೆ, ಕರ್ತೃವು ಐದು ಪಿಂಡಗಳು, ಹುಗೇವು ಅನ್ನದ ದೀಪ ಮತ್ತು ಪೂಜೆ ಮಾಡಿದ ತೆಂಗಿನಕಾಯಿಯನ್ನು ತೆಗೆದುಕೊಂಡು ಹೋಗಿ ಯಾವುದಾದರು ನದಿ ಅಥವಾ ಕೆರೆ ಇಲ್ಲಾ ನೀರಿನ ಸೆಲೆಯಿರುವ ಜಾಗದಲ್ಲಿ ಇಟ್ಟು ಬರಬೇಕು.
- ಹಿಂದಿರುಗಿ ಬರುವಾಗ ಅವರ ಎದುರಿಗೆ ಯಾರು ಕಾಣಿಸದಿದ್ದರೆ ಶುಭ ಎಂಬುದು ನಂಬಿಕೆ.
- ಮನೆಗೆ ಹಿಂದಿರುಗಿ ಬಂದಾಗ ಕೈಕಾಲು ಮತ್ತು ಮುಖವನ್ನು ತೊಳೆದುಕೊಂಡು ಮನೆಯೊಳಕ್ಕೆ ಬರಬೇಕು ನಂತರ, ಸೂತಕಕ್ಕೆ ಒಳಪಟ್ಟವರೆಲ್ಲರು ಊಟವನ್ನು ಮಾಡಬೇಕು. ಹನ್ನೆರಡನೆಯ ದಿನವು ಕೂಡ ಕುಟುಂಬದ ಎಲ್ಲ ಸದಸ್ಯರು ತಲೆಗೆ ಸ್ನಾನವನ್ನು ಮಾಡಿ ಮನೆಯ ಹೊರಒಳಗನ್ನು ಶುಭ್ರಗೊಳಿಸಿ, ಸಾಧ್ಯವಾದರೆ ಮನೆಯ ಮುಂಬಾಗಿಲಿನಲ್ಲಿ ಸಗಣಿಯಿಂದ ಸಾರಿಸಿ, ದೇವರಕೋಣೆಯನ್ನು ಶುಚಿಗೊಳಿಸಿ ಪೂಜೆಗೆ ಅಣಿಮಾಡಿಕೊಳ್ಳಬೇಕು. ಅಂದು ಸಹ ಎಲ್ಲಾ ಶೌಚದ ವಸ್ತ್ರಗಳನ್ನು ಅಂದೇ ಶುಭ್ರಗೊಳಿಸಬೇಕು.

**ಪುಣ್ಯಾಃಕ್ಕೆ ಸಿದ್ಧತೆ:**

- ಪಂಚಗವ್ಯ (ಹಸಿಹಾಲು, ಮೊಸರು, ತುಪ್ಪ, ಗಂಜಲ ಮತ್ತು ಸಗಣಿ) ಮತ್ತು ಗರಿಕೆ ಹುಲ್ಲು ಸ್ವಲ್ಪ ಗಣಪತಿ ಪೂಜೆಗೆಂದು.
- ನಿಗದಿತ ಸಮಯಕ್ಕೆ ಪುರೋಹಿತರ ಸಹಾಯದಿಂದ ಪುಣ್ಯಾಃ ಶಾಸ್ತ್ರವನ್ನು ನೆರವೇರಿಸಬೇಕು.
- ನಂತರ, ಸೂತಕಕ್ಕೊಳಪಟ್ಟ ಎಲ್ಲಾ ವ್ಯಕ್ತಿಗಳು ಮೊದಲು ಗಂಡಸರು, ಮಕ್ಕಳು ನಂತರ ಹೆಂಗಸರು, ಒಬ್ಬೊಬ್ಬರಾಗಿ ಬಂದು ಪುರೋಹಿತರ ಎದುರಿಗೆ ಹಾಕಿರುವ ಮಣೆಯ ಮೇಲೆ ಕುಳಿತುಕೊಳ್ಳಬೇಕು.
- ಪುರೋಹಿತರಿಂದ ಹಣೆಗೆ ಅಕ್ಷತೆಯನ್ನಿರಿಸಿಕೊಂಡ ಗಂಡಸರು ತಮ್ಮ

ಹಳೆಯ ಜನಿವಾರವನ್ನು ತೆಗೆದು ಹೊಸತನ್ನು ಧರಿಸಬೇಕು. ಆಮೇಲೆ ಪುರೋಹಿತರು ಕೊಡುವ ಪಂಚಗವ್ಯವನ್ನು ಕುಡಿದು ಮೇಲೇಳಬೇಕು.

1 ಗಂಡಸರು ಮತ್ತು ಗಂಡು ಮಕ್ಕಳ ಸರದಿ ಮುಗಿದ ಬಳಿಕ, ಹೆಂಗಸರು ಬಂದು ಪುರೋಹಿತರ ಎದುರಿಗಿರುವ ಮಣೆಯ ಮೇಲೆ ಕುಳಿತುಕೊಳ್ಳಬೇಕು.

1 ಪುರೋಹಿತರ ಕೈಯಿಂದ ತಮ್ಮ ಹಣೆಗಳಿಗೆ ಕುಂಕುಮ ಮತ್ತು ಅಕ್ಷತೆಯನ್ನಿರಿಸಿಕೊಂಡು ಅವರು ಕೊಡುವ ಪಂಚಗವ್ಯವನ್ನು ಕುಡಿಯಬೇಕು.

1 ಪುರೋಹಿತರಿಂದ ವೀಳೆಯದೆಲೆ –2, ಅಡಿಕೆ –2, ಬಾಳೆಹಣ್ಣು –1 ಮತ್ತು ಸ್ವಲ್ಪ ಹೂವನ್ನು ತೆಗೆದುಕೊಂಡು ಮುಡಿಯಲ್ಲಿರಿಸಿಕೊಂಡು ಮೇಲೇಳಬೇಕು.

1 ನಂತರ, ಪುರೋಹಿತರು ಮನೆಯ ಎಲ್ಲಾ ಭಾಗಗಳಿಗೆ ಶುದ್ಧಜಲವನ್ನು ಚಿಮುಕಿಸಿ ಮರಣಶೌಚವನ್ನು ನಿವಾರಣೆ ಮಾಡುವರು.

1 ಮುಂದೆ, ಸೂತಕದ ಮನೆಯವರು ಮನೆಯ ಮುಂಬಾಗಿಲಿನಲ್ಲಿ ರಂಗೋಲಿಯನ್ನು ಹಾಕಿ ಬಾಗಿಲಿಗೆ ತಳಿರು ತೋರಣವನ್ನು ಕಟ್ಟಿ ಹೊಸ್ತಿಲಿಗೆ ಅರಿಶಿನ ಕುಂಕುಮ ಮತ್ತು ಹೂವನ್ನಿಡಬೇಕು.

1 ಮನೆಯ ದೇವರ ಕೋಣೆಯಲ್ಲಿ ದೇವರಿಗೆ ಹೂವಿನ ಅಲಂಕಾರವನ್ನು ಮಾಡಿ ದೀಪಗಳನ್ನು ಬೆಳಗಿಸಿ, ಗಂಧದ ಕಡ್ಡಿಗಳನ್ನು ಹಚ್ಚಿ ತೆಂಗಿನಕಾಯಿಯನ್ನು ಒಡೆದು ತಾಂಬೂಲದ ನೈವೇದ್ಯವನ್ನು ಮುಗಿಸಿ ಕರ್ಪೂರ ಅಥವಾ ತುಪ್ಪದ ಆರತಿಯನ್ನು ಮಾಡಬೇಕು.

1 ಈಗ ಕರ್ತೃವು ಪೂಜಾಸಾಮಗ್ರಿಗಳ ಜೊತೆಗೆ 100 ಗ್ರಾಂ ಬೆಣ್ಣೆ ಮತ್ತು ½ ಲೀಟರ್ ಮೊಸರಿನೊಂದಿಗೆ ಸಮೀಪದ ಬಸವನ ದೇವಾಲಯಕ್ಕೆ ಹೋಗಿ ಪೂಜೆ ಮಾಡಿಸಿದ ಮೇಲೆ ಎಲ್ಲಾ ಪೂಜಾಸಾಮಗ್ರಿಗಳನ್ನು ಅಲ್ಲಿಯೇ ಬಿಟ್ಟು ಮನೆಗೆ ಹಿಂದಿರುಗಬೇಕು.

**ನಂತರ ಕಾಫೀ ತಿಂಡಿಯ ಸಮಯ**

**ವಿಧಾನ:**

1 ಕರ್ತೃವು ತಂದಿರುವ ಕಪ್ಪು ಬಣ್ಣದ ಮಡಕೆಯನ್ನು ತೊಳೆದು ಅದಕ್ಕೆ ಅರಿಶಿನ, ಕುಂಕುಮ ಮತ್ತು ಗಂಧದ ತಿಲಕವನ್ನಿರಿಸಿ ಆ ಮಡಕೆಯನ್ನು ಕಳಸವೆಂದು ಭಾವಿಸಬೇಕು.



1 ಆ ಕಳಸದಲ್ಲಿ ಸ್ವಲ್ಪ ನೀರನ್ನು ತುಂಬಿ ಅದರೊಳಗೆ ಮೃತರ ಒಡವೆಗಳೇನಾದರು ಇದ್ದರೆ ಅವುಗಳನ್ನು ಹಾಕಬೇಕು.

1 ಮೃತರು ಮರಣ ಹೊಂದಿದ ಅಥವಾ ಅವರ ಶವವನ್ನಿರಿಸಿದ ಮನೆಯ ಸ್ಥಳದಲ್ಲಿನ ಗೋಡೆಗೆ ಮೃತರ ಭಾವಚಿತ್ರವನ್ನು ಒರಗಿಸಿ ಇರಿಸಬೇಕು.

1 ಅದರ ಮುಂದೆ 2 ಇಸ್ತ್ರಿ ಎಲೆಗಳನ್ನು ಹಾಸಿ ಅವುಗಳ ಮೇಲೆ 2½ ಸೇರು ಅಕ್ಕಿಯನ್ನು ಸಮನಾಗಿ ಹರಡಿ ಅದರ ಮೇಲೆ ಅಲಂಕರಿಸಿದ ಕಳಸವನ್ನು ಇಡಬೇಕು.

1 ಮೃತರ ಭಾವಚಿತ್ರಕ್ಕೆ ಅರಿಶಿನ, ಕುಂಕುಮ ಮತ್ತು ಹೂವಿನಿಂದ ಅಲಂಕರಿಸಬೇಕು.

1 ಕಳಸಕ್ಕೆ ಮೂರು ಸುಳಿಗಳಿರುವ ಕಬ್ಬಿನ ಜಲ್ಲೆಯನ್ನು ಕಟ್ಟಿ ಹೂವುಗಳಿಂದ ಸಿಂಗರಿಸಬೇಕು.

1 ಕಳಸದ ಮುಂದೆ ಒಂದು ದೊಡ್ಡ ಮಣೆಯನ್ನು ಹಾಕಿ, ಮಣೆಯ ಬಲಭಾಗದಲ್ಲಿ ಹೊಸಬಟ್ಟೆಯನ್ನು (ಮೃತರು ಹೆಣ್ಣಾಗಿದ್ದರೆ ಸೀರೆ ಮತ್ತು ರವಿಕೆ, ಗಂಡಾಗಿದ್ದರೆ ಪಂಚೆ ಮತ್ತು ಅಂಗಿಯ ಬಟ್ಟೆ) ಇಟ್ಟು ಅದರ ಮೇಲೆ ವೀಳೆಯದೆಲೆ –2, ಅಡಿಕೆ –2 ಬಾಳೆಹಣ್ಣು –2 ಜೊತೆಗೆ ಸ್ವಲ್ಪ ಸುಣ್ಣವನ್ನು ಇಡಬೇಕು.

1 ಇದರ ಪಕ್ಕದಲ್ಲಿ ಮತ್ತೊಂದು ತಟ್ಟೆಯಲ್ಲಿ ವೀಳೆಯದೆಲೆ –2, ಅಡಿಕೆ –2 ಇಟ್ಟು ಅವುಗಳ ಮೇಲೆ ಪಂಚಫಲವನ್ನಿರಿಸಬೇಕು.

1 ಮಣೆಯ ಮುಂಭಾಗ ಬಲಗಡೆ ಒಂದು ದೀಪಸ್ತಂಭವನ್ನಿರಿಸಿ ಅದರಲ್ಲಿ ಒಂದು ಜ್ಯೋತಿಯನ್ನು ಬೆಳಗಿಸಬೇಕು.

1 ನಂತರ, ಮನೆಯಲ್ಲಿ ಸಿದ್ಧಪಡಿಸಿರುವ ಅಡುಗೆಯನ್ನೆಲ್ಲಾ ಕಳಸದ ಮುಂದೆ ಹಾಸಿರುವ ಮೂರು ಬಾಳೆ ಎಲೆಗಳಲ್ಲಿ ಅನ್ನದಿಂದ ಆರಂಭಿಸಿ ಮುಂದೆ ಚಿತ್ರಾನ್ನ, ಹೆಸರುಬೇಳೆ, ಉಪ್ಪಿನಕಾಯಿ, ಹೋಳಿಗೆ, ವಡೆ, ಕಾಳಿನಹುಳಿ, ಪಾಯಸ, ಕುಂಬಳಕಾಯಿ ಪಾಯಸ, ಕುಂಬಳಕಾಯಿ ಪಲ್ಯ, ಹಾಗಲಕಾಯಿ ಪಲ್ಯ, ಹುರುಳಿಕಾಯಿ ಪಲ್ಯ, ಬೆಂಡೆಕಾಯಿ ಪಲ್ಯ, ಹುಳಿಸೊಪ್ಪಿನ ಸಾರು, ಇದುಕಿದ ಬೇಳೆಯ ಸಾರು, ತಿಳಿಸಾರು ಮತ್ತು ತುಂಡು ಮಾಡಿದ ವಿವಿಧ ಹಣ್ಣುಗಳು ಸ್ವಲ್ಪ ಹಾಲು, ಮೊಸರು, ತುಪ್ಪವನ್ನು ನೈವೇದ್ಯದ ರೂಪದಲ್ಲಿ ಬಡಿಸಿ ಎಲೆಗಳಿಗೆ ಅರಿಶಿನ, ಕುಂಕುಮ ಮತ್ತು ಹೂವನ್ನಿಟ್ಟು ಒಂದು ಲೋಟದಲ್ಲಿ ನೀರನ್ನಿರಿಸಬೇಕು.

1 ಮೂರು ಬಾಳೆಎಲೆಗಳಲ್ಲಿ ಎಡೆಯ ರೂಪದಲ್ಲಿರುವ ಭೋಜ್ಯಗಳಲ್ಲಿ ಕಳಸದ ಎದುರಿಗಿರುವುದನ್ನು ಪಿತೃಗಣಗಳಿಗೆ ಸಮಾನರಾದ ಕಾಗೆಗಳಿಗೆ,

ಕಳಸದ ಬಲಗಡೆ ಇರುವುದನ್ನು ಕರ್ತೃವಿಗೆ ಮತ್ತು ಕಳಸದ ಎಡಗಡೆಯಲ್ಲಿರುವುದನ್ನು ಆಹ್ವಾನಿತರೆಲ್ಲರ ಊಟವಾದ ಬಳಿಕ ಸಾಧ್ಯವಾದರೆ ಗೋಪೂಜೆಯನ್ನು ನೆರವೇರಿಸಿ ಗೋವಿಗೆ ಅರ್ಪಿಸಬೇಕು.

- ನಂತರ, ಗಂಧದಕಡ್ಡಿಗಳನ್ನು ಹಚ್ಚಿ ತೆಂಗಿನಕಾಯಿಯನ್ನು ಒಡೆದು ಕರ್ಪೂರದ ಆರತಿಯನ್ನು ಬೆಳಗಬೇಕು.
- ಒಂದು ಜೊತೆ ಊಟವನ್ನು ಎಡೆಯ ರೂಪದಲ್ಲಿ ತೆಗೆದುಕೊಂಡು ಸ್ಮಶಾನಕ್ಕೆ ಹೋಗಿ ಅಲ್ಲಿ ನಿಗದಿ ಪಡಿಸಿದ ಜಾಗದಲ್ಲಿ ಇರಿಸಿ ಪೂಜೆ ಮಾಡಿ ಬರಬೇಕು.
- ಆಮೇಲೆ ಎಲ್ಲರ ಊಟವಾದ ಬಳಿಕ ಕಳಸದ ಪೂಜೆಯನ್ನು ಮತ್ತೆ ಮಾಡಿ ಕಳಸವನ್ನು ಕದಲಿಸಿ ಅಲ್ಲಿ ನೈವೇದ್ಯಕ್ಕೆ ಇಟ್ಟಿರುವ ಎಲ್ಲಾ ಹಣ್ಣುಗಳನ್ನು ಉಪಯೋಗಿಸಿ ರಸಾಯನವನ್ನು ಮಾಡಿ ಎಲ್ಲರಿಗೂ ಹಂಚಬೇಕು.
- ಕಳಸದ ಕೆಳಗೆ ಹರಡಿರುವ ಅಕ್ಕಿಯಿಂದ ಪೊಂಗಲ್ ಅನ್ನವನ್ನು ಮಾಡಿ ಮನೆಯ ಹೆಣ್ಣು ಮಕ್ಕಳು, ಬೀಗರು ಮತ್ತು ಸೂತಕವಿರುವವರು ಮಾತ್ರ ಸೇವಿಸಬೇಕು.
- ನಂತರ, ಕಳಸದಲ್ಲಿರುವ ಒಡವೆಗಳನ್ನು ತೆಗೆದು ಜೋಪಾನವಾಗಿ ಒರೆಸಿ ಎತ್ತಿಡಬೇಕು.
- ಕಬ್ಬಿನ ಜಲ್ಲೆಯ ಸಹಿತ ಕಳಸವನ್ನು ಕರ್ತೃವು, ಯಾವುದಾದರು ನೀರಿನ ಸೆಲೆಯಿರುವ ಜಾಗದಲ್ಲಿ ಬಿಟ್ಟು ಬರಬೇಕು. ಇಲ್ಲಿಯು ಸಹ ಹಿಂದಿರುಗುವಾಗ ಯಾರೂ ಎದುರಾಗದಿದ್ದರೆ ಶುಭವೆಂಬ ನಂಬಿಕೆ ಇದೆ.
- ಕಳಸವನ್ನು ನೀರಿಗೆ ಬಿಡದೆ ಮೃತರ ನೆನಪಿಗೆಂದು ಮನೆಯಲ್ಲೇ ಇಟ್ಟುಕೊಳ್ಳುವ ಮನಸಿದ್ದರೆ, ಒಂದು ವರ್ಷ ತುಂಬುವ ತನಕ ಕಳಸವು ಒಡೆಯದಂತೆ ಜೋಪಾನ ಮಾಡಬೇಕು.
- ಕಳಸದ ಮುಂದೆ ಸೀರಯನ್ನಿಟ್ಟಿದ್ದರೆ, ಮನೆಯ ಮಗಳಲ್ಲಿ ಯಾರಾದರೊಬ್ಬರು ಅದನ್ನು ಸ್ವಲ್ಪ ಹೊತ್ತು ಉಟ್ಟು ನಂತರ ಬಿಚ್ಚಿ ನೀರಿನಲ್ಲಿ ಅದ್ದಿ ಒಣಗಲು ಹಾಕಬೇಕು. ನಂತರ, ಆ ದಿನ ಮನೆಯ ಹೆಣ್ಣು ಮಕ್ಕಳ್ಯಾರೂ ತವರು ಮನೆಯಲ್ಲಿ ಸಂಜೆಯ ಹೊತ್ತಿನಲ್ಲಿ ಹಚ್ಚಿರುವ ದೀಪಗಳನ್ನು ನೋಡಬಾರದು. ಆದ್ದರಿಂದ ಸಂಜೆಗೂ ಮುನ್ನ ಅಲ್ಲಿಂದ ತೆರಳಿ ತಮ್ಮ ಮನೆಗಳಿಗೆ ಹೋಗಬೇಕು.



- ಹನ್ನೆರಡನೆಯ ದಿನ ಮಾಡುವ ತಿಥಿಯ ಕಾರ್ಯಕ್ರಮದಲ್ಲಿ ಪುಣ್ಯಾಃ ಶಾಸ್ತ್ರವಾದ ಬಳಿಕ ಮುಂದೆ ನಮೂದಿಸಿರುವ ವಸ್ತುಗಳನ್ನು ವೀಳೆಯದೆಲೆ –2, ಅಡಿಕೆ –2, ಬಾಳೆಹಣ್ಣುಗಳು –2 ಮತ್ತು ದಕ್ಷಿಣೆ ಕಾಸಿನ ಸಮೇತವಾಗಿ ಯಾರಾದರೂ ಯೋಗ್ಯರಾದವರಿಗೆ ದಾನವಾಗಿ ಕೊಟ್ಟರೆ ಶ್ರೇಯಸ್ಸೆಂಬ ನಂಬಿಕೆ ಇದೆ. (ಚಾಪೆ, ಹಾಸಿಗೆ, ಛತ್ರಿ, ಹಿತ್ತಾಳೆಯ ದೀಪಸ್ತಂಭಗಳು –1 ಜೊತೆ, ಸೀರೆ, ರವಿಕೆ ಬಟ್ಟೆ, ಅಂಗಿ ಮತ್ತು ಷರಾಯಿ, ಎಣ್ಣೆ, ತುಪ್ಪ, ಬಾಣಲಿ, ಚಪ್ಪಲಿಗಳು ಒಂದು ಜೊತೆ ಮತ್ತು ಬೀಸಣಿಗೆ.)

ಹನ್ನೆರಡನೆಯ ದಿನ ತಿಥಿಯಾದ ಮಾರನೇ ದಿವಸ ಬೆಳಿಗ್ಗೆ ಕುಟುಂಬದ ಪ್ರತಿಯೊಬ್ಬರೂ ತಲೆಗೆ ಸ್ನಾನವನ್ನು ಮಾಡಿ ದೇವರ ಸಾಮಗ್ರಿಗಳನ್ನು ಶುಚಿಗೊಳಿಸಿ, ಮನೆಯ ಒಳ ಹೊರಗನ್ನು ಶುಭ್ರ ಮಾಡಿದ ಮೇಲೆ ದೇವರ ಪೂಜೆಯನ್ನು ನೆರವೇರಿಸಿದರೆ ಶ್ರಾದ್ಧದ ಎಲ್ಲಾ ಕಾರ್ಯಕ್ರಮಗಳು ಮುಗಿದಂತೆ.

**ಬಟ್ಟೆ ಹಾಕುವ ಶಾಸ್ತ್ರ** (ಮಗ ಅಥವಾ ಮಗಳು ಮರಣ ಹೊಂದಿದ್ದರೆ):
**ತಂದೆ ಕರ್ತೃವಾಗಿದ್ದರೆ:**

ತಂದೆಯು ಮೃತರ ಅಂತ್ಯಕ್ರಿಯೆಯ ಕರ್ತೃವಾದ್ದರಿಂದ ಕರ್ಮ ನಡೆದ ದಿನದಿಂದ ಒಂದು ತಿಂಗಳು ತುಂಬುವವರೆಗೂ ಯಾವುದೇ ರೀತಿಯ ಶುಭಕಾರ್ಯಗಳಲ್ಲಿ ಪಾಲ್ಗೊಳ್ಳಬಾರದು ಮತ್ತು ಯಾರ ಮನೆಗೂ ಹೋಗಬಾರದು.

- ಒಂದು ತಿಂಗಳು ತುಂಬುವುದರೊಳಗೆ ಕರ್ತೃವಿನ ಹೆಣ್ಣು ಕೊಟ್ಟ ಮಾವನ ಮನೆಯವರು ಒಂದು ಶುಭದಿನವನ್ನು ಗೊತ್ತುಪಡಿಸಿಕೊಂಡು ಅಳಿಯನ ಮನೆಗೆ ಹೋಗಿ ಆತನನ್ನು ಕರೆದುಕೊಂಡು ಮಾರ್ಗದಲ್ಲಿನ ಅಂಗಡಿಯಲ್ಲಿ ಪೂಜಾಸಾಮಗ್ರಿಗಳನ್ನು ಕೊಂಡು ಸನಿಹದಲ್ಲಿರುವ ಹನುಮಂತನ ಗುಡಿಗೆ ತೆರಳಿ ಅಲ್ಲಿ ದೇವರ ಪೂಜೆಯನ್ನು ಮಾಡಿಸಿ, ಆ ಪೂಜಾ ಸಾಮಗ್ರಿಗಳನ್ನು ದೇವಸ್ಥಾನದಲ್ಲೇ ಬಿಡಬೇಕು.
- ನಂತರ, ಅವರನ್ನು ಮಾವನವರ ಮನೆಗೆ ಕರೆದುಕೊಂಡು ಹೋಗಿ ಒಂದು ರಾತ್ರಿ ಅಲ್ಲಿಯೆ ತಂಗಲು ಅಣಿಮಾಡಬೇಕು.
- ಮಾರನೇಯ ದಿನ ಬೆಳಿಗ್ಗೆ ಅಳಿಯನ ಸ್ನಾನ ಪೂಜೆ ಮುಗಿದ ಬಳಿಕ ಅವರಿಗೆ ತಿಂಡಿಯನ್ನು ನೀಡಬೇಕು.

1 ಅಂದಿನ ಮಧ್ಯಾಹ್ನ ಅಳಿಯ ಮತ್ತು ಮಾವನ ಮನೆಯವರು ಮಾತ್ರ ಪಾಯಸ ಅಥವಾ ಹೋಳಿಗೆಯ ಊಟವನ್ನು ಮಾಡಬೇಕು. ಇನ್ನ್ಯಾರಿಗೂ ಊಟಕ್ಕೆ ಆಹ್ವಾನ ನೀಡಕೂಡದು.

1 ಸಂಜೆ ಮನೆಯ ದೀಪ ಹಚ್ಚುವ ಮುನ್ನಾ ಅಳಿಯನಿಗೆ ಹೊಸ ಅಂಗಿ ಮತ್ತು ಷರಾಯಿಯನ್ನು ಅಥವಾ ಪಂಚೆ, ಶರ್ಟು ಶಲ್ಯವನ್ನು ಧರಿಸಲು ಕೊಡಬೇಕು. ನಂತರ ಅವರನ್ನು ಅವರ ಮನೆಗೆ ಕರೆದುಕೊಂಡು ಹೋಗಿ ಬಿಟ್ಟು ಬರಬೇಕು.

***ಸೂಚನೆ:*** ಒಂದು ವೇಳೆ ಮಾವ ಅಥವಾ ಮಾವನ ಸಮಾನರಾದ ಸಂಬಂಧಿಗಳು ಯಾರೂ ಇಲ್ಲದಿದ್ದರೆ ಅಥವಾ ಇದ್ದೂ ಹೊಸ ಬಟ್ಟೆಯನ್ನು ತೊಡಿಸಲು ಕಾರಣಾಂತರಗಳಿಂದ ನಿರಾಕರಿಸಿದರೆ, ಕರ್ತೃವೇ ತಿಂಗಳು ತುಂಬುವುದರೊಳಗೆ, ತಾನೆ ಒಂದು ಶುಭ ದಿನವನ್ನು ನಿಗದಿ ಪಡಿಸಿಕೊಂಡು ಯಾವುದಾದರು ದೇವರ ಸನ್ನಿಧಿಗೆ ತೆರಳಿ ಅಲ್ಲಿ ಒಂದು ರಾತ್ರಿಯನ್ನು ಕಳೆದು ಮಾರನೆಯ ದಿನ ಸ್ನಾನ ಮುಗಿಸಿ ಹೊಸ ಬಟ್ಟೆಯನ್ನು ತೊಟ್ಟು, ಹಳೆಯ ಬಟ್ಟೆಗಳನ್ನು ಅಲ್ಲಿಯೇ ಬಿಟ್ಟು ನಂತರ ದೇವರ ಪೂಜೆಯನ್ನು ಮುಗಿಸಿಕೊಂಡು ಪೂಜಾ ಸಾಮಗ್ರಿಗಳನ್ನು ಅಲ್ಲಿಯೇ ಬಿಟ್ಟು ಮನೆಗೆ ತೆರಳಬೇಕು.

**ತಾಯಿ ಕರ್ತೃವಾಗಿದ್ದರೆ:**

ತಾಯಿಯು ಮೃತರ ಅಂತ್ಯಕ್ರಿಯೆಯ ಕರ್ತೃವಾದ್ದರಿಂದ ಕರ್ಮ ನಡೆದ ದಿನದಿಂದ ಒಂದು ವರ್ಷ ತುಂಬುವವರೆಗೂ ಯಾವುದೇ ರೀತಿಯ ಶುಭಕಾರ್ಯಗಳಲ್ಲಿ ಪಾಲ್ಗೊಳ್ಳಬಾರದು ಮತ್ತು ಯಾರ ಮನೆಗೂ ಹೋಗಬಾರದು.

1 ಒಂದು ವರ್ಷ ತುಂಬುವುದರೊಳಗೆ (9 ಅಥವ 11ನೇ ತಿಂಗಳು) ಕರ್ತೃವಿನ ತವರು ಮನೆಯವರು ಒಂದು ಶುಭದಿನವನ್ನು ಗೊತ್ತುಪಡಿಸಿಕೊಂಡು ಆಕೆಯ ಮನೆಗೆ ಹೋಗಿ ಆಕೆಯನ್ನು ಕರೆದುಕೊಂಡು ಮಾರ್ಗದಲ್ಲಿನ ಅಂಗಡಿಯಲ್ಲಿ ಪೂಜಾಸಾಮಗ್ರಿಗಳನ್ನು ಕೊಂಡು ಸನಿಹದಲ್ಲಿರುವ ಹನುಮಂತನ ಗುಡಿಗೆ ತೆರಳಿ ಅಲ್ಲಿ ದೇವರ ಪೂಜೆಯನ್ನು ಮಾಡಿಸಿ, ಆ ಪೂಜಾ ಸಾಮಗ್ರಿಗಳನ್ನು ದೇವಸ್ಥಾನದಲ್ಲೇ ಬಿಡಬೇಕು.



1 ನಂತರ, ಅವರನ್ನು ತವರು ಮನೆಗೆ ಕರೆದುಕೊಂಡು ಹೋಗಿ ಒಂದು ರಾತ್ರಿ ಅಲ್ಲಿಯೆ ತಂಗಲು ಅನುವು ಮಾಡಿಕೊಡಬೇಕು.

1 ಮಾರನೇಯ ದಿನ ಬೆಳಿಗ್ಗೆ ಆಕೆಯ ಸ್ನಾನ ಪೂಜೆ ಮುಗಿದ ಬಳಿಕ ಅವರಿಗೆ ತಿಂಡಿಯನ್ನು ನೀಡಬೇಕು.

1 ಅಂದಿನ ಮಧ್ಯಾಹ್ನ ಆಕೆ ಮತ್ತು ತವರು ಮನೆಯವರು ಮಾತ್ರ ಪಾಯಸ ಅಥವಾ ಹೋಳಿಗೆಯ ಊಟವನ್ನು ಮಾಡಬೇಕು. ಇನ್ನ್ಯಾರಿಗೂ ಊಟಕ್ಕೆ ಆಹ್ವಾನ ನೀಡಕೂಡದು.

1 ಸಂಜೆ ಮನೆಯ ದೀಪ ಹಚ್ಚುವ ಮುನ್ನ ಆಕೆಗೆ ಹೊಸ ಸೀರೆ ಮತ್ತು ರವಿಕೆಯನ್ನು ಧರಿಸಲು ಕೊಡಬೇಕು. ನಂತರ ಒಂದು ತಟ್ಟೆಯಲ್ಲಿ ಕಡ್ಲೆ ಪಪ್ಪು –½ ಕೆ.ಜಿ, ಅರಿಶಿನ ಪೊಟ್ಟಣ 2, ಕುಂಕುಮದ ಪೊಟ್ಟಣ – 2, ಕೊಬ್ಬರಿ ಬಟ್ಟಲು –1, ಎರಡೆರಡು ವೀಳೆಯದೆಲೆ ಮತ್ತು ಅಡಿಕೆ, 5 ಅಥವಾ 11 ಬಾಳೆಹಣ್ಣು, ಒಂದು ಮೊಳ ಕಟ್ಟಿದ ಹೂವು ಜೊತೆಗೆ ಅರಿಶಿನ ಕುಂಕುಮವನ್ನು ಕೊಟ್ಟ ಮೇಲೆ ಅವರನ್ನು ಅವರ ಮನೆಗೆ ಕರೆದುಕೊಂಡು ಹೋಗಿ ಬಿಟ್ಟು ಬರಬೇಕು.

***ಸೂಚನೆ:*** ಒಂದು ವೇಳೆ ತವರಿನ ಸಂಬಂಧಿಗಳು ಯಾರೂ ಇಲ್ಲದಿದ್ದರೆ ಅಥವಾ ಇದ್ದೂ ಹೊಸ ಬಟ್ಟೆಯನ್ನು ತೊಡಿಸಲು ಕಾರಣಾಂತರಗಳಿಂದ ನಿರಾಕರಿಸಿದರೆ, ಕರ್ತೃವೇ ತಿಂಗಳು ತುಂಬುವುದರೊಳಗೆ, ತಾನೆ ಒಂದು ಶುಭ ಘಳಿಗೆಯನ್ನು ನಿಗದಿ ಪಡಿಸಿಕೊಂಡು ಯಾವುದಾದರು ದೇವರ ಸನ್ನಿಧಿಗೆ ತೆರಳಿ ಅಲ್ಲಿ ಒಂದು ರಾತ್ರಿಯನ್ನು ಕಳೆದು ಮಾರನೆಯ ದಿನ ಸ್ನಾನ ಮುಗಿಸಿ ಹೊಸ ಬಟ್ಟೆಯನ್ನು ತೊಟ್ಟು, ಹಳೆಯ ಬಟ್ಟೆಗಳನ್ನು ಅಲ್ಲಿಯೇ ಬಿಟ್ಟು ನಂತರ ದೇವರ ಪೂಜೆಯನ್ನು ಮುಗಿಸಿಕೊಂಡು ಪೂಜಾ ಸಾಮಗ್ರಿಗಳನ್ನು ಅಲ್ಲಿಯೇ ಬಿಟ್ಟು ಮನೆಗೆ ತೆರಳಬೇಕು.

**ಪತ್ನಿಯ ಮರಣವಾದರೆ ಬಟ್ಟೆ ಹಾಕುವ ಶಾಸ್ತ್ರ:**

ಮೃತರ ಪತಿ ಅಥವಾ ಆಕೆಯ ಚಿಕ್ಕಮಗನು ಅಂತ್ಯಕ್ರಿಯೆಯ ಕರ್ತೃವಾದ್ದರಿಂದ ಕರ್ತೃವಿನ ಸಹೋದರಿಯರು ಅಥವಾ ಅವರ ಮಾವನ ಮನೆಯವರು ಬಟ್ಟೆ ಹಾಕುವ ಶಾಸ್ತ್ರವನ್ನು ಮಾಡಬೇಕು.

ಕರ್ಮ ನಡೆದ ದಿನದಿಂದ ಒಂದು ತಿಂಗಳು ತುಂಬುವವರೆಗೂ ಕರ್ತೃವು ಯಾವುದೇ ರೀತಿಯ ಶುಭಕಾರ್ಯಗಳಲ್ಲಿ ಪಾಲ್ಗೊಳ್ಳಬಾರದು ಮತ್ತು ಯಾರ ಮನೆಗೂ ಹೋಗಬಾರದು.

1 ಒಂದು ತಿಂಗಳು ತುಂಬುವುದರೊಳಗೆ ಕರ್ತೃವನ್ನು ಒಂದು ಶುಭದಿನವನ್ನು ಗೊತ್ತುಪಡಿಸಿಕೊಂಡು ಆತನ ಮನೆಗೆ ಹೋಗಿ ಆತನನ್ನು ಕರೆದುಕೊಂಡು ಮಾರ್ಗದಲ್ಲಿನ ಅಂಗಡಿಯಲ್ಲಿ ಪೂಜಾಸಾಮಗ್ರಿಗಳನ್ನು ಕೊಂಡು ಸನಿಹದಲ್ಲಿರುವ ಹನುಮಂತನ ಗುಡಿಗೆ ತೆರಳಿ ಅಲ್ಲಿ ದೇವರ ಪೂಜೆಯನ್ನು ಮಾಡಿಸಿ, ಆ ಪೂಜಾ ಸಾಮಗ್ರಿಗಳನ್ನು ದೇವಸ್ಥಾನದಲ್ಲೇ ಬಿಡಬೇಕು.

1 ನಂತರ, ಮನೆಗೆ ಕರೆದುಕೊಂಡು ಹೋಗಿ ಒಂದು ರಾತ್ರಿ ಅಲ್ಲಿಯೆ ತಂಗಲು ಏರ್ಪಾಡು ಮಾಡಬೇಕು.

1 ಮಾರನೇಯ ದಿನ ಬೆಳಿಗ್ಗೆ ಕರ್ತೃವಿನ ಸ್ನಾನ ಪೂಜೆ ಮುಗಿದ ಬಳಿಕ ಅವರಿಗೆ ತಿಂಡಿಯನ್ನು ನೀಡಬೇಕು.

1 ಅಂದಿನ ಮಧ್ಯಾಹ್ನ ಕರ್ತೃ ಮತ್ತು ಹೊಸಬಟ್ಟೆಯನ್ನು ಹಾಕುವ ಮನೆಯವರು ಮಾತ್ರ ಪಾಯಸ ಅಥವಾ ಹೋಳಿಗೆಯ ಊಟವನ್ನು ಮಾಡಬೇಕು. ಇನ್ನ್ಯಾರಿಗೂ ಊಟಕ್ಕೆ ಆಹ್ವಾನ ನೀಡಕೂಡದು. ಸಂಜೆ ಮನೆಯ ದೀಪ ಹಚ್ಚುವ ಮುನ್ನ ಕರ್ತೃವಿಗೆ ಹೊಸ ಅಂಗಿ ಮತ್ತು ಷರಾಯಿಯನ್ನು ಧರಿಸಲು ಕೊಡಬೇಕು. ನಂತರ ಅವರನ್ನು ಅವರ ಮನೆಗೆ ಕರೆದುಕೊಂಡು ಹೋಗಿ ಬಿಟ್ಟು ಬರಬೇಕು.

***ಸೂಚನೆ:*** ಒಂದು ವೇಳೆ ಸಂಬಂಧಿಗಳು ಯಾರೂ ಇಲ್ಲದಿದ್ದರೆ ಅಥವಾ ಇದ್ದೂ ಹೊಸ ಬಟ್ಟೆಯನ್ನು ತೊಡಿಸಲು ಕಾರಣಾಂತರಗಳಿಂದ ನಿರಾಕರಿಸಿದರೆ, ಕರ್ತೃವೇ ತಿಂಗಳು ತುಂಬುವುದರೊಳಗೆ, ತಾನೆ ಒಂದು ಶುಭ ದಿನವನ್ನು ನಿಗದಿ ಪಡಿಸಿಕೊಂಡು ಯಾವುದಾದರು ದೇವರ ಸನ್ನಿಧಿಗೆ ತೆರಳಿ ಅಲ್ಲಿ ಒಂದು ರಾತ್ರಿಯನ್ನು ಕಳೆದು ಮಾರನೆಯ ದಿನ ಸ್ನಾನ ಮುಗಿಸಿ ಹೊಸ ಬಟ್ಟೆಯನ್ನು ತೊಟ್ಟು, ಹಳೆಯ ಬಟ್ಟೆಗಳನ್ನು ಅಲ್ಲಿಯೇ ಬಿಟ್ಟು ನಂತರ ದೇವರ ಪೂಜೆಯನ್ನು ಮುಗಿಸಿಕೊಂಡು ಪೂಜಾ ಸಾಮಗ್ರಿಗಳನ್ನು ಅಲ್ಲಿಯೆ ಬಿಟ್ಟು ಮನೆಗೆ ತೆರಳಬೇಕು.

ಬಟ್ಟೆಯನ್ನು ಹಾಕಿಕೊಳ್ಳುವ ಶಾಸ್ತ್ರವನ್ನು ಪೂರೈಸಿದ ಕರ್ತೃವು ಐವರು



ಕುಲಬಾಂಧವರ ಮತ್ತು ವಂಶದ ಹೆಣ್ಣು ಮಕ್ಕಳ ಮನೆಗಳಿಗೆ ಹೋಗಿ ಬರುವ ಶಾಸ್ತ್ರವನ್ನು ಪಾಲಿಸತಕ್ಕದ್ದು.

**ಮಾಸಿಕ ಶ್ರಾದ್ಧ (ಮಾಚಿಕ)**

ಮೃತರು ಮರಣ ಹೊಂದಿದ ನಕ್ಷತ್ರಕ್ಕೆ ಅನುಗುಣವಾಗಿ ಮಾಸಿಕ ಶ್ರಾದ್ಧ ಅಥವಾ ಮಾಚಿಕ ಶಾಸ್ತ್ರವನ್ನು. ವಾರ್ಷಿಕ ತಿಥಿಯನ್ನು ಆಚರಿಸುವ ತನಕ ಪ್ರತಿ ತಿಂಗಳು ಆಚರಿಸಲಾಗುತ್ತದೆ ಮಾಚಿಕ ಶಾಸ್ತ್ರಕ್ಕೆ ವಂಶಸ್ಥರನ್ನು ಆಹ್ವಾನಿಸಬೇಕು.

**ಸಿದ್ಧತೆ :**

1 ಅನುಕೂಲಕ್ಕೆ ತಕ್ಕಂತೆ. ದೇವರ ಕೋಣೆಯಲ್ಲೋ ಅಥವಾ ಮನೆಯ ಪಡಸಾಲೆಯಲ್ಲೋ ಪೂರ್ವಾಭಿಮುಖವಾಗಿ ಗೋಡೆಗೆ ತಾಗುವಂತೆ ಒಂದು ಮಣೆಯನ್ನು ನೆಲದಮೇಲೆ ಇರಿಸಬೇಕು.

1 ಮಣೆಯ ಮೇಲೆ ಇಸ್ತ್ರಿ ಎಲೆಗಳನ್ನು ಹಾಸಿ ಅದರ ಮೇಲೆ ಒಂದು ಸೇರು ಅಕ್ಕಿಯನ್ನು ಹರಡಬೇಕು.

1 ಮೃತರ ಭಾವಚಿತ್ರವನ್ನು ಗೋಡಗೆ ಒರಗಿಸಿದಂತೆ ಅಕ್ಕಿಯ ಪದರದ ಮೇಲೆ ಇಡಬೇಕು.

1 ಭಾವಚಿತ್ರಕ್ಕೆ ಅರಿಶಿಣ ಕುಂಕುಮ ಹಚ್ಚಿ ಹೂವಿನ ಮಾಲೆಯನ್ನು ಹಾಕಬೇಕು.

1 ನೀರು ತುಂಬಿದ ಕಲಶದಲ್ಲಿ ಮೂರು ಅಥವಾ ಐದು ವೀಳೆಯದೆಲೆಗಳನ್ನು ಇರಿಸಿ ಒಂದು ಸಣ್ಣ ಹೂವಿನ ಹಾರವನ್ನು ಹಾಕಿ ಮೃತರ ಭಾವಚಿತ್ರದ ಎದುರು ಹಾಗೂ ಮಣೆಯ ಮಧ್ಯದಲ್ಲಿ ಇಡಬೇಕು.

1 ಮಣೆಯ ಬಲಭಾಗದಲ್ಲಿ ಒಂದು ದೀಪಸ್ತಂಭವನ್ನು ಇರಿಸಿ ಅದರಲ್ಲಿ ಒಂದು ಜ್ಯೋತಿಯನ್ನು ಬೆಳಗಬೇಕು.

1 ಕಲಶದ ಮುಂದೆ ಒಂದು ತಟ್ಟೆಯಲ್ಲಿ ಪಂಚಫಲಗಳನ್ನು ಇಡಬೇಕು.

1 ನಂತರ, ಮಣೆಯ ಮುಂದೆ ಮೂರು ಬಾಳೆಎಲೆಗಳನ್ನು ಹರಡಿ ಅವುಗಳಲ್ಲಿ ಮನೆಯವರ ಯಥಾಸ್ಥಿತಿಗೆ ಅನುಸಾರ ಸಿದ್ಧಪಡಿಸಿರುವ ಭೋಜ್ಯಗಳನ್ನು ಬಡಿಸಬೇಕು.

1 ಸಾಂಬ್ರಾಣಿ ಧೂಪವನ್ನು ಹಾಕಲು ಒಂದು ಬಟ್ಟಲಿನಲ್ಲಿ ಸ್ವಲ್ಪ ಕೆಂಡವನ್ನು ಇಡಬೇಕು.

**ವಿಧಾನ:**

1 ಕರ್ತೃವು ಅರಿಶಿಣ ಕುಂಕುಮವನ್ನು ಕಲಶಕ್ಕೆ, ಮೃತರ ಭಾವಚಿತ್ರಕ್ಕೆ, ಪಂಚ ಫಲಗಳಿಗೆ ಮತ್ತು ಬಾಳೆಎಲೆಯಲ್ಲಿರುವ ಎಡೆಗಳಿಗೆ ಹಚ್ಚಿ ಗಂಧದ ಕಡ್ಡಿಗಳನ್ನು ಬೆಳಗಿ ಒಂದು ತೆಂಗಿನಕಾಯಿಯನ್ನು ಒಡೆದು ಕರ್ಪೂರದ ಆರತಿಯನ್ನು ಮಾಡಿ ಸಾಂಬ್ರಾಣಿ ಧೂಪವನ್ನು ಹಾಕಿ ನಮಸ್ಕರಿಸಬೇಕು. ಮುಂದೆ, ನೆರೆದ ಎಲ್ಲರು ಅರಿಶಿನ ಕುಂಕುಮವನ್ನು ಕಲಶಕ್ಕೆ, ಮೃತರ ಭಾವಚಿತ್ರಕ್ಕೆ ಪಂಚ ಫಲಗಳಿಗೆ ಮತ್ತು ಬಾಳೆಎಲೆಯಲ್ಲಿರುವ ಎಡೆಗಳಿಗೆ ಹಚ್ಚಿ ಗಂಧದ ಕಡ್ಡಿಗಳನ್ನು ಬೆಳಗಿ ಕರ್ಪೂರದ ಆರತಿಯನ್ನು ಮಾಡಿ ಸಾಂಬ್ರಾಣಿ ಧೂಪವನ್ನು ಹಾಕಿ ನಮಸ್ಕರಿಸಬೇಕು. ಕಲಶದ ಎದುರಿಗಿರುವ ಎಡೆಯನ್ನು ಪಿತೃಸ್ವರೂಪರಾದ ಕಾಗೆಗಳಿಗೆ ಸಮರ್ಪಿಸಿ ಅವುಗಳು ಹೆಕ್ಕಿ ತಿನ್ನಲು ಆರಂಭಿಸಿದ ನಂತರ ಎಲ್ಲರು ಸಹಭೋಜನವನ್ನು ಮಾಡತಕ್ಕದ್ದು. ಕಲಶದ ಬಲಗಡೆಗೆ ಇರುವ ಎಡೆಯನ್ನ ಕರ್ತೃವು ಸೇವಿಸತಕ್ಕದ್ದು. ಎಲ್ಲರ ಭೋಜನವಾದ ಬಳಿಕ ಕಲಶದ ಎಡಗಡೆಗೆ ಇರುವ ಎಡೆಯನ್ನ ಗೋವಿನ ಪೂಜೆಯನ್ನು ನೆರವೇರಿಸಿ ಗೋವಿಗೆ ಸಮರ್ಪಿಸಬೇಕು.

***ಸೂಚನೆ:*** ಮಾಸಿಕ ಶ್ರಾದ್ಧವನ್ನು ಆಚರಿಸಲು ಕಾರಣಾಂತರಗಳಿಂದ ಸಾಧ್ಯವಾಗಿದ್ದರೆ ತಮ್ಮ ಕೈಲಾದಷ್ಟು ಧನವನ್ನು ದಾನದ ರೂಪದಲ್ಲಿ ಯಾರದರೂ ಪುರೋಹಿತರಿಗೋ ಅಥವಾ ದೇವಸ್ಥಾನಕ್ಕೋ ಮೃತರ ಹೆಸರಿನಲ್ಲಿ ಸಮರ್ಪಿಸಬೇಕು.



**ಅವಿವಾಹಿತ ಯುವಕ ಅಥವಾ ಯುವತಿಯರು ಮರಣ ಹೊಂದಿದರೆ:**

- ಅವರಿಗೆ ಅಂತ್ಯಸಂಸ್ಕಾರ, ಮೂರನೇ ದಿನದ ಹಾಲುತುಪ್ಪದ ಶಾಸ್ತ್ರ ಮತ್ತು ಹನ್ನೊಂದನೇ ದಿವಸ ತಿಥಿ ಕಾರ್ಯವನ್ನು ಮಾತ್ರ ಆಚರಿಸಲಾಗುವುದು.
- ಅಂತ್ಯಸಂಸ್ಕಾರದಲ್ಲಿ ಗಡಿಗೆ ಒಡಿಯುವಿಕೆ ಇಲ್ಲ. ಮುಂದೆ ಯಾವುದೇ ಪಿಂಡಾದಿ ಕರ್ಮಾಂತರಗಳನ್ನು ನೆರವೇರಿಸುವುದಿಲ್ಲ.
- ತಿಥಿ ಕಾರ್ಯದಲ್ಲಿ ಕಳಶವನ್ನಿಡದೆ ಒಂದೇ ಎಡೆಯನ್ನು ಸಿದ್ದಪಡಿಸಬೇಕು. ಆ ಎಡೆಯನ್ನು ಮನೆಯ ಸದಸ್ಯರಿಗೋ ಅಥವಾ ಗೋವಿಗೋ ಅರ್ಪಿಸಿ ಪೂಜಾಕಾರ್ಯವನ್ನು ನೆರವೇರಿಸಬೇಕು.
- ಇನ್ನು, ಎಡೆಗೆ ಸಿದ್ಧಪಡಿಸುವ ಭೋಜ್ಯಗಳೆಂದರೆ; ಯುವಕರಾದರೆ; ಅನ್ನ, ಸಾರು, ಚಿತ್ರಾನ್ನ, ಹುರುಳಿಕಾಯಿ ಪಲ್ಯ, ಆಲೂಗಡ್ಡೆ ಪಲ್ಯ, ಹೆಸರುಬೇಳೆ ಪಾಯಸ, ತರಕಾರಿ ಮತ್ತು ಕಾಳುಗಳ ಹುಳಿ ಜೊತೆಗೆ ಮೊಸರನ್ನ.
- ಯುವತಿಯರಾದರೆ, ಅನ್ನ, ಸಾರು, ಚಿತ್ರಾನ್ನ, ಹುರುಳಿಕಾಯಿ ಪಲ್ಯ, ಆಲೂಗೆಡ್ಡೆ ಪಲ್ಯ, ತರಕಾರಿ ಮತ್ತು ಕಾಳುಗಳ ಹುಳಿ ಜೊತೆಗೆ ಮೊಸರನ್ನ.

**ಸಣ್ಣ ಮಕ್ಕಳು ಮರಣ ಹೊಂದಿದರೆ:**

- ಅವರ ಶವವನ್ನು ದಹಿಸದೆ ಮಣ್ಣಿನಲ್ಲಿ ಹೂಳಬೇಕು.
- ಮರಣ ಹೊಂದಿದ ಮೂರನೇ ದಿನ ಹಾಲುತುಪ್ಪದ ಶಾಸ್ತ್ರವನ್ನು ಮಾಡಬೇಕು.
- ಹನ್ನೊಂದನೆಯ ದಿನ ಪುಣ್ಯಾಃ ಕಾರ್ಯವನ್ನು ನೆರವೇರಿಸಿದರೆ ಮುಂದೇನು ಮಾಡುವಂತಿಲ್ಲ.

## ಆರತಿ ಹಾಡುಗಳು ವರನಿಗೆ

ಶ್ರೀನಾಥ ಗೋವಿಂದ ಆನಂದ ಮೂರುತಿಯೇ
ಮಾನುವೀಮಣಿಯಾರು ಬೆಳಗೀರೇ ಆರುತೀಯ

ವೇದಗಳನೋಂತಾರಗೈದ ಚಿನ್ಮಯಂಗೆ
ಆದಿಮೂರುತಿ ನಮ್ಮ ಮುದ್ದು ಕೃಷ್ಣನಿಗೆ ॥ಶ್ರೀನಾಥ॥

ಕೃಕ್ಷಿಯೋಳ್ ಅನೇಕ ಬ್ರಹ್ಮಾಂಡವನ್ನಿಟ್ಟು
ರಕ್ಷಿಸುವನಾಕ್ಷಣವೇ ಪಕ್ಷಿವಾಹನಗೆ ॥ಶ್ರೀನಾಥ॥

ಜ್ಞಾನನಾಳ್ವಾಜನಕನಾದ ಮಾನದಿಂ ಕಾಯುವ
ಜ್ಞಾನದಾಯಕ ಸ್ವಾಮಿ ಶ್ರೀನಿವಾಸನಿಗೆ ॥ಶ್ರೀನಾಥ॥

– 0 –

ಮಂಗಳಾರುತಿ ನಮ್ಮ ರಂಗನಾಥನಿಗೆ
ಜಯ ಮಂಗಳಾರುತಿಯ ಎತ್ತೀರೆ ಅಂಗಜವರದನಿಗೆ

ಗೋವು ಕಾಯ್ವವಗೆ ಗೋಪೀಯಕಂದನಿಗೆ
ಮಾವ ಕಂಸನ ಮರ್ಧನ ಮಾಡಿದ ಮದನ ಜನಕನಿಗೆ
॥ಮಂಗಳಾರುತಿ॥

ಸೀತಾಮೋಹನಗೆ ಕೌಸಲ್ಯ ಪುತ್ರನಿಗೆ
ರಾವಣೇಶನ ತಲೆ ಚೆಂಡಾಡಿದ ರಾಮ ದೇವರಿಗೆ ।

॥ಮಂಗಳಾರುತಿ॥

ಪಕ್ಷಿವಾಹನಗೆ ಲಕ್ಷ್ಮೀಯ ರಮಣನಿಗೆ
ತುಳಸೀವನದಲಿ ಭಕ್ತರ ಸಲಹುವ ಪುರಂದರ ವಿಠಲನಿಗೆ
॥ಮಂಗಳಾರುತಿ॥

– 0 –



ಮುತ್ತಿನಾರುತಿ ಎತ್ತಿರೆ ಕೃಷ್ಣಗೆ
ಚೆಲುವೆಯಾರು ಎತ್ತಿದರಾರು ಸತ್ಯಭಾಮೆಗೆ

ಹವಳದಾರುತಿ ರಮಣಕೃಷ್ಣಗೆ
ರಾಜಬೀದಿಯಲ್ಲಿ ಮೆರೆದ ರಾಮಚಂದ್ರಗೆ ॥ ಮುತ್ತಿನಾರುತಿ ॥

ರಂಭೆ ಮೇನಕೆ ನಾಟ್ಯವಾಡುತಾ
ತಂಬೂರ ನಾರದರು ಗಾನವ ಹಾಡುತಾ ॥ ಮುತ್ತಿನಾರುತಿ ॥

– 0 –

ಆರುತಿ ಬೆಳಗೋಣ ಬಾ ಶ್ರಿಕೃಷ್ಣನಿಗೆ
ಮಂಗಳಾರುತಿ ಬೆಳಗೋಣ ಬಾ

ಆರುತಿ ಬೆಳಗುವೆ ಸರಸನಯ್ಯಗೆ
ಮಾರಸುಂದರ ಸುಕುಮಾರ ಶರೀರಕೆ ॥ಆರುತಿ॥

ಒಪ್ಪಿಡಿದವಲಕ್ಕಿ ಒಪ್ಪದಿಂದಲಿ ತಂದು
ನಾರಿರುಕ್ಮಿಣಿ ಸತ್ಯಭಾಮೆಯರೆಲ್ಲರೂ ॥ಆರುತಿ॥

– 0 –

ಮಂಗಳಂಬಿದೆ ಮಾಧವ ಮುರಾರಿ
ಸುಂದರಾಂಗ ನಿನ್ನ ಸನುತಿಂಚುಮಯ್ಯ
ಸರಸಾಕ್ಷಗುಡಿ ಶ್ರೀನಿವಾಸುದೇವಾ

ನಾಗವೇಣ್ಯರೆಲ್ಲಾ ಬೇಗನಿ ಕಲ್ಯಾಣ ರಾಗವ ಪಾಡುತಾ ಮುತ್ತಿನಂಥ
ಜ್ಯೋತಿ
ಎಡದಲಿ ಪದ್ಮ ಬಲದಲಿ ಲಕ್ಷ್ಮಿ ನಡುವೆ
ವೆಂಕಟೇಶ ಶ್ರೀನಿವಾಸುದೇವಾ

– 0 –

ಮಂಗಳಾರುತಿ ಪಾಡುವೆ ಮಹಾತ್ಮಗೆ ಮುತ್ತಿನಾರುತಿ ಎತ್ತುತಾ

ಚಿನ್ನದ ತಟ್ಟೆಯಲ್ಲಿ ರನ್ನದಾರುತಿ ಮಾಡಿ
ಶೃಂಗಾರ ಶೀಲೆಗೆ ಸಂಗೀತ ಲೋಲೆಗೆ
॥ಮಂಗಳಾರುತಿ॥

ಹೇಮದ ತಟ್ಟೆಯಲಿ ವಿಧದಿಂದಾರುತಿ ಮಾಡಿ
ಬಾಗಿಲ ತಡೆ ಹಾಕಿರೆ, ಹಾಕಿರೆ ಸೌರನ್ಗಳ ಹಾಕಿರೆ ರೂಪಾಯಿಗಳ
॥ಮಂಗಳಾರುತಿ॥

ಅಂದಾದ ಮುಖ ನೋಡಿ ಬಾಗಿಲ ತಡೆ ಹಾಕಿ
ಹಾಕಿರೆ ಸೌರನ್ಗಳ ಹಾಕಿರೆ ರೂಪಾಯಿಗಳ ।
।ಮಂಗಳಾರುತಿ॥

– 0 –

## ಆರತಿ ಹಾಡುಗಳು ವಧುವಿಗೆ

ಮಂಗಳ ಮಹಾಗೌರಿ ರಾಗಸಹೋದರಿ
ಗಂಗಾಧರನ ರಾಣಿ ಶ್ರೀಗೌರಿ

ಪರಿಪರಿ ಕುಸುಮ ಕೊಡೆ ಜರತಾರಿ ಸೀರೆ ಕೊಡೆ
ರುದ್ರಾಕ್ಷಿ ಕುಂಕುಮವ ಕೊಟ್ಟು ಕಾಪಾಡೆ ॥ಮಂಗಳ॥

ಮುತ್ತು ಮೂಗುತಿ ಕೊಡೆ ಮತ್ತೆ ರತ್ನವ ಕೊಡೆ
ಮುತ್ತೈದೆ ಭಾಗ್ಯವ ಕೊಟ್ಟು ಕಾಪಾಡೆ ॥ಮಂಗಳ॥

– 0 –

ಎತ್ತಿರೆ ನವರತ್ನದಾರುತಿ ಕಸ್ತುರಿರಂಗನ ರಾಣಿಗೆ
ಕ್ಷೀರವಾರಿಧಿ ತನಯೆ ಶ್ರೀಮಹಾಲಕ್ಷ್ಮಿ ಎಂಬ ಕಾಂತೆಗೆ

ಬೇಡಿದಿಷ್ಟವ ನೀಡು ತಿಳಿಯೋಳು ಸಕಲ ಜನ ಸಂರಕ್ಷಣೆ
ವಿಷ್ಣು ವಕ್ಷಸ್ಥಳ ನಿವಾಸಿಗೆ ಪರಮ ಪಾವನಿ ಜನನಿಗೆ ॥ಎತ್ತಿರೆ॥



ನಿಷ್ಠೆಯಿಂದಲಿ ಸೇವಾಸರಿಗೆ ಮುಕ್ತಿ ನೀಡುವ ಜನನಿಗೆ
ಪ್ರೇಮದಿಂದ ಜಗವ ಪಾಲಿಪ ದೇವಿ ಶ್ರೀಮಹಾಲಕ್ಷ್ಮಿಗೆ ॥ಎತ್ತಿರೆ॥

– 0 –

ಆರತಿ ಬೆಳಗಿರೆ ವೈಭವ ಲಕ್ಷ್ಮಿಗೆ
ಮಂಗಳ ಮಹಾತಾಯಿ ಶ್ರೀದೇವಿಗೆ
ಚಿನ್ನದ ಹರಿವಾಣದಲಿ ಓಕುಳಿ ಇಟ್ಟು
ಆರತಿ ಬೆಳಗಿರೆ ಶ್ರೀಲಕ್ಷ್ಮಿಗೆ

ಮಂದಿರದೊಳು ಧನಧಾನ್ಯ ಐಸಿರಿಯಿರಲಿ
ಮನೆಮಂದಿಗೆಲ್ಲಾ ಸುಖಸೌಭಾಗ್ಯ ಬರಲಿ
ಶ್ರೀಮಂದಾರಧರ ಶ್ರೀಕೃಷ್ಣನ ರಮಣಿಯು
ಬಂದಿಲ್ಲಿ ಆರತಿ ಸ್ವೀಕರಿಸಲಿ

ಜಯ ಜಯ ಎನ್ನಿರಿ ಜಯ ಲಕ್ಷ್ಮಿಗೆ
ಜಯ ಜಯ ಎನ್ನಿರಿ ವೈಭವ ಲಕ್ಷ್ಮಿಗೆ
ಭಯವೆಲ್ಲ ದೂರವಾಗಿ ಜಯವಾಗಲೆಮಗೆಂದು
ಆರತಿ ಬೆಳಗಿರೆ ವೈಭವ ಲಕುಮಿಗೆ.

– 0 –

4 ಆದಿಲಕ್ಷ್ಮಿ ದೇವಿಗೆ ಆರತಿಯ ಎತ್ತಿರೆ
ಅರಿಶಿನ ಕುಂಕುಮ ಹಚ್ಚಿ ಹೂಮಾಲೆ ಹಾಕಿರೆ

ಧಾನ್ಯ ಲಕ್ಷ್ಮಿಗೆ ನೀವು ಧೂಪ ದೀಪ ಹಚ್ಚಿರೆ
ಕನಕ ಲಕ್ಷ್ಮಿಗೆ ನೀವು ನೈವೇದ್ಯ ತನ್ನಿರೆ ॥ಆದಿಲಕ್ಷ್ಮಿ॥

ಬಲದಗಾಲು ಮುಂದೆ ಇಟ್ಟು ಹೊಸಿಲ ದಾಟಿ ಬಾರಮ್ಮ
ಭಾಗ್ಯತಾಯಿ ಮಾಂಗಲ್ಯ ಸೌಭಾಗ್ಯ ನೀಡಮ್ಮ ॥ಆದಿಲಕ್ಷ್ಮಿ॥

ಹಾಲು ತುಪ್ಪ ಹೊಳೆ ಹರಿಸಿ ಹರುಷ ಸುಖವ ತಾರಮ್ಮ
ಧನಧಾನ್ಯವ ಕೊಟ್ಟು ಸಂತಾನ ಕರುಣಿಸಮ್ಮ ॥ಆದಿಲಕ್ಷ್ಮಿ॥

ಕ್ಷೀರಾಬ್ಧಿತನಯೇ ಆನಂದ ನಿಲಯೇ ವಿಷ್ಣುಪ್ರಿಯೆ ಬಾರೆ
ಕಮಲನಯನ ನಿಜ ಕಮಲ ವದನೇ ಕಮಲಾಕ್ಷವಲ್ಲಭೇ ಬಾರೆ
॥ಆದಿಲಕ್ಷ್ಮಿ॥

ಪುಷ್ಪ ಸುಗಂಧಿನಿ ಹರಿಣಿ ವಿಲೋಚಿನಿ ಕರುಣೆಯನ್ನು ತೋರೆ
ಅನಂತ ರೂಪಿಣಿ ಚಿರ ಸುಖದಾಯಿನಿ ಇಷ್ಟಾರ್ಥವ ನೀ ತಾರೆ
॥ಆದಿಲಕ್ಷ್ಮಿ॥

– 0 –

## ಆರತಿ ಹಾಡುಗಳು ವಧುವರರಿಗೆ

ಮಂಗಳಾರುತಿ ರುಕ್ಮಿಣಿ ಕೃಷ್ಣರಿಗೆ
ಜಯ ಮಂಗಳಾರುತಿ ರಾಧ ಕೃಷ್ಣರಿಗೆ

ಆನಂದದಿಂದ ಹಾಡಿ ರುಕ್ಮಿಣಿ ದೇವಕಿನಂದನಿಗೆ
ಕಲ್ಯಾಣವಾಗಿರುವವರಿಗೆ ॥ಮಂಗಳಾರುತಿ॥

ಚೈತನ್ಯನೆಂಬ ಕೃಷ್ಣನಿಗೆ ಪ್ರಕೃತಿ ಮಾತೆಯ
ರುಕ್ಮಿಣಿಗೆ ॥ಮಂಗಳಾರುತಿ॥

– 0 –

ಕುಂಕುಮದಾರತಿ ಪಂಕಜ ಮುಖಿಯರೂ
ದಂಪತಿಗಳಿಗೇ ಎತ್ತಿದರೂ

ಸುರಚಿರವದನೆಗೇ ಸುರರಿಪುನೇತ್ರೆಗೆ
ಕರಿವರಗಮನೆಗೆ ಹರಿಪ್ರಿಯಗೇ ಸುರವಾ
ಪೊರೆವೋ ಹರಿಗೆ ಸಿರಿಗೇ ಸರಸಿ ಜಾಕ್ಷಿಗೆ ನಸುನಗುತಾ
॥ಕುಂಕುಮದಾರತಿ ॥

ತರಣನ ಕಾಯ್ದಗೇ ದುರುಳನ ವೈರಿಗೆ ನರ
ಹರಿ ರೂಪಗೆ ವರಲಕ್ಷ್ಮೀಗೇ ಭರದಿಲಾಲಿಸಿ
ಹರುಷದಿಂದಲಿ ಸರಸೀಜಾಕ್ಷಿಗೆ ಹರುಷದಿಂದಲಿ ॥ಕುಂಕುಮದಾರತಿ ॥



ಜನಕನ ಮನೆಯಲ್ಲಿ ಧನುವೇತ್ತಿ ಮುರಿದು
ಜನಕ ಸುತೆಯಾ ಕರಪಿಡಿದವಗೆ ವನಕೆ ತೆರಳಿ
ಮುನಿಗಳ ಕಾಯ್ದ ರಘು ರಾಮ ಸೀತೆಗೆ ಬೆಳಗುವೆನು
॥ಕುಂಕುಮದಾರತಿ ॥

– 0 –

## ವರನ ಪೂಜೆಗೆ ಹಾಡು

ವರನ ಪೂಜೆಯ ಮಾಡಿದ ಹಿಮವಂತನೂ
ಸುರುಚಿರದ ಪೀಠದೆ ಕುಳಿತಿಹಾ ಕರಿಮುಖನ
ಪೂಜಿಸುತ ಸತಿ ಸಹ

ಕರಕರ್ಘಗಳ ಕೊಡುತಾ ಆಚಮನವಿಕ್ಕುತಾ
ವರವಸ್ತ್ರಗಳ ನೀಡುತಾ ಕೊರಳಿಗೆ ರತ್ನದ ಸರ
ವನ್ಹಾಕುತ ಸಂತತಾ ಮಾನಸದಿ ತನ್ನಯ ತರಳೆ
ಗೊಳು ನನ್ನ ರಸಲರಿಯದೇ ಮರುಗುತಿದೆ ಶಂಕರನೆ
ದೊರಕಿದರೂ ಚಿರಸುಕೃತ ಭಾಗ್ಯಂಗಳೆನ್ನುತಾ
ಪರಿಪರಿಯ ಸಮರಸವಾನ್ಹಾಕುತಾ ॥ವರನ॥

ಫಣಿಗೆ ಕುಂಕುಮವಿರಿಸಿ ಕಾಡಿಗೆಯ ಲೋಚನಾಕೆ ಹಚ್ಚಿ
ಮುದವೆರಸಿ ಹಸ್ತದೊಳ ರಿಸಿನ ಫಲಗಳನಿರಿಸೀ
ಪಾಲ್ ಕೊಟ್ಟು ನಾನಾ ಘೃತದುಕೂಲಗಳೋದಿಸಿ
ನೀರಾಜನವ ಬೆಳಗಿಸುವಾ ದೂಪದಿಂದಲಿ
ಮನೆಗೆ ಕರ ತಂದೆಲ್ಲರನು ಭೋಜನದೊಳಗೆ
ಸಂತೋಷಪಡಿಸುತಾ ॥ವರನ॥

## ಭೂಮದ ಊಟಕ್ಕೆ ಹಾಡು

ಚಂದ್ರಮುಖಿತಂದು ಬಡಿಸೆ ರಂಗನಾಥ ಲಕ್ಷ್ಮೀ ಭೂಮಕ್ಕೆ

ಸಾಲು ಬಾಳೆಲೆ ಹಾಕಿ ಮೇಲೆ ಪನ್ನಿರ ತಳಿದೂ ಪಾಯಿಸಾ
ಪಾತ್ರಭಿಗಾರ ನೀರೆಯರೂ ಹರಿಯ ಭೂಮಕೆ
॥ಚಂದ್ರಮುಖಿತಂದು॥

ಶಾವಿಗೆಯ ಪಾಯಸವು ಮೇಲೆ ದೊನ್ನೆ ಕ್ಷೀರಘೃತವೂ
ಲಾಡು ಚಿರೋಟಿ ಪೇಣಿ ಮಂಡಿಗೇ ಮಿತ್ರೆಯರು
ಹರಿಯ ಭೂಮಕೆ ॥ಚಂದ್ರಮುಖಿತಂದು॥

ಉಪ್ಪು ಉಪ್ಪಿನಕಾಯಿ ಚಟ್ನಿ ಕೋಸಂಬರಿ ಹಪ್ಪಳ
ಸಂಡಿಗೆ ಕಡುಬು ಮಿತ್ರೆಯರು ಹರಿಯ ಭೂಮಕೆ
॥ಚಂದ್ರಮುಖಿತಂದು॥

## ವಧುವನ್ನು ಅತ್ತೆಯ ಮನೆಗೆ ಒಪ್ಪಿಸುವಾಗ ಹಾಡುವ ಹಾಡು:

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು
ನಿಮ್ಮ ಮಡಿಲೊಳಗಿಡಲು ತಂದಿರುವೆವು ಕೊಳ್ಳಿರಿ
ಮನವನ್ನು ತುಂಬಲೊಪ್ಪಿಸುವೆವು

ಈ ಮನೆಯು ಈ ಇವರೆ ನಿನ್ನವರು ಮುಂದೆ
ಇವರೆ ತಾಯ್ಗಳು ಸಖರು ಭಾಗ್ಯವನು ಬೆಳೆಸುವರು
ಇವರ ದೇವರೆ ನಿನ್ನ ದೇವರುಗಳು ॥ಎಮ್ಮ ಮನೆಯಂಗಳದಿ॥

ನಿಲ್ಲು ಕಣ್ಣೊರೆಸಿಕೋ ನಿಲ್ಲು ತಾಯ್ ಹೋಗುವೆವು
ತಾಯಿರಾ ತಂದೆಯರಾ ಕೊಳ್ಳಿರಿ ಇವಳ
ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿವಂತೆ
ತುಂಬಿದಾಯುಷ್ಯದಲಿ ಬಾಳಿ ಬದುಕು ॥ಎಮ್ಮ ಮನೆಯಂಗಳದಿ॥



## ಲಾಲಿ ಹಾಡು – ಹೆಣ್ಣು ಕೂಸಿಗೆ

ತೂಗಿರೆ ಲಲಿತೆಯಾ ತೂಗಿರೆ ಮಾತೆಯ
ತೂಗೀ ಜೋ ಜೋ ಹಾಡಿರೇ

ಶ್ರೀ ಭುವನೇಶ್ವರಿ ಶ್ರೀಮಾತೆಯ
ಗಾಯತ್ರಿ ಸಾವಿತ್ರಿ ಭೂಮಾತೆಯ ॥ತೂಗಿರೆ॥

ಶ್ರೀಚಂಡಿ ಚಾಮುಂಡಿ ಭೈರವಿಯ
ಈಜಗದ ಬೆಳಕಾದ ಶಿವಜ್ಯೋತಿಯಾ ॥ತೂಗಿರೆ॥

ವೈಕುಂಠ ವಾಸಿನಿ ಶ್ರೀಲಕ್ಷ್ಮೀಯಾ
ಕೈಲಾಸ ವಾಸಿನಿ ಶ್ರೀಗೌರಿಯಾ ॥ತೂಗಿರೆ॥

ಓಂಕಾರ ವಾಸಿನಿ ಶ್ರೀವಾಣಿಯಾ
ಶ್ರೀ ಚಕ್ರವಾಸಿನಿ ಶ್ರೀಲಲಿತೆಯ ॥ತೂಗಿರೆ॥

## ಲಾಲಿ ಹಾಡು – ಗಂಡು ಕೂಸಿಗೆ

ಲಾಲಿ ಗೋವಿಂದ ಲಾಲಿ ಕೌಶಲ್ಯ ಬಲ ಶ್ರೀರಾಮ ಲಾಲಿ
ಬಾಲ ಮುನಿ ಪಾದ್ಯ ಲಾಲಿ

ಜಾನಕಿ ರಮಣ ಶ್ರೀರಾಮ ಲಾಲಿ
ಫಲವಾಧರೆಯರೆಲ್ಲಾ ಈ ಶಿಶುವು ತುಲ್ಯವರ್ಜಿತೆ
ವೆನುತಲಿ ಸುಲಲಿತೆ ಗಾನದಿಂದ ತೂಗಿದರು
ಕಲ್ಯಾಣಿ ರಾಗದಿಂದ ॥ಲಾಲಿ ಗೋವಿಂದ ಲಾಲಿ॥

ಆನಂದ ಸದನದೊಳಗೆ ಗೋಪಿಯರು
ಆನಂದ ಸುತನ ಕಂಡು ಆನಂದ ಭರಿತರಾಗಿ
ತೂಗಿದರು ಆನಂದ ಭೈರವವಿಂದ ॥ಲಾಲಿ ಗೋವಿಂದ ಲಾಲಿ॥

ದೇವಾದಿ ದೇವನೆಂದು ಈ ಶಿಶುವು
ಭಾವಾತೀತನೆಂದು
ದೇವ ಗಂಧರ್ವ ಪಾಡಿ ತೂಗಿದರು
ದೇವಿ ಗಾಂಧಾರಿಂದ ॥ಲಾಲಿ ಗೋವಿಂದ ಲಾಲಿ॥

## ಆಶೀರ್ವಾದದ ಹಾಡು – ಗಂಡು ಮಕ್ಕಳಿಗೆ

ಆಶೀರ್ವದಿಸಿದರು ಆ ಮುನಿ ಆಶೀರ್ವದಿಸಿದರು
ಸಾವಿರ ನಾಮದೊಳು ಸುಖವಾಗಿರೆಂದು ಆಶೀರ್ವದಿಸಿದರು

ವಿದ್ಯಾ ಬುದ್ಧಿಗಳಲ್ಲಿ ಪ್ರಬುದ್ಧರಾಗಿರೆಂದು
ವಿದ್ಯೆಗಳನ್ನೆಲ್ಲಾ ಗೆದ್ದು ಬನ್ನಿರೆಂದು ॥ಆಶೀರ್ವದಿಸಿದರು॥

ಮಾತೆಯ ವಾಕ್ಯವನು ಮೀರದಿರೆಂದು
ಭೂತಳದೊಲು ಸುಖವಾಸನಾಗಿರೆಂದು ॥ಆಶೀರ್ವದಿಸಿದರು॥

## ಆಶೀರ್ವಾದದ ಹಾಡು – ಹೆಣ್ಣು ಮಕ್ಕಳಿಗೆ

ಸರಸಿಜೋದ್ಭವನರಸಿ ಕರುಣದಿ ತರುಣಿ ನೀ ಸುಖವಾಗಿರು
ಒಡನೆ ಅನುಜರ ಬಂಧು ಬಳಗಕ್ಕೆ ನಡದಿ ಮಾಣಿಕ್ಯವೆನ್ನಿಸು
॥ಸರಸಿಜೋದ್ಭವನರಸಿ॥

ಅತ್ತೆ ಮಾವರ ಸೇವೆಯನು ಬಹು ಭಕ್ತಿಯಿಂದ ಮಾಡು ನೀ
ಸುಪುತ್ರರನು ಪಡೆ ಇಷ್ಟಮಂದಿಯ
ಲಕ್ಷ್ಮಿ ದೇವಿಯ ದಯೆಯಲಿ ॥ಸರಸಿಜೋದ್ಭವನರಸಿ॥

ಪೃಥ್ವಿ ಪಾಲಕನಾದ ಪತಿಯೊಳು ಸತತ ಸುಖವನು ಹೊಂದುತ
ಸಿರಿಯು ವಾಣಿಯು ಗೌರಿ ದಯೆಯಲಿ ಸರ್ವ
ಸುಖಗಳ ಹೊಂದುತ ॥ಸರಸಿಜೋದ್ಭವನರಸಿ॥



## ಎಣ್ಣೆ ಶಾಸ್ತ್ರದ ಹಾಡು – ವರನಿಗೆ

ಎಣ್ಣೆಯನ್ನೊತ್ತುತ್ತಾ ಯದುಕುಲ ತಿಲಕಗೆ
ದೇವಕಿ ನಂದನಗೆ ಹರಸಿದಳು

ಮಧುರಾ ಪಟ್ಟಣಕ್ಕೋಗಿ ಮಾವ ಕಂಸನ ಕೊಂದ
ಮದನ ಗೋಪಿಯರ ಹರಸಿದಳು ॥ಎಣ್ಣೆಯನ್ನೊತ್ತುತ್ತಾ॥

ಆವೇಶವಂತನಾಗಿ ಅತೀ ಬಲವಂತನಾಗಿ
ಗೋಪಿ ದೇವಿ ಹರಸಿದಳು ॥ಎಣ್ಣೆಯನ್ನೊತ್ತುತ್ತಾ॥

## ಶ್ರೀಮಂತದ ಹಾಡು:

ಪ್ರೀತಿಯ ಕುವರಿಯು ಪತಿಯ ಮನೆ ಸೇರಿ
ಪತಿಯೊಡನೆ ಬಾಳುವೆ ಮಾಡಲು ಆಕೆಗೆ
ಫಲಿಸಿತು ಗರ್ಭವು ಚಂದದಲಿ

ಅಂದದ ಅರಮನೆಗೆ ಚಂದದ ಐಸಿರಿಗೆ
ವಾರಸುದಾರನು ಬರುವನು ಇದನ್ನರಿತು
ಪುಳಕಿತವಾಯಿತು ತನು ಮನವು

ತಿಂಗಳು ತುಂಬಿತು ಬಾಯ್ರುಚಿ ಕೆಟ್ಟಿತು
ಹುಳಿ ಹುಳಿ ಬೇಕೆಂದು ಬಯಸಿತು
ನಾಲಗೆ ಹುಣಸೆ ಮಾವು ಬೇಕೆಂದಿತು

ತಿಂಗಳೆರಡು ತುಂಬಿ ಬಯಕೆಯು ಶುರುವಾಗಿ
ಏನೊಂದು ಬಾಯಿಗೆ ರುಚಿಸದು ಹೆಣ್ಣಿಗೆ
ಅಮ್ಮನ ನೆನಪು ಹಸಿಯಾಯ್ತು

ಮೂರು ತಿಂಗಳಿಗೆ ಮುನ್ಸಾರೆ ತಕ್ಕೊಂಡು ಓಡೋಡಿ
ಬಂದರು ತಾಯಿ ತಂದೆ ಮಗಳಿಗೆ ಕಜ್ಜಾಯ
ತಿನ್ನಿಸಿ ಹರಸಿದರು

ನಾಲ್ಕು ತಿಂಗಳಿಗೆ ನಲುಗೀತು ನಗು ಮೊಗವು
ಸುಸ್ತು ಸಂಕಟ ಆಯಾಸದಿ ಕಳೆಯಲು
ಹಣ್ಣು ಹಂಪಲಿನ ಹಾರೈಕೆಯು

ಐದು ತಿಂಗಳಿಗೆ ಶ್ರೀಮಂತವಾಗಲು ತವರಿಗೆ
ಹೋಗುವ ಸಂಭ್ರಮವು ಹೆಣ್ಣಿಗೆ ಮೊಗದಲಿ
ಮೂಡಿತು ಹೊಸ ಹರುಷವು

ಆರು ತಿಂಗಳಲಿ ಅಮ್ಮನ ಅಕ್ಕರೆ
ಆನಂದದಿಂದ ಕಳೆಯಿತು ಅಮ್ಮನ
ರುಚಿ ರುಚಿ ತಿಂಡಿಗಳ ಪೂರೈಕೆಯು

ಏಳನೇ ತಿಂಗಳಿಗೆ ಮೊಗದಲ್ಲಿ ಕಳೆ ತುಂಬಿ
ಬಿದಿಗೆ ಚಂದ್ರನ ತೆರದಿ ಬೆಳಗುತಿರಲು ಮೊಗವು
ತಾಯಿ ತೆಗೆವಳು ದೃಷ್ಟಿ ದಿನ ನಿತ್ಯವು

ಎಂಟನೆಯ ತಿಂಗಳಿಗೆ ಮೈದುಂಬಿ ನಿಂತಳು
ಶ್ರೀಗೌರಿದೇವಿಯಂತೆ ಕಾಣುತಲಿ ನಾರಿ
ಶ್ರೀಲಕ್ಷ್ಮಿದೇವಿಯಂತೆ ಕಂಗೊಳಿಸೀತು

ಒಂಭತ್ತನೆ ತಿಂಗಳಿಗೆ ಶ್ರೀಮಂತ ಬಲು ಜೋರು
ಹಸಿರು ಸೀರೆ ಹಸಿರು ಬಳೆ ತೊಡಿಸಿ ಮಗಳಿಗೆ
ಚಿನ್ನದಾಭರಣಗಳಿಂದಲಂಕರಿಸಿ

ತುಂಬಿತು ತಿಂಗಳು ಒಂಭತ್ತು ಆಗಲೇ ಒಂಭತ್ತು
ದಿನವು ಕಲೆಯಿತು ಆಗಲೇ ಕಂಡಿತು
ಉದರದಲಿ ಎಳೆಯ ನೋವು

ಕಳೆವವು ಕ್ಷಣಗಳು ಉರುಳಿತು ವೇಳೆಯು
ಉದಿಸಿದ ಆ ಧರೆಗೆ ಬಾಲರವಿಯು
ಕಂದನ ಕಂಡೊಡನೆ ಹೆಣ್ಣಿನ ನೋವೆಲ್ಲ

ಮರೆಯಾಗಿ ಮೂಡಿತು ನಸುನಗೆಯು
ಮೊಗದಲಿ ಬೆಳಗಿತು ಮನೆಯಲ್ಲಿ ಸಂತೋಷವು



## ಬಸುರಿ ಹೆಣ್ಣಿಗೆ ಆಶೀರ್ವಾದದ ಹಾಡು

ಆಶೀರ್ವಾದ ಮಾಡಮ್ಮ ವಾಸುದೇವನ ರಾಣಿಗೆ
ವಾಸುದೇವನ ರಾಣಿಗೆ ನವಮೋಹನಾಂಗಿ ರುಕ್ಮಿಣಿಗೆ

ಧನವಂತೆ ನೀನಾಗೆಂದು ಭಾಗ್ಯವನು ಪಡೆಯೆಂದು
ಭಾಗ್ಯವನು ಪಡೆಯೆಂದು ನೂರು ವರ್ಷ ಬಾಳೆಂದು

ಚೆಂಡು ಹೂವ ಮುಡಿಯಮ್ಮ ಹೆಣ್ಣು ಮಕ್ಕಳ ಪಡೆಯಮ್ಮ
ಹೆಣ್ಣು ಮಕ್ಕಳ ಪಡೆಯಮ್ಮ ಜೋಡು ತೊಟ್ಟಿಲು ಕಟ್ಟಮ್ಮ

ಗುಂಡು ಮಲ್ಲಿಗೆ ಮುಡಿಯಮ್ಮ ಗಂಡು ಮಕ್ಕಳ ಪಡೆಯಮ್ಮ
ಗಂಡು ಮಕ್ಕಳ ಪಡೆಯಮ್ಮ ಜೋಡು ತೊಟ್ಟಿಲು ಕಟ್ಟಮ್ಮ

ಪಾರಿಜಾತ ಮುಡಿಯಮ್ಮ ಪಾದಸೇವೆ ಮಾಡಮ್ಮ
ಪಾದಸೇವೆ ಮಾಡಮ್ಮ ಚಂದದಿಂದಲಿ ಬಾಳಮ್ಮ

ಆಶೀರ್ವಾದ ಮಾಡೀರೆ ಸುಭದ್ರೆಗೆ ಆಶೀರ್ವಾದ ಮಾಡೀರೆ
ಗುಂಡು ಮಲ್ಲಿಗೆ ಹೂವು ಮುಡಿಸೀರೆ ಸುಭದ್ರೆಗೆ
ಗಂಡು ಮಗನ ಪಡೆಯಲೆಂದು

ಸಂಪಿಗೆ ಹೂಗಳ ಮುಡಿಸೀರೆ ಸುಭದ್ರೆಗೆ
ಹೆಣ್ಣು ಮಕ್ಕಳ ಪಡೆಯಲೆಂದು

ಜಾಜೀಯ ಹೂಗಳ ಮುಡಿಸೀರೆ ಸುಭದ್ರೆಗೆ
ಜೋಡು ತೊಟ್ಟಿಲು ಕಟ್ಟಲೆಂದು

ಸೇವಂತಿಯ ಮಾಲೆಯ ಹಾಕೀರೆ ಸುಭದ್ರೆಗೆ
ಸುಖದ ಪ್ರಸವವಾಗಲಿ ಎಂದು

## ಗುಂಡಪ್ಪನ ಲಾಲಿ ಹಾಡು

ಜೋ ಜೋ ಗುಂಡಾ ಒಡಲಲ್ಲಿಟ್ಟವನೆ
ಜೋ ಜೋ ಗುಂಡಾ ಮಾಲಾ ಧರಿಸಿದ ಶಿವನೆ

ಆಕಾಶದಲ್ಲಿರುವ ಚಂದನ ಧರಿಸಿ
ಘೋರ ವಿಷವನು ತಂದು ಕಂಠದಲ್ಲಿಟ್ಟವನೆ ॥ಜೋ ಜೋ॥

ಎಡ ತೊಡೆಯ ಮೇಲೆ ಪಾರ್ವತೀದೇವಿ
ಶಿರದಲ್ಲಿ ಧರಿಸಿರುವೆ ಗಂಗಾದೇವಿ ॥ಜೋ ಜೋ॥

## ಸಂಜೆ ದೀಪ ಹಚ್ಚುವಾಗ ಹಾಡುವ ಹಾಡು

ಬಂದಾಳು ಮಹಾಲಕ್ಷ್ಮಿಯು ನಮ್ಮ ಮನೆಗೆ
ಸಂಜೆಯ ಹೊತ್ತಿನಲಿ ಹೆಜ್ಜೆ ಮೇಲ್ಹೆಜ್ಜೆಯನ್ನಿಕ್ಕುತ
ಕಾಲ್ಗೆಜ್ಜೆಯ ಘಲ್ಲು ಘಲ್ಲೆನಿಸುತ್ತಾ ಮಾರ್ಜಗನ
ಮೋಹಿಸುವ ಮುರಹರನ ರಾಣಿ ಸಾಧು
ಸಜ್ಜನರ ರಾಣಿ ಭಾಗ್ಯವ ಕೊಡಲಿಕ್ಕೆ

ಕನಕವಾಯಿತು ಮಂದಿರ ದೇವಿಯು ಬರಲು
ಜಯ ಜಯವೆನುತ ಸನಕಾದಿ ಮುನಿಗಳು
ಸೇವೆಯ ಮಾಡುತಿರಲು ಕನಕದಲ್ಲಿರುವ
ಕಾಂತೇಯನ ಕರಕೊಂಡು

ಶ್ರಾವಣ ಶುಕ್ರವಾರದಿ ಶುಕ್ಲಪಕ್ಷ ಪೌರ್ಣಮಿ
ದಿವಸದಲಿ ಭೂಸುರರೆಲ್ಲಾ ಕೂಡಿ ಸಾಸಿರ
ನಾಮ ಪಾಡಿ ವಾಸುದೇವನ ರಾಣಿ
ವಾಸವಾಗಿರಲು



## ಚೌಡೇಶ್ವರಿ ತಾಯಿಗೆ ಮಂಗಳಾರತಿ ಹಾಡು

ಮಂಗಳ ಜಯ ಜಯ ಮಂಗಳ ಜಯ ಮಂಗಳ
ಶುಭಮಂಗಳ ಚೌಡೇಶ್ವರಿ ತಾಯಿಗೆ

ಪರಮ ಕಲ್ಯಾಣಿಗೆ ವರನೀಲವೇಣಿಗೆ
ಶರಣರ ಪಾಲಿಪ ಸರ್ವಾಣಿಗೆ
ಧುರಿತ ಕೋಟಿಗಳೆಲ್ಲಾ ಪರಿಹರಿಸುವ ತಾಯಿಗೆ
ವರವುಳ್ಳ ಚೌಡೇಶ್ವರಿ ತಾಯಿಗೆ ॥ಮಂಗಳ॥

ಓಂಕಾರ ಬೀಜ ಅಕ್ಷರಿಮಾ ಮಾಹೆಗೆ ಕಿಂಕರಿ
ಪರಮ ಗೋಚರ ತಾಯಿಗೆ ಶಂಕರನರ್ಧಾಂಗಿ
ಸಲಹುವ ತಾಯಿಗೆ ಶಂಕೆ ಇಲ್ಲದ ಬನಶಂಕರಿಗೆ ॥ಮಂಗಳ॥

ದೊಡ್ಡಬಳ್ಳಾಪುರದ ದೇವಾಂಗದ ಪೇಟೆಯಲ್ಲಿ ಸ್ಥಿರವಾಗಿ ನೆಲೆಸಿರುವ
ಶೃಂಗಾರಿಗೆ
ಧುರಿತ ಕೋಟಿಗಳೆಲ್ಲಾ ಪರಿಹರಿಸುವ ತಾಯಿಗೆ
ವರವುಳ್ಳ ಚೌಡೇಶ್ವರಿ ತಾಯಿಗೆ ॥ಮಂಗಳ॥

## ವಾಸವಿ ಹಾಡು

ಬಾರಮ್ಮ ಬಾತಾಯೇ ಶ್ರೀವಾಸವಿ
ಬಾರಮ್ಮ ನೀ ಬೇಗ ಶ್ರೀವಾಸವಿ ಶ್ರೀವಾಸವಿ

ಮುತ್ತಿನಾ ರಂಗೋಲಿ ಹಾಕಿದೆವು
ರತುನದಾ ಕಂಬಳಿ ಹಾಸಿವೆವು
ಸುಮಭರಿತ ಹೂಮಾಲೆ ಕಟ್ಟಿವೆವು
ಪೂಜೆಗೆ ಎಲ್ಲರೂ ಬಂದಿವೆವು ॥ಬಾರಮ್ಮ॥

ಭಕ್ತಿಯಿಂದಲಿ ನಾವು ಸ್ಮರಿಸುವೆವು
ಶ್ರದ್ಧೆಯಿಂದಲಿ ಭಜನೆ ಮಾಡುವೆವು
ನಿಷ್ಠೆಯಿಂದಲಿ ಪೂಜೆ ಮಾಡುವೆವು
ನೇಮದಿಂದಲಿ ಸೇವೆ ಮಾಡುವೆವು ॥ಬಾರಮ್ಮ॥

ಮುತ್ತಿನಾ ಮಂಟಪ ನಿನಗಾಗಿದೆ
ರತ್ನದಾ ಉಯ್ಯಾಲೆ ನಿನಗಾಗಿದೆ
ಪಟ್ಟು ಪೀತಾಂಬರ ನಿನಗಾಗಿದೆ
ಪೂಜೆಗೆ ಎಲ್ಲವೂ ಅಣಿಯಾಗಿದೆ ॥ಬಾರಮ್ಮ॥

ಮುಕ್ತಿದಾಯಕೆ ನೀನು ಶ್ರೀವಾಸವಿ
ಮುಕ್ತಿಯಾ ನೀಡೆಮಗೆ ಶ್ರೀವಾಸವಿ
ಮುಲ್ಲೋಕ ಮಾತೆಯೇ ಶ್ರೀವಾಸವಿ
ದರುಶನವ ನೀಡೆಮಗೆ ಶ್ರೀವಾಸವಿ ॥ಬಾರಮ್ಮ॥

**ವಾರಕ್ಕನುಸಾರವಾಗಿ ಪೂಜಿಸಲು ಬಳಸಬಹುದಾದ ಶ್ರೇಷ್ಠ ಪುಷ್ಪಗಳು:**

ಭಾನುವಾರ – ಕಣಗಿಲೆ, ದಾಸವಾಳ ಮತ್ತು ತುಂಬೆ
ಸೋಮವಾರ – ಮಲ್ಲಿಗೆ, ಜಾಜಿ ಮತ್ತು ತುಂಬೆ
ಮಂಗಳವಾರ – ಸೇವಂತಿಗೆ, ಕೇದಿಗೆ ಮತ್ತು ಗುಲಾಬಿ
ಬುಧವಾರ – ಮಲ್ಲಿಗೆ ಮತ್ತು ಕೆಂಪು ತಾವರೆ
ಗುರುವಾರ – ಸಂಪಿಗೆ, ಸೇವಂತಿಗೆ ಮತ್ತು ದಾಸವಾಳ
ಶುಕ್ರವಾರ – ಸಂಪಿಗೆ, ತಾವರೆ ಮತ್ತು ಕನಕಾಂಬರ
ಶನಿವಾರ – ಗುಲಾಬಿ

**ಪೂಜಾ ಕಾರ್ಯದಲ್ಲಿ ಬಳಸುವ ಪುಷ್ಪಗಳಿಂದ ಲಭಿಸುವ ಫಲಗಳು:**

ಮಲ್ಲಿಗೆ – ಆರೋಗ್ಯ ಲಾಭ
ಸಂಪಿಗೆ – ಶತ್ರುಕಾಟದಿಂದ ಮುಕ್ತಿ
ನಂದಿ ಬಟ್ಟಲು – ಸುಖ, ಶಾಂತಿ ಮತ್ತು ನೆಮ್ಮದಿ ಪ್ರಾಪ್ತಿ
ಕಣಗಿಲೆ – ಮಾಂತ್ರಿಕ ದೋಷದ ನಿವಾರಣೆ
ಕೇದಿಗೆ – ಅಶಾಂತಿ, ಮನಸ್ತಾಪ ಮತ್ತು ಜಗಳಗಳಿಂದ ಮುಕ್ತಿ
ಬಿಳಿಎಕ್ಕಾ – ರೋಗ ರುಜಿನಗಳ ನಿವಾರಣೆ
ಸೂರ್ಯಕಾಂತಿ – ಕೆಲಸ ಕಾರ್ಯಗಳಲ್ಲಿ ಜಯ, ಐಶ್ವರ್ಯ ಮತ್ತು ಕೀರ್ತಿ ಲಾಭ



ಪಾರಿಜಾತ – ಸರ್ಪದೋಷದಿಂದ ಮುಕ್ತಿ
ಮಾಲತಿ – ಸರ್ವ ಪಾಪಗಳ ನಿವಾರಣೆ
ನೀಲಾಂಬರಿ – ಶನಿದೋಷ ನಿವಾರಣೆ
ಸುರಭಿ – ಕಾರ್ಯಸಿದ್ಧಿ
ಬಕುಲ – ಸ್ಥಿರಾಸ್ತಿ ಸಿದ್ಧಿ
ಕರವೀರ – ಸೃಜನಶೀಲತೆ, ಕಲ್ಪನಾಶಕ್ತಿ ವೃದ್ಧಿ
ತುಂಬೆ – ನೆಮ್ಮದಿ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಆಸಕ್ತಿ ವೃದ್ಧಿ
ಅಶೋಕ – ದಾರಿದ್ರ್ಯ ಮತ್ತು ದುಃಖ ನಿವಾರಣೆ
ಅಗಸೆ – ಸರ್ವ ಪಾಪಗಳ ನಿವಾರಣೆ

ವಾಸ್ತವಿಕವಾಗಿ ಮೇಲಿನ ಪುಷ್ಪಗಳನ್ನು ದೇವರಿಗೆ ಸಮರ್ಪಿಸಿದಾಗ ಅದುವೇ ಬಾಹ್ಯ ಅಲಂಕಾರ ಎನಿಸುವುದಷ್ಟೇ. ಆ ದಯಾಮಯನಿಗೆ ಅತ್ಯಂತ ಪ್ರಿಯವಾದ ಪುಷ್ಪಗಳೆಂದರೆ, ನಮ್ಮಲ್ಲೇ ಅಡಗಿರುವ ಅಷ್ಟ ಮಾನಸಪುಷ್ಪಗಳೆನಿಸಿದ ಅಹಿಂಸೆ, ದಮ, ದಯೆ, ಕ್ಷಮೆ, ಜ್ಞಾನ, ತಪಸ್ಸು, ಧ್ಯಾನ ಮತ್ತು ಸತ್ಯಗಳನ್ನು ನಿತ್ಯ ಆಚರಿಸಿಕೊಂಡು ಜೀವನ ನಡೆಸಿದರೆ ಅದಕ್ಕಿಂತ ಮಿಗಿಲಾದದ್ದು ಮತ್ತೊಂದಿಲ್ಲ!

**ನಿತ್ಯ ಪೂಜೆಗೆ ಬಳಸಬಹುದಾದ ನೈವೇದ್ಯದ ವಸ್ತುಗಳ ಫಲ :**

ಪಾಡ್ಯಮಿ – ಹಸುವಿನ ತುಪ್ಪದಿಂದ ಪೂಜೆ ನಡೆಸಿದರೆ ಆರೋಗ್ಯ ವೃದ್ಧಿ.
ಬಿದಿಗೆ – ಸಕ್ಕರೆಯೊಂದಿಗೆ ಪೂಜಿಸಿದರೆ ಆಯಸ್ಸು ವೃದ್ಧಿಯಾಗುವುದು.
ತದಿಗೆ – ಹಾಲಿನೊಂದಿಗೆ ಪೂಜಿಸಿದರೆ ದುಃಖಗಳ ಶಮನವಾಗುತ್ತದೆ.
ಚೌತಿ – ಹಬ್ಬದಡಿಗೆಯೊಂದಿಗೆ ಪೂಜಿಸಿದರೆ ವಿಘ್ನಗಳ ನಿವಾರಣೆ.
ಪಂಚಮಿ – ಬಾಳೆಹಣ್ಣಿನೊಂದಿಗೆ ಪೂಜಿಸಿದರೆ ಬುದ್ಧಿ ವಿಕಸನಕ್ಕೆ ಸಹಕಾರಿ.
ಷಷ್ಠಿ – ಜೇನುತುಪ್ಪದೊಂದಿಗೆ ಪೂಜಿಸಿದರೆ ವದನ ಪ್ರಸನ್ನವಾಗುತ್ತದೆ.

| | | |
|---|---|---|
| ಸಪ್ತಮಿ | – | ಬೆಲ್ಲದೊಂದಿಗೆ ಪೂಜಿಸಿದರೆ ದುಃಖಗಳು ದೂರವಾಗುವುದು. |
| ಅಷ್ಟಮಿ | – | ತೆಂಗಿನಕಾಯಿಯೊಂದಿಗೆ ಪೂಜಿಸಿದರೆ ಸಂತಾಪ ನಿವಾರಣೆ. |
| ನವಮಿ | – | ಅವಲಿನೊಂದಿಗೆ ಪೂಜಿಸಿದರೆ ಇಹ–ಪರಗಳಲ್ಲಿ ಸುಖ ಹೊಂದಬಹುದು. |
| ದಶಮಿ | – | ಕರಿ ಎಳ್ಳಿನೊಂದಿಗೆ ಪೂಜಿಸಿದರೆ ಯಮನ ಭಯ ದೂರವಾಗುವುದಕ್ಕೆ ಸಹಕಾರಿ. |
| ಏಕಾದಶಿ | – | ಮೊಸರಿನೊಂದಿಗೆ ಪೂಜಿಸಿದರೆ ಭಗವತಿಯು ಪ್ರಸನ್ನಳಾಗುತ್ತಾಳೆ. |
| ದ್ವಾದಶಿ | – | ಅವಲಕ್ಕಿಯೊಂದಿಗೆ ಪೂಜಿಸಿದರೆ ದೇವರ ಪ್ರೀತಿಗೆ ಪಾತ್ರರಾಗಬಹುದು. |
| ತ್ರಯೋದಶಿ | – | ಕಡ್ಲೆಕಾಳಿನೊಂದಿಗೆ ಪೂಜಿಸಿದರೆ ಸಂತಾನ ಪ್ರಾಪ್ತಿಗೆ ಸಹಕಾರಿ |
| ಚತುರ್ದಶಿ | – | ಹುರಿಹಿಟ್ಟಿನೊಂದಿಗೆ ಪೂಜಿಸಿದರೆ ಶಿವನು ಪ್ರಸನ್ನನಾಗುತ್ತಾನೆ |
| ಪೌರ್ಣಮಿ | – | ಪಾಯಸದೊಂದಿಗೆ ಪೂಜಿಸಿದರೆ ಪಿತೃಗಳಿಗೆ ತೃಪ್ತಿಯಾದಂತೆ |
| ಅಮಾವಾಸ್ಯೆ | – | ಪಾಯಸದೊಂದಿಗೆ ಪೂಜಿಸಿದರೆ ಅನಿಷ್ಟಗಳ ನಿವಾರಣೆ. |

## ನವರಾತ್ರಿಗಳಿಗೆ ಸಿದ್ಧಪಡಿಸಬಹುದಾದ ನೈವೇದ್ಯ

| | | |
|---|---|---|
| ಪಾಡ್ಯ | – | ಹೋಳಿಗೆ, ಚಿತ್ರಾನ್ನ, ಶಾವಿಗೆ ಪಾಯಸ ಮತ್ತು ಮೊಸರನ್ನ. |
| ಬಿದಿಗೆ | – | ಹೆಸರು ಬೇಳೆ ಪಾಯಸ ಮತ್ತು ಮೊಸರನ್ನ. |
| ತದಿಗೆ | – | ಸಬ್ಬಕ್ಕಿ ಪಾಯಸ ಮತ್ತು ಮೊಸರನ್ನ. |
| ಚೌತಿ | – | ಪೊಂಗಲ್ ಮತ್ತು ಮೊಸರನ್ನ. |
| ಪಂಚಮಿ | – | ಗೋಧಿಪಾಯಸ ಮತ್ತು ಮೊಸರನ್ನ. |
| ಷಷ್ಠಿ | – | ಸಜ್ಜಿಗೆ, ವಡೆ ಮತ್ತು ಮೊಸರನ್ನ. |
| ಸಪ್ತಮಿ | – | ಮೊಸರನ್ನ. |
| ಅಷ್ಟಮಿ | – | ಹೂರ್ಣದ ಕರಿಗಡುಬು, ಚಿತ್ರಾನ್ನ, ವಡೆ, ಪಾಯಸ ಮತ್ತು ಮೊಸರನ್ನ. |
| ನವಮಿ | – | ಒಬ್ಬಟ್ಟು, ಹಾಲು, ಹುಳಿಯನ್ನ ಮತ್ತು ಮೊಸರನ್ನ. |
| ವಿಜಯದಶಮಿ | – | ಹೋಳಿಗೆ, ಪಾಯಸ, ಚಿತ್ರಾನ್ನ ಮತ್ತು ಮೊಸರನ್ನ. |



## ಹಬ್ಬಗಳಲ್ಲಿನ ಸಿಹಿ ಅಡುಗೆಗಳು

| | | |
|---|---|---|
| ಮಕರ ಸಂಕ್ರಾಂತಿಗೆ | – | ಸಿಹಿ ಪೊಂಗಲ್ |
| ಶಿವರಾತ್ರಿಗೆ | – | ಉಪ್ಪಿಟ್ಟು – ಕೇಸರಿಬಾತ್ |
| ಹೋಳಿ(ಕಾಮನ) ಹಬ್ಬ | – | ಪಾಯಸ |
| ಚಾಂದ್ರಮಾನ ಯುಗಾದಿಗೆ | – | ಹೋಳಿಗೆ |
| ಶ್ರೀರಾಮನವಮಿಗೆ | – | ಪಾಯಸ, ಪಾನಕ, (ಕರಬೂಜ ಬೆಲ್ಲದ) ಮಜ್ಜಿಗೆ, ಹೆಸರುಬೇಳೆ |
| ವರ ಮಹಾಲಕ್ಷ್ಮೀ ವ್ರತ | – | ಬೇಳೆ ಹೋಳಿಗೆ |
| ಸ್ವರ್ಣಗೌರಿಗೆ | – | ಬೇಳೆ ಹೋಳಿಗೆ |
| ಗಣೇಶ ಹಬ್ಬಕ್ಕೆ | – | ಕಡುಬು, ಶ್ಯಾವಿಗೆ ಅನಂತ ಚತುರ್ಥಿಗೆ ಶ್ಯಾವಿಗೆ, ಕಡುಬು ಹೋಳಿಗೆ |
| ದಸರಾ | – | ಹೋಳಿಗೆ |
| ಭೀಮನ ಅಮಾವಾಸ್ಯೆಗೆ | – | ಕಡುಬು |
| ದೀಪಾವಳಿಗೆ | – | ಪಾಯಸ, ಹೋಳಿಗೆ, ಕಜ್ಜಾಯ |

## ದೇವರ ಪೂಜೆಯ ಹಿನ್ನೆಲೆ ಮತ್ತು ವಿಧಾನ

**ಹಿನ್ನೆಲೆ :**

ದೇವರ ಪೂಜೆಯು ಮಾನವನ ಪುರುಷಾರ್ಥ ಸಾಧನೆಗೆಂದು ಶಾಸ್ತ್ರಗಳು ವಿಧಿಸಿರುವ ಅಸಾಧಾರಣವಾದ ಮತ್ತು ಅತ್ಯಮೂಲ್ಯವಾದ ಮಾರ್ಗ. ಭಗವಂತನ ಅತ್ಯರ್ಥ ಪ್ರಸಾದದಿಂದಲೇ ಮೋಕ್ಷ. ಪರಮ ಭಕ್ತಿಯು ಅತ್ಯರ್ಥ ಪ್ರಸಾದಕ್ಕೆ ಸಾಧನ. ಅಪರೋಕ್ಷ ಜ್ಞಾನದಿಂದಲೇ ಪರಮ ಭಕ್ತಿ. ಅಂತಹ ಅಪರೋಕ್ಷ ಜ್ಞಾನಕ್ಕೆ ವಿಹಿತವಾದ ಸಾಧನವೇ ಕರ್ಮಯೋಗ. ಸ್ವವಿಹಿತ

ಕರ್ಮಗಳನ್ನು ಭಗವಂತನ ಆರಾಧನೆಗೆ ನಿಷ್ಕಾಮನೆಯಿಂದ ಆಚರಿಸುವುದೇ ಕರ್ಮಯೋಗದ ತಿರುಳು. ಅಂದಮೇಲೆ, ದೇವಪೂಜೆಯನ್ನು ಹೊರತು ಪಡಿಸಿದ ಎಂತಹ ಸಾಧನೆಯು ವ್ಯರ್ಥವೇ ಸರಿ. ಉಪನೀತ ವಿಪ್ರರಿಗೆ ಸಂಧ್ಯಾವಂದನೆಯು ಎಷ್ಟು ಕಡ್ಡಾಯವಾಗಿದೆಯೋ ಹಾಗೆಯೇ ಮಾನವರ ನಿತ್ಯಕರ್ಮಗಳಲ್ಲಿ ದೇವರ ಪೂಜೆಗೆ ಅಗ್ರಸ್ಥಾನ.

**ವಿಧಾನ:**

**ಜಾಗೃತಿ ಮತ್ತು ಪ್ರಾತಃವಿಧಿ :** ಬೆಳಕು ಹರಿಯುವ ಮುನ್ನ ಹರಿನಾಮವನ್ನೋ ಇಲ್ಲ ಇಷ್ಟದೇವರನ್ನೋ ನೆನಪಿಸಿಕೊಳ್ಳುತ್ತಾ ಮಲಗಿದ್ದಲಿಂದ ಎದ್ದು, ನಿತ್ಯಕರ್ಮಗಳನ್ನು ಪೂರೈಸಿ, ಏಳು ಪವಿತ್ರ ಮಹಾನದಿಗಳಾದ "ಗಂಗೇಚ ಯಮುನೇಚೈವ ಗೋದಾವರೀ ಸರಸ್ವತಿ ನರ್ಮದಾ ಸಿಂಧು ಕಾವೇರಿ"ಯರನ್ನು ನೆನೆದು ಆ ಪಾಪನಾಶಿನಿ ಜಲದಲ್ಲಿ ಮೀಯುತ್ತಿರುವೆವು ಎಂದು ಭಾವಿಸಿಕೊಂಡು ಈ ದೇಹವೇ ದೇಗುಲವೆಂದುಕೊಂಡು ಸ್ನಾನ ಮಾಡಬೇಕು. ನಂತರ ಮಡಿಯುಟ್ಟು ಕುಂಕುಮ ಮತ್ತು ಗಂಧವನ್ನು ಹಣೆಯಲ್ಲಿ ಧರಿಸಬೇಕು.

**ಪೂಜಾಸಾಧನಗಳನ್ನು ಅಣಿಗೊಳಿಸುವಿಕೆ :** ಯಥಾಶಕ್ತಿ ಹೂವು ಮತ್ತು ಗರಿಕೆಯನ್ನು ಸಂಗ್ರಹಿಸಿಕೊಳ್ಳಬೇಕೇ ಹೊರತು ಕದ್ದ, ಪರರ ಧನದಲ್ಲಿ ಕೊಂಡು ತಂದದ್ದಾಗಿರಬಾರದು. ಕಳಸಕ್ಕೆ ಶುದ್ಧವಾದ ನೀರನ್ನು ಅಣಿಮಾಡಿಕೊಳ್ಳಬೇಕು.

**ದೇವರ ಕೋಣೆಗೆ ಪ್ರವೇಶ :** ಪ್ರಸನ್ನವಾದ ಮನಸ್ಸಿನಿಂದ ದೇವರ ಮನೆಯ ಬಾಗಿಲನ್ನು ದಾಟುವಾಗ ದ್ವಾರಪಾಲಕರಾದ ಜಯ-ವಿಜಯ, ನಂದ-ಸುನಂದ ಮತ್ತು ಕುಮುದ-ಕುಮುದಾಕ್ಷರನ್ನು ನೆನೆಯುತ್ತಾ ಅವರ ಅಪ್ಪಣೆಯನ್ನು ಬೇಡುತ್ತಾ ಹೊಸ್ತಿಲನ್ನು ತುಳಿಯದೇ ಬಲಗಾಲನ್ನು ಮುಂದಿಟ್ಟುಕೊಂಡು ಪ್ರವೇಶಿಸಬೇಕು.

**ವಿಘ್ನೋಚ್ಚಾಟನೆ :** ದೇವರ ಕೋಣೆಗೆ ಪ್ರವೇಶಿಸಿದ ಮೇಲೆ ಎರಡೂ ಕಾಲ್ಗಳ ಮಂಡಿಯ ಸ್ಥಳದಲ್ಲಿ ಎರಡು ಹಸ್ತಗಳನ್ನು ಉಪಯೋಗಿಸಿ ಮೂರು ಬಾರಿ ಕರತಾಡನ ಮಾಡಿ ದ್ಯುಲೋಕ, ಭೂಮಿ ಮತ್ತು ಅಂತರಿಕ್ಷದ ವಿಘ್ನಗಳೇನಾದರು ಇದ್ದರೆ ಅವುಗಳ ಉಚ್ಚಾಟನೆಯಾಗಲೆಂದು ಬೇಡಿಕೊಳ್ಳಬೇಕು.



**ದಿಗ್ಬಂಧನ ಮತ್ತು ಕ್ಷಮಾಯಾಚನೆ :** ಪೂಜೆಗೆ ವಿಘ್ನಗಳನ್ನು ಒಡ್ಡುವ ಭೂತಪ್ರೇತಗಳನ್ನು ಓಡಿಸಲು ತಕ್ಕುದಾದ ಮಂತ್ರವನ್ನು ಉಚ್ಚರಿಸುತ್ತಾ ಬಾಣದ ಮುದ್ರೆಯಿಂದ ಅಷ್ಟದಿಕ್ಕುಗಳನ್ನು ಮಾನಸಿಕವಾಗಿ ಬಂಧಿಸಲು ಮತ್ತು ತಮ್ಮ ಸಾಸಿರದ ಅಪರಾಧಗಳನ್ನು ಕ್ಷಮಿಸಿ ಕರುಣೆಯನ್ನು ತೋರಿ ಮುಂದೆ ಮಾಡಲಿರುವ ಪೂಜೆಗೆ ತಕ್ಕ ಶಕ್ತಿಯನ್ನು ದಯಪಾಲಿಸಿ ಪೂಜೆಯನ್ನು ಸ್ವೀಕರಿಸು ಎಂದು ಬೇಡಿಕೊಳ್ಳಬೇಕು.

**ಮನುಷ್ಯಗಂಧ ನಿವಾರಣೆ :** ದೇವರ ಕೋಣೆಯಲ್ಲಿ ಮನುಷ್ಯರ ಪ್ರವೇಶದಿಂದಾಗಿ ಮಾನುಷದೇಹದ ಗಂಧವು ಅಲ್ಲಿ ಬೆರೆತು ಮಲೀನವಾಗದೆ ಇರಲು ತಕ್ಷಣ ಮಾನುಷಗಂಧವು ಬಲು ವೇಗವಾಗಿ ಬಹುದೂರ ಹೋಗಲಿ ಎಂದು ಬೇಡಿಕೊಳ್ಳಬೇಕು.

**ದೇವರೆದುರು ಪರದೆ :** ದೇವರ ಮುಂದೆ ಒಂದು ಮಾನಸಿಕ ಪರದೆಯನ್ನು ಕಲ್ಪಿಸಿಕೊಂಡು ಪರದೆಯ ಈಚೆ ಬದಿಯಲ್ಲಿ ಪೂಜೆಗೆ ಕುಳಿತುಕೊಳ್ಳುವೆವೆಂದು ಭಾವಿಸಬೇಕು.

**ಬ್ರಹ್ಮಪಾರ ಸ್ತೋತ್ರ :** ಸಂಸಾರ ಸಾಗರವನ್ನು ದಾಟಲು ಸಹಾಯ ಮಾಡುವ ಬ್ರಹ್ಮಪಾರ ಸ್ತೋತ್ರವನ್ನು ಹೇಳುತ್ತ ಜಗದ ಉದಯ ಮತ್ತು ನಾಶಕ್ಕೆ ಕಾರಣಕರ್ತೃವಾದ ವಿಷ್ಣುವನ್ನು ನೆನೆಯುತ್ತಾ ತಮ್ಮ ದೇಹಾದಿ, ನಾಶಾದಿ ಮತ್ತು ದೋಷಾದಿ ಸಂಬಂಧ ಇರಬಹುದಾದ ಸಕಲ ಕಲ್ಮಶವನ್ನು ನೀಗು ಎಂದು ಬೇಡಿಕೊಳ್ಳಬೇಕು.

**ಘಂಟಾನಾದ :** ಜರುಗುವ ಪೂಜೆಗೆ ಮೊದಲು ಸುರರೆಲ್ಲಾ ಬರಲಿ ಅಸುರರೆಲ್ಲಾ ಓಡಲಿ ಎನ್ನುವ ಉದ್ದೇಶವನ್ನಿಟ್ಟುಕೊಂಡು ಗಂಟೆಯನ್ನು ಬಾರಿಸಬೇಕು.

**ಅಂತರ್ಪಟ ವಿಭಜನೆ, ಕಲಿ ಉಚ್ಚಾಟನೆ ಮತ್ತು ನಿರ್ಮಾಲ್ಯ ವಿಸರ್ಜನೆ** : ನಂತರ, ಮಾನಸಿಕ ಪರದೆಯನ್ನು ಸರಿಸಿ ನಿರ್ಮಾಲ್ಯ ಕಳೆಯಲು ಅಂಗುಷ್ಟ ಮತ್ತು ತರ್ಜನಿ ಬೆರಳುಗಳಿಂದ ಹಿಂದಿನ ದಿನ ಅರ್ಪಿಸಿದ್ದ ಹೂವು, ತುಲಸೀ ಮತ್ತು ದರ್ಭೆಯನ್ನು ತೆಗೆಯಲು ಅನುವಾಗಬೇಕು. ಆಮೇಲೆ ದೇವರ ಕೋಣೆಯಲ್ಲಿರುವ ಎಲ್ಲಾ ಪೂಜಾ ಉಪಕರಣಗಳನ್ನು ಶುಚಿಮಾಡಬೇಕು.

**ಮಂಟಪ ಧ್ಯಾನ :** ಮಂಟಪ ಧ್ಯಾನ ಮಾಡಲು ಶ್ರೇಷ್ಠವಾದ ಚಿನ್ನದ ಮಂದಿರ, ಸ್ಪಟಿಕದ ಗೋಡೆಗಳು, ಚಿನ್ನದ ಕಂಬಗಳು, ರತ್ನದ ಬಾಗಿಲು,

ಶಂಖ, ಪದ್ಮ, ಸ್ವಸ್ತಿ ಚಿಹ್ನೆ, ಮುತ್ತಿನ ಕುಚ್ಚಿನಿಂದಾವೃತ್ತವಾದ ಮಂಟಪ, ನವರತ್ನದ ಸೋಪಾನ, ವಜ್ರಖಚಿತ ಕಳಸ, ರತ್ನ ಮತ್ತು ಮಾಣಿಕ್ಯದ ದೀಪಗಳು, ಶುಚಿಯಾದ ನೆಲದಲ್ಲಿ ಮುತ್ತಿನ ರಂಗೋಲೆ, ಧ್ವಜಪತಾಕೆ, ಮೇಲ್ತೋರಣ, ಬಾಳೆಯ ಮತ್ತು ಕಬ್ಬಿನ ಸಾಲುಗಳು ಮಾವಿನ ಚಿಗುರುಗಳನ್ನಿಟ್ಟ ಪೂರ್ಣಕುಂಭ ಇರುವಂತೆ ನೆನೆಯಬೇಕು. ವಾಸ್ತವವಾಗಿ ಇವುಗಳಿಲ್ಲದಿದ್ದರೇನು? ಮಾನಸಿಕವಾಗಿ ಸಿರಿವಂತಿಕೆಯನ್ನು ಕಲ್ಪಿಸಿಕೊಳ್ಳಲು ಯಾವುದೇ ಅಡ್ಡಿಯಿಲ್ಲವಷ್ಟೇ.

**ಶ್ರೀಸೂಕ್ತ :** ಶ್ರೀಮನ್ನಾರಾಯಣನ ಜೊತೆಗಿರುವ ಆನಂದಸ್ವರೂಪಳು, ಕರುಣಾರಸಮಯಿಯೂ, ಧರ್ಮದಂಡಧಾರಿ ಮತ್ತು ಐಶ್ವರ್ಯರೂಪಿಣಿಯಾದ ಶ್ರೀಲಕ್ಷ್ಮಿಯನ್ನು ಈ ಪೂಜಾಸಮಯದಲ್ಲಿ ಪಾಲ್ಗೊಳ್ಳುವಂತೆ ಕರೆದು ತಾ ಎಂದು ಶ್ರೀಮನ್ನಾರಾಯಣನನ್ನು ಬೇಡಿಕೊಳ್ಳಬೇಕು.

**ಅಂಭ್ರಣೀಸೂಕ್ತ :** ಹನ್ನೊಂದು ರುದ್ರರು, ಎಂಟು ವಸುಗಳು, ವರುಣ, ಅಗ್ನಿ ಮತ್ತು ಅಶ್ವಿನಿದೇವತೆಗಳನ್ನು ನೆನೆಯುವ ಅಂಭ್ರಣೀಸೂಕ್ತವನ್ನು ಮನನ ಮಾಡಿಕೊಳ್ಳಬೇಕು.

**ಆಸನ ಮತ್ತು ಭೂತೋಚ್ಚಾಟನೆ :** ಕುಳಿತುಕೊಳ್ಳಲು ಅನುವಾಗುವಂತೆ ಕರುಣೆ ತೋರಿದ ಪೃಥ್ವಿಗೆ ಮತ್ತು ಆ ಪೃಥ್ವಿಯನ್ನು ಹೊತ್ತಿರುವ ಕೂರ್ಮಾವತಾರಿಗೆ ನಮಿಸಿ ಭೂತೋಚ್ಚಾಟನೆಗೆ ಬಾಣದ ಮತ್ತು ಸುದರ್ಶನ ಚಕ್ರದ ಮುದ್ರೆಯನ್ನು ತೋರುತ್ತಾ ಆಸನಾದೇವತೆಗೆ ನಮಸ್ಕರಿಸುತ್ತಾ ಸಂಪೂರ್ಣವಾಗಿ ಮಣೆಯ ಮೇಲೆ ಆಸೀನರಾಗಬೇಕು.

**ದೇಶ, ಕಾಲ ಸಂಸ್ಮರಣೆ :** ಶುಭೇಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ಮೇರೋರ್ದಕ್ಷಿಣೇಪಾರ್ಶ್ವೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇಕೂಲೇ ಶಾಲಿವಾಹನಶಕೇ ಬುದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ..... ಸಂವತ್ಸರೇ...... ಆಯನೇ.... ಋತೌ...... ಮಾಸೇ.... ಪಕ್ಷೇ....... ತಿಥೌ..... ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ



ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಕರೋಮಿ ಪೂಜಾವಿಧಿಮ್ ಎಂದು ಹೇಳಬೇಕು.

**ದೇವರಿತ್ತ ಭಕ್ತಿ, ಶಕ್ತಿ ಸಂಪತ್ತುಗಳಿಂದಲೇ ಪೂಜೆ :** ಭಗವಂತನೇ ನೀನು ನಮಗಿತ್ತ ಬಲ, ವೀರ್ಯ, ತೇಜ ಮತ್ತು ಕ್ರಿಯಾಶಕ್ತಿಯೊಡನೆ ಇಂದಿನ ಪೂಜೆಯನ್ನು ಮಾಡುವೆವು ಎಂದು ಸಂಕಲ್ಪಿಸಿಕೊಂಡು ಪೂಜಿಸಲು ಅಣಿಯಾಗಬೇಕು.

**ಕರಶುದ್ಧಿ –** ವಾಯು, ಅಗ್ನಿ ಮತ್ತು ವರುಣರ ನೆನೆಯುತ್ತಾ ಕೈಸಂಧಿ ದೋಷವ ನೀಗಿಸು ಎಂದು ಬೇಡಿಕೊಳ್ಳುತ್ತಾ ಕರಗಳನ್ನು ತೊಳೆದುಕೊಳ್ಳಬೇಕು.

**ದ್ವಾದಶಗುರು ನಮಸ್ಕಾರ :** ದ್ವಾದಶ ಗುರುಗಳನ್ನು ನೆನೆಯುತ್ತಾ ಅವರಿಗೆಲ್ಲಾ ವಂದನೆಯನ್ನು ಸಲ್ಲಿಸಬೇಕು.

**ಪಾಪಪುರುಷ ವಿಸರ್ಜನೆ :** ನಮ್ಮಯ ಶರೀರದಲ್ಲಿ ಹುದುಗಿರುವ ಪಾಪಪುರುಷನನ್ನು ನಾಶಮಾಡಿ ದೇಹದಿಂದ ಹೊರಕ್ಕೆ ಉಚ್ಚಾಟಿಸುವಂತೆ ಮನವಿ ಮಾಡಿಕೊಳ್ಳಬೇಕು.

**ಪ್ರಾಣಾಯಾಮ, ತತ್ವನ್ಯಾಸ ಮತ್ತು ಮಾತೃಕಾನ್ಯಾಸ –** ಮೈಸಂಧಿ, ಕೋಶಗಳನ್ನು ಕಾಡುವ ದೋಷವಿಶೇಷಗಳನ್ನು ದೂರಮಾಡಲು ಪ್ರಾಣವಾಯುವಿನ ರೇಚಕ ಪೂರಕ ಕುಂಭಕದಿ ಘಟ್ಟಿಯಾಗಿ ನಿಲ್ಲಿಸಿ ಶ್ವಾಸನಿರೋಧವ ಸಾಧಿಸಿ ಪ್ರಾಣಾಯಾಮವನ್ನು ಮಾಡಿ ಇಪ್ಪತ್ತನಾಲ್ಕು ತತ್ವಾಭಿಮಾನಿಗಳು, ತತ್ವನ್ಯಾಸ ಮತ್ತು ಮಾತೃಕಾನ್ಯಾಸಾದಿಗಳಿಗೆ ವಂದಿಸಬೇಕು.

**ನೂರೆಂಟು ಬಾರಿ ಮೂಲಮಂತ್ರ ಜಪ :** ಅಷ್ಟಾಕ್ಷರದ ಮೂಲಮಂತ್ರವನ್ನು ನೂರೆಂಟು ಬಾರಿ ಹೇಳುತ್ತಾ ಶ್ರೀಹರಿಧ್ಯಾನವನ್ನು ಮಾಡಬೇಕು.

**ನಿಷೂಸೀದ ಮಂತ್ರ :** ಪೂಜಾಕಾರ್ಯದಲ್ಲಿ ಯಾವುದೇ ತೊಡಕಿಲ್ಲದಂತೆ ಎಲ್ಲಾ ವಿಘ್ನಗಳನ್ನು ನಿವಾರಿಸಲೆಂದು, ನಮ್ಮೆಲ್ಲಾ ಇಂದ್ರಿಯಗಳಲ್ಲಿ ಸರ್ವಜ್ಞರೊಡೆಯನು ಆದ ಗಣಗಳ ಅಧಿಪತಿಯನ್ನು ನೆನೆದು ಆತನ ಪ್ರೇರಣೆಯಿಂದ ಜರುಗುತ್ತಿರುವ ಈ ಪೂಜಾವಿಧಿಗಳನ್ನು ನಮ್ಮ ಕೈಗಳಿಂದ ಮಾಡಿಸಲು ನನ್ನೊಳಗೆ ಇದ್ದು ಆ ಪೂಜೆಯನ್ನು ನೀನೇ ಮಾಡಿಸಿಕೊ ಎಂದು ಬೇಡಿಕೊಳ್ಳಬೇಕು.

**ಹರಿ ಪ್ರಸನ್ನತೆಗಾಗಿ ಪ್ರಾರ್ಥನೆ :** ನಂತರ, ಸಕಲ ಜೀವಜಾತುಗಳ ತ್ರಾಣಕ್ಕೆ ಕಾರಣನಾದ ವಾಯುದೇವನಿಂದ ಆರಾಧಿಸಲ್ಪಡುವ ಜ್ಞಾನಸುಖಪೂರ್ಣನಾದ ಶ್ರೀಲಕ್ಷ್ಮೀನಾರಾಯಣನನ್ನು ಉದ್ದೇಶಿಸಿ ಪ್ರಸನ್ನತೆಯನ್ನು ನಮ್ಮತ್ತ ತೋರು ಎಂದು ಬೇಡಿಕೊಳ್ಳಬೇಕು.

**ಬಿಂಬ ಚಿಂತನೆ :** ಬಿಂಬರೂಪಿಯಾದ ಶ್ರೀಹರಿಯ ಪ್ರತಿಬಿಂಬವಾಗಿರುವ ನಾವು ಬೇಡುವುದೆಂದರೆ, ನಮ್ಮೆಲ್ಲಾ ದೋಷಗಳನ್ನು ಕಳೆದು, ನಿನ್ನ ಪ್ರಸಾದವಾದ ನಮ್ಮೆಲ್ಲಾ ಶುಭಕ್ರಿಯೆಗಳನ್ನು ಹರಿಪೂಜೆಯನ್ನಾಗಿಸು ಎಂದು ಪ್ರಾರ್ಥನಾ ಮುದ್ರೆಯೊಡನೆ ಮನವಿ ಮಾಡಬೇಕು.

**ತುಲಸೀ ಪ್ರಾರ್ಥನೆ :** ಶರಧಿಯ ಮಂಥನದಲ್ಲಿ ಧನ್ವಂತ್ರಿಯ ಅಮೃತದ ಕಳಸದಿಂದ ಉದಿಸಿದ ಹರಿವಲ್ಲಭೆ ಬರತುಲಸೀ ದೇವಿಯೆ ಪ್ರಸನ್ನಳಾಗು ಎಂದು ಬೇಡಿಕೊಳ್ಳಬೇಕು.

**ಕಳಸ ಮತ್ತು ಕಳಸದೇವತೆಗಳ ಪೂಜೆ :** ನೈವೇದ್ಯ ಪ್ರೋಕ್ಷಣೆಗೊಂದು, ಪಂಚೋಪಚಾರಕ್ಕೊಂದು, ಭಾವಕ್ಕೊಂದು, ಕೈತೊಳೆವ ನೀರಿಗೊಂದು, ಗಂಧದ ಉದಕಕ್ಕೊಂದು ಹೀಗೆ ಐದು ಕಳಸಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಶಕ್ತಿ ಇದ್ದರೆ ಏಳು ಇಲ್ಲಾ ಐದು, ಅಥವಾ ಮೂರು ಇಲ್ಲದಿದ್ದರೆ ಒಂದೇ ಕಳಸ ಸಾಕು! ಆ ಒಂದೇ ಕಳಸವನ್ನು ಸಕಲ ಪೂಜಾಕಾರ್ಯಗಳಿಗೆ ಬಳಸುವೆವೆಂದು ಸಂಕಲ್ಪಿಸಬೇಕು. 'ಅ'ಕಾರದಿಂದ 'ಕ್ಷ"ಕಾರದವರೆಗಿನ ಐವತ್ತೊಂದು ಅಕ್ಷರಗಳ ದೇವರ್ಕಳ ಕೇಶವ ಮತ್ತು ಇಪ್ಪತ್ನಾಲ್ಕು ಮೂರ್ತಿಗಳನ್ನು ನೆನೆಯುತ್ತಾ ಅವರನ್ನೆಲ್ಲಾ ಕಳಸಗಳಲ್ಲಿ ನೆಲೆಸುವಂತೆ ಧ್ಯಾನಿಸಬೇಕು. ಕಳಸದ ಮುಖದಲ್ಲಿ ವಿಷ್ಣು, ಕಂಠದಲ್ಲಿ ರುದ್ರ ಮತ್ತು ಬುಡದಲ್ಲಿ ಬ್ರಹ್ಮ ಮತ್ತು ಇವರೊಡನೆ ಮಧ್ಯದಲ್ಲಿ ಮಾತೃಗಣಗಳು ಇರುವರು ಎಂದೂ ಕಳಸದಲ್ಲಿ ಇರುವ ನೀರಿನಲ್ಲಿ ಅನಂತ ಸಾಗರವೇ ಅಡಗಿ ಎಲ್ಲಾ ನದಿಗಳನ್ನು ಹೊಂದಿವೆ ಎಂಬ ಭಾವದಲ್ಲಿ ಸ್ಮೃತಿಸಿ ನಾಲ್ಕು ವೇದಗಳು ಆ ಕಳಸವನ್ನು ಆಶ್ರಯಿಸಿವೆ ಎಂಬ ಸತ್ಯವನ್ನು ನೆನೆಯಬೇಕು. ನಂತರ ಶಂಖ, ಚಕ್ರ, ಗಧಾ ಮತ್ತು ಪದ್ಮ ಧೇನುವು ತಾರ್ಕ್ಯವು ಮುದ್ರೆಯನ್ನು ಚಿಂತಿಸುತ್ತಾ ತೋರಿಸಿ ಹನ್ನೆರಡು ಬಾರಿ ಮೂಲ ಮಂತ್ರವನ್ನು ಜಪಿಸಬೇಕು.

**ಶಂಖ ಪೂಜೆ :** ಸಾಗರೋದ್ಭವ, ಶ್ರೀವಿಷ್ಣುಕರವಾಸ, ಬಲು ಪೂಜಿತ ಪಾಂಚಜನ್ಯವಾದ ನಿನ್ನಲ್ಲಿ ನೀರನ್ನು ತುಂಬುತ್ತಾ ಅಭಿಷೇಕ ಮಾಡಲು ಗಾಯತ್ರಿ



ಮಂತ್ರವನ್ನು ಪಠಿಸುತ್ತಾ ಕಳಸದ ನೀರನ್ನು ಶಂಖದಲಿ ತುಂಬಿಸಿ ಶಂಖಾದಿ ಮುದ್ರೆಗಳನ್ನು ತೋರುತ್ತಾ ಮೂಲಮಂತ್ರವನ್ನು ಎಂಟು ಬಾರಿ ಜಪಿಸಿ ಆ ಶಂಖವನ್ನು ಸ್ತುತಿಸಿ ಪೂಜೆಗೆ ಅನುವು ಮಾಡಿಕೊಡಲು ಬೇಡಿಕೊಳ್ಳಬೇಕು.

**ಶುಚಿ ಸಾಧನೆ :** ಅಪವಿತ್ರವೋ, ಸುಪವಿತ್ರವೋ ಅಥವಾ ಎಂತಹ ಅವಸ್ಥೆಯೇ ನಮ್ಮದಾಗಿದ್ದರೂ ಶ್ರೀಪುಂಡರೀಕಾಕ್ಷ ಪರಮಾತ್ಮ ಎನ್ನುತ್ತಾ ಒಳಹೊರ ಶುಚಿಯನ್ನು ಸಾಧಿಸಲು ತುಲಸೀ ಸಮೇತ ನೀರು ತುಂಬಿದ ಶಂಖದ ನೀರನ್ನು ಎಲ್ಲೆಡೆ ಪ್ರೋಕ್ಷಿಸಿ ಶುಚಿಯನ್ನು ದಯಪಾಲಿಸು ಎಂದು ಬೇಡಿಕೊಳ್ಳಬೇಕು.

**ಪಂಚಾಮೃತ ದ್ರವ್ಯ ಪೂಜೆ :** ಪೂರ್ವಕ್ಕೆ ಮೊಸರನ್ನು, ಪಶ್ಚಿಮಕ್ಕೆ ಜೇನುತುಪ್ಪವನ್ನು, ಉತ್ತರಕ್ಕೆ ಸಕ್ಕರೆಯನ್ನು ಮತ್ತು ದಕ್ಷಿಣಕ್ಕೆ ತುಪ್ಪವನ್ನಿಟ್ಟು ಮಧ್ಯದಲ್ಲಿ ಹಾಲನ್ನಿರಿಸಿ ಪಂಚಾಮೃತದ್ರವ್ಯ ಪೂಜೆಯನ್ನು ಆರಂಭಿಸಬೇಕು.

**ಅರ್ಘ್ಯಾದಿ ಕಳಸ ಸ್ಥಾಪನೆ :** ಐದು ನೀರಿನ ಕಳಸಗಳನ್ನು, ಅರ್ಘ್ಯಕ್ಕೆ ವಾಯುವ್ಯದಲ್ಲೊಂದು, ಪಾದ್ಯಕ್ಕೆ ನೈರುತ್ಯದಲ್ಲೊಂದು, ಆಚಮನಕ್ಕೆ ಈಶಾನ್ಯದಲ್ಲೊಂದು, ಸ್ನಾನಕ್ಕೆ ಆಗ್ನೇಯದಲ್ಲೊಂದು ಮತ್ತು ಮರು ಆಚಮನಕ್ಕೆಂದು ಮಧ್ಯದಲ್ಲೊಂದು ಕಳಸವನ್ನಿಡಬೇಕು. ಮಧುಪರ್ಕಕ್ಕೆಂದು ಆರನೇಯ ಕಳಸದಲ್ಲಿ ಮಧು, ಗಂಧ, ಪುಷ್ಪ, ತುಲಸೀದಳಗಳೊಂದಿಗೆ ದರ್ಭೆಯನ್ನಿಡಬೇಕು.

**ಮುದ್ರಾ ಪ್ರದರ್ಶನ :** ಅರ್ಘ್ಯದ ಕಳಸಕ್ಕೆ ಧ್ಯಾನದ ಮುದ್ರೆ, ಪಾದ್ಯದ ಕಳಸಕ್ಕೆ ಅಂಜಲೀ ಮುದ್ರೆ, ಆಚಮನದ ಕಳಸಕ್ಕೆ ಗೋಕರ್ಣದ ಮುದ್ರೆ, ಮಧುಪರ್ಕ ಕಳಸಕ್ಕೆ ವರಾಹ ಮುದ್ರೆಯನ್ನು ತೋರಿಸಿ ತುಲಸೀಸಮೇತವಾದ ನೀರನ್ನು ಸಕಲಪೂಜಾ ಸಲಕರಣೆಗಳ ಮೇಲೆ ಪ್ರೋಕ್ಷಿಸಬೇಕು.

**ಪೀಠ ಪೂಜೆ :** ಮಾನಸಿಕವಾಗಿ, ಚಕ್ರಾಬ್ಜಮಂಡಲದ ಮೇಲೆ ಪೀಠವನ್ನು ಸ್ಥಾಪಿಸಿ ಗುರುಗಳನ್ನು ಧ್ಯಾನಿಸಿ ಅವರ ಅನುಜ್ಞೆಯನ್ನು ಬೇಡಿ ಪೀಠದ ಮಧ್ಯದಲ್ಲಿರುವ ಶ್ರೀಲಕ್ಷ್ಮೀನಾರಾಯಣನನ್ನು ನಮಿಸಿ, ಪೀಠದ ಎಡಭಾಗದಲ್ಲಿರುವ ವಾಯುದೇವನನ್ನು, ದಕ್ಷಿಣಭಾಗದಲ್ಲಿರುವ ಸುರರನ್ನು, ಬ್ರಹ್ಮರುದ್ರಾದ್ಯರನ್ನು ಮತ್ತು ಪೀಠದ ಎಡಭಾಗದಲ್ಲಿರುವ ಸನಕ ಸನಂದನರನ್ನು ಚಿಂತಿಸಿ ನಮಿಸಿ ಪೀಠದ ಕೆಳಗೆ ಆಗ್ನೇಯದಲ್ಲಿರುವ ಗರುಡನನ್ನು, ನೈರುತ್ಯದಲ್ಲಿರುವ ಶ್ರೀವೇದವ್ಯಾಸರನ್ನು ನೆನಪಿಸಿಕೊಂಡು ವಾಯುವ್ಯದಲ್ಲಿರುವ ದುರ್ಗೆ, ಈಶಾನ್ಯದಲ್ಲಿರುವ ಸರಸ್ವತಿದೇವಿಯನ್ನು ನಮಿಸಿ ಪೀಠದ ಮೇಲಿನ

ಕೋಣಗಳಲ್ಲಿರುವ ಧರ್ಮಾಧಿಪತಿಯಾದ ಯಮನನ್ನು, ಅಲ್ಲಿಯೇ ಇರುವ ಜ್ಞಾನದ ಅಧಿಪತಿಯಾದ ಶ್ರೀವಾಯುವನ್ನು, ವೈರಾಗ್ಯದಧಿಪತಿಯಾದ ಶಿವನನ್ನು, ಐಶ್ವರ್ಯಾಧಿಪತಿಯಾದ ಇಂದ್ರನನ್ನು, ಮತ್ತು ಪೀಠದ ಪೂರ್ವಕ್ಕಿರುವ ಅಧರ್ಮದಧಿಪತಿಯಾದ ನಿರಋತಿಯನ್ನು ಚಿಂತಿಸಿ, ದಕ್ಷಿಣ ಭಾಗದಲ್ಲಿರುವ ಅಜ್ಞಾನದಧಿಪತಿ ದುರ್ಗೆಯನ್ನು, ಪಶ್ಚಿಮಭಾಗದಲ್ಲಿರುವ ವೈರಾಗ್ಯದಧಿಪತಿ ಕಾಮನನ್ನು, ಉತ್ತರದಲ್ಲಿರುವ ಅನ್ಶೈಶ್ವರ್ಯದ ಅಧಿಪತಿಯಾದ ರುದ್ರನನ್ನು, ಪೀಠದ ಕೆಳಗಿರುವ ಉತ್ತಮ ಪರಮ ಪುರುಷನನ್ನು, ಆಧಾರರೂಪದ ಶಕ್ತಿಗೆ ನಮಿಸಿ, ಶ್ರೀವಿಷ್ಣು ಕೂರ್ಮನ ಮತ್ತು ಆತನ ಪುಚ್ಛದಲ್ಲಿ ಆಶ್ರಿತನಾದ ಶ್ರೀವಾಯುಕೂರ್ಮನನ್ನು, ಆ ವಾಯುಕೂರ್ಮನ ಪುಚ್ಛದಲ್ಲಿ ಆಶ್ರಿತವಾಗಿರುವ ಅನಂತಶೇಷನನ್ನು, ಆ ಶೇಷನ ಹೆಡೆಯಲ್ಲಿ ಆಶ್ರಿತಳಾದ ಪೃಥ್ವ್ಯಾಭಿಮಾನಿ ಭೂಮಿಯನ್ನು ಆಮೇಲೆ ಕ್ಷೀರಸಾಗರದ ಅಭಿಮಾನಿ ದೇವತೆಯಾದ ವರುಣನ ನಮಿಸಿ, ಆ ರಮಾ ರೂಪಕ್ಕೆ, ಶ್ವೇತದ್ವೀಪಕ್ಕೆ, ಸೋಮನಿಗೆ, ಅಗ್ನಿಗೆ, ಸತ್ವಾಭಿಮಾನಿ ಶ್ರೀಗೆ, ರಜೋಭಿಮಾನಿ ಭೂಮಿಗೆ, ತಮೋಭಿಮಾನಿ ದುರ್ಗೆಗೆ, ಪೂರ್ವಕ್ಕೆ ಆತ್ಮನನ್ನು, ದಕ್ಷಿಣಕ್ಕೆ ಅಂತರಾತ್ಮನನ್ನು, ಪಶ್ಚಿಮಕ್ಕೆ ಪರಮಾತ್ಮನನ್ನು, ಉತ್ತರಕ್ಕೆ ಜ್ಞಾನಾತ್ಮನನ್ನು ನಮಿಸಿ ಕಮಲದ ಎಂಟು ದಳಗಳಲ್ಲಿ ನೆಲೆಸಿರುವ ಶಕ್ತಿಯರನ್ನು ನಮಿಸಿ, ಛತ್ರವ ಧರಿಸಿದ ವಿಮಲೆಯನ್ನು, ಚಾಮರವನ್ನು ಹಿಡಿದಿರುವ ಉತ್ಕರ್ಷಿಣಿಯನ್ನು ವ್ಯಜನಧಾರಿಣಿ ಜ್ಞಾನೆಯನ್ನು, ಗಾನವನ್ನು ಮಾಡುವ ಯೋಗಳನ್ನು, ನರ್ತನ ಮಾಡುವ ಪ್ರಹ್ವೆಯನ್ನು ವಾದ್ಯವ ನುಡಿಸುವ ಸತ್ಯಳನ್ನು ಸ್ತೋತ್ರವನ್ನು ಮಾಡುವ ಈಶಾನೆಯನ್ನು ನೆನೆದು ಅವರುಗಳೆಲ್ಲರೂ ಆ ಪರಮಾತ್ಮನ ರೂಪಗಳೆಂದು ಶ್ರೀಶನ ಅರಸಿಯಾದ ಶ್ರೀರಮಾದೇವಿಯ ನಮಿಸುತ್ತಾ ಹೂವುಗಳನ್ನು ಅರ್ಪಿಸಬೇಕು.

**ಆವಾಹನೆ :** ಉದಯಿಸುವ ಸೂರ್ಯನ ಹೊಳಪನ್ನು ಬೀರುವ ಸಚ್ಚಿದಾನಂದಶರೀರ, ಗದೆ, ಶಂಖ, ಚಕ್ರ ಮತ್ತು ಪದ್ಮವನ್ನು ಹಿಡಿದಿರುವವನನ್ನು ಮನದಲ್ಲಿ ಧ್ಯಾನಿಸುತ್ತಾ ಪೀಠದಲ್ಲಿರುವ ಪ್ರತಿಮೆಗೆ ನಿನ್ನ ಆವಾಹನೆಯಾಗಲಿ ಎಂದು ಪ್ರಾರ್ಥಿಸಿ ಆವಾಹನಾದಿ ಮುದ್ರೆಯನ್ನು ತೋರಿ, ಈ ಪೂಜೆಯು ಮುಗಿಯುವ ತನಕ ಪ್ರತಿಮೆಯಲ್ಲಿರು ಜನಾರ್ಧನ ಎಂದು ಬೇಡಬೇಕು. ಅವಗುಂಠನವೆಂಬ ಆರು ಮುದ್ರೆಯನ್ನು ತೋರಿ ಸ್ನಾನಕ್ಕೆ ಏಳೆಂದು ಕೇಳಿಕೊಳ್ಳಬೇಕು.



**ಅರ್ಘ್ಯ, ಪಾದ್ಯ ಇತ್ಯಾದಿ ಉಪಚಾರ :** ಮೂಲಮಂತ್ರವನ್ನು ಜಪಿಸುತ್ತಾ ದೇವರು ಆವಾಹಿತವಾಗಿರುವ ಪ್ರತಿಮೆಯ ಕೈ ಮುಖವನ್ನು ತೊಳೆಯಲು ಅರ್ಘ್ಯ, ಕಾಲ್ಗಳನ್ನು ತೊಳೆಯಲು ಪಾದ್ಯ ಮುಂದೆ ಆಚಮನ ಮತ್ತು ಮಧುಕರ್ಪವನ್ನು ಸಮರ್ಪಿಸಬೇಕು. ನಂತರ ಚಿನ್ನದ ಪೀಠವು ಇದೆಂದು ಭಾವಿಸಿ ಪೂಜೆ ಮಾಡಿಸಿಕೊಳ್ಳಲು ಆಸೀನನಾಗು ದೇವ ಎಂದು ಪ್ರಾರ್ಥಿಸಬೇಕು.

**ಪಂಚಾಮೃತ ಅಭಿಷೇಕ :** ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆಯನ್ನು ಸಲ್ಲಿಸುವ ಮೂಲಕ ಪಂಚಾಮೃತ ಸೂಕ್ತ ಮತ್ತು ಮೂಲಮಂತ್ರವನ್ನು ಪಠಿಸುತ್ತಾ ಪಂಚಾಮೃತ ಅಭಿಷೇಕವನ್ನು ಏಕಾರತಿಯೊಡನೆ ಮಾಡಬೇಕು.

1 ಹಾಲಿನ ಅಭಿಷೇಕವನ್ನು ಮಾಡುತ್ತಾ ನಮ್ಮ ಸಾಮರ್ಥ್ಯವನ್ನು ಹೆಚ್ಚಿಸೆಂದು ಬೇಡಿಕೊಳ್ಳಬೇಕು.

1 ಮೊಸರಿನ ಅಭಿಷೇಕವನ್ನು ಮಾಡುತ್ತಾ ನಮ್ಮ ಆಯಸ್ಸನ್ನು ವೃದ್ಧಿಸು ಎಂದು ಬೇಡಿಕೊಳ್ಳಬೇಕು.

1 ತುಪ್ಪದ ಅಭಿಷೇಕವನ್ನು ಮಾಡುತ್ತಾ ಸತ್ಫಲಗಳನ್ನು ಕರುಣಿಸು ಎಂದು ಬೇಡಿಕೊಳ್ಳಬೇಕು.

1 ಜೇನು ತುಪ್ಪದ ಅಭಿಷೇಕವನ್ನು ಮಾಡುತ್ತಾ ಸುಜ್ಞಾನ ಮತ್ತು ಸತ್ಕರ್ಮಗಳನ್ನು ಮಾಡುವ ಶಕ್ತಿಯನ್ನು ದಯಪಾಲಿಸು ಎಂದು ಬೇಡಿಕೊಳ್ಳಬೇಕು.

1 ಸಕ್ಕರೆಯ ಅಭಿಷೇಕವನ್ನು ಮಾಡುತ್ತಾ ಶಾಂತಿಯೊಡನೆ ಸಂಪತ್ತನ್ನು ಕರುಣಿಸು ಎಂದು ಬೇಡಿಕೊಳ್ಳಬೇಕು. ಎಳನೀರಿನ ಅಭಿಷೇಕವನ್ನು ಮಾಡುತ್ತಾ ಪಾಪಮುಕ್ತರನ್ನಾಗಿಸು ಎಂದು ಬೇಡಿಕೊಳ್ಳಬೇಕು.

**ಶುದ್ಧೋಧಕ ಸ್ನಾನ :** ಘಂಟೆಯ ಸದ್ದಿನೊಡನೆ ಕಳಸದಿಂದ ನೀರನ್ನು ಶಂಖಕ್ಕೆ ಸುರಿದು ಶಂಖದಿಂದ ಪ್ರತಿಮೆಗೆ ನೀರನ್ನು ಎರೆಯಬೇಕು.

**ಪುರುಷಸೂಕ್ತ ಭಾವ, ಇತರ ಸೂಕ್ತ, ವರ್ಗ, ಋಕ್ಕು ಸ್ತೋತ್ರ –** ಅವಕಾಶವಿದ್ದರೆ, ವಿಷ್ಣು–ಘರ್ಮ, ಜಿತಂತೇ ಪುಂಡರೀಕಾಕ್ಷ ಸೂಕ್ತ, ಪವಸ್ವ–ಸೋಮ ಮಂದಯನ್ ಎಂಬ ವರ್ಗ ಮುಂತಾದವುಗಳನ್ನು ಪಠಿಸಬಹುದು.

**ಒರಸುವಿಕೆ :** ಅಭಿಷೇಕವೆಲ್ಲಾ ಮುಗಿದ ಬಳಿಕ ಶುಭ್ರವಾದ ಒಣವಸ್ತ್ರದಿಂದ ಪ್ರತಿಮೆಯನ್ನು ಒರೆಸಬೇಕು.

**ಅಲಂಕಾರ :**

- ವಸ್ತ್ರ ಸಮರ್ಪಣೆ ಮಾಡಲು ಅರಿಶಿನ ಬಣ್ಣದ ವಸ್ತ್ರಗಳೆರಡನ್ನು ಒಪ್ಪಿಸಿ ನಮಗೆ ಜೀವಿಸಲು ಬೇಕಾದಷ್ಟು ಹೊನ್ನನ್ನು ಮಾತ್ರ ದಯಪಾಲಿಸು ಎಂದು ಬೇಡಿಕೊಳ್ಳಬೇಕು.
- ಉಪವೀತ ಸಮರ್ಪಣೆ ಮಾಡುತ್ತಾ ನಮಗೆ ಬಲ, ತೇಜಸ್ಸು ಮತ್ತು ಆಯಸ್ಸನ್ನು ವೃದ್ಧಿಸು ಎಂದು ಬೇಡಿಕೊಳ್ಳಬೇಕು.
- ಆಭರಣಗಳ ಅಲಂಕಾರದ ಸಮರ್ಪಣೆ ಮಾಡುತ್ತಾ ಮೂಲಮಂತ್ರವನ್ನು ಹನ್ನೆರಡು ಸಲ ಜಪಿಸಿ ದೇವರ ಸರ್ವಾಲಂಕಾರವನ್ನು ಗಂಧ, ಹೂವು ಮತ್ತು ತುಲಸೀ ಸಮೇತ ಮಾಡಬೇಕು.
- ಗಂಧ ಸಮರ್ಪಣೆ ಮಾಡುತ್ತಾ ಶ್ರೀಲಕ್ಷ್ಮಿಯನ್ನು ಬರಮಾಡಿಕೊಳ್ಳಬೇಕು.
- ಅಕ್ಷತೆಯ ಸಮರ್ಪಣೆ ಮಾಡುತ್ತಾ ಈ ಭೂಮಿಯು ಸದಾ ಹಸಿರಾಗಿದ್ದು ನೀರು, ದವಸ, ಧಾನ್ಯ, ಹೂವು ಹಣ್ಣುಗಳ ಸಮೃದ್ಧಿಯಾಗಲಿ ಎಂಬ ಭಾವನೆ ಹೊಂದಬೇಕು.
- ಪುಷ್ಪಗಳ ಸಮರ್ಪಣೆ ಮಾಡುತ್ತಾ ಹೂವಿನಂಥಹ ಮೃದು ಹೃದಯವನ್ನು ದಯಪಾಲಿಸಲಿ ಮತ್ತು ಹೂವಿನ ಗಂಧ ಎಲ್ಲೆಲ್ಲೂ ಪಸರಿಸುವಂತೆ ದೇವರ ಕಟಾಕ್ಷವು ಎಲ್ಲೆಲ್ಲೂ ಪಸರಿಸಲೆಂದೂ ಜೊತೆಗೆ ಹೂವಿನಲ್ಲಿ ಮಕರಂದವು ಹೇಗೆ ಹಾಸುಹೊಕ್ಕಾಗಿದೆಯೋ ಹಾಗೆಯೇ ನಮ್ಮನ್ನು ನಿನ್ನಲ್ಲಿ ವಿಲೀನಗೊಳಿಸಿಕೊ ಎಂಬ ಹೆಬ್ಬಯಕೆಯನ್ನು ಇಟ್ಟುಕೊಳ್ಳಬೇಕು.
- ತುಳಸೀ ಪತ್ರವನ್ನು ಮೂಲಮಂತ್ರದೊಡನೆ ಸಮರ್ಪಣೆ ಮಾಡುತ್ತಾ ನಮ್ಮ ಆರೋಗ್ಯ ವೃದ್ಧಿಸಲಿ ಎಂದು ಬೇಡಿಕೊಳ್ಳಬೇಕು.
- ಆಯುಧ ಪೂಜೆಯನ್ನು ಮಾಡುತ್ತಾ ದುಷ್ಟ ಶಿಕ್ಷೆ ಮತ್ತು ಶಿಷ್ಟ ರಕ್ಷಣೆಯಾಗಲಿ ಎಂದು ಪ್ರಾರ್ಥಿಸಬೇಕು.

**ಏಳು ಆವರಣಗಳ ಪೂಜೆ :** ಪೀಠದ ಮಧ್ಯದಲ್ಲಿ ಶ್ರೀಹರಿಯನ್ನು ಚಿಂತಿಸುತ್ತಾ ಆತನ ಸುತ್ತಾ ಮಾನಸಿಕವಾಗಿ ಏಳು ಆವರಣಗಳನ್ನು ಕಲ್ಪಿಸಿಕೊಂಡು ದೇವರ್ಕಳರೆಲ್ಲರನ್ನು ನೆನೆದು ಪೂಜಿಸುವೆವೆಂದು ಭಾವಿಸಿ ಪೂಜೆಯನ್ನು ಮುಂದುವರಿಸಬೇಕು.



- ಮೊದಲನೆಯ ಆವರಣದಲ್ಲಿ ಎಡಕ್ಕೆ ಶ್ರೀಲಕ್ಷ್ಮಿ, ಬಲಕ್ಕೆ ಶ್ರೀಧರೆ, ಪೂರ್ವಕ್ಕೆ ಕೃದ್ಧೋಲ್ಕ, ದಕ್ಷಿಣಕ್ಕೆ ಮಹೋಲ್ಕ, ಪಶ್ಚಿಮಕ್ಕೆ ವೀರೋಲ್ಕ ಉತ್ತರಕ್ಕೆ ಉದ್ಯುಲ್ಕರನ್ನು ಆಗ್ನೇಯ, ನೈರುತ್ಯ, ವಾಯುವ್ಯ ಮತ್ತು ಈಶಾನ್ಯದಲ್ಲಿ ಉಲ್ಕರೂಪನ ಚಿಂತಿಸಿ, ನಮಿಸಿ ಪೂಜಿಸಬೇಕು.
- ಎರಡನೆಯ ಆವರಣದಲ್ಲಿ ಪೂರ್ವಕ್ಕೆ ಶ್ರೀವಾಸುದೇವ, ದಕ್ಷಿಣಕ್ಕೆ ಸಂಕರ್ಷಣದೇವ, ಪಶ್ಚಿಮಕ್ಕೆ ಪ್ರದ್ಯುಮ್ನದೇವ, ಉತ್ತರಕ್ಕೆ ಅನಿರುದ್ಧ, ಆಗ್ನೇಯದಲ್ಲಿ ಮಾಯೆಯನ್ನು, ನೈರುತ್ಯದಲ್ಲಿ ಜಯೆಯನ್ನು, ವಾಯುವ್ಯದಲ್ಲಿ ಕೃತಿಯನ್ನು ಮತ್ತು ಈಶಾನ್ಯದಲ್ಲಿ ಶ್ರೀಶಾಂತಿಯನ್ನು ಸ್ಮರಿಸಿ ಪೂಜಿಸಬೇಕು.
- ಮೂರನೆಯ ಆವರಣದಲ್ಲಿ ಪೂರ್ವಕ್ಕೆ ಕೇಶವನಾರಾಯಣ, ಆಗ್ನೇಯದಲ್ಲಿ ಮಾಧವನ, ದಕ್ಷಿಣಕ್ಕೆ ಶ್ರೀಗೋವಿಂದನ, ನೈರುತ್ಯದಲ್ಲಿ ವಿಷ್ಣುವನ್ನು, ಪಶ್ಚಿಮಕ್ಕೆ ತ್ರಿವಿಕ್ರಮ ವಾಮನನನ್ನು, ವಾಯುವ್ಯದಲ್ಲಿ ಶ್ರೀಧರನನ್ನು, ಉತ್ತರಕ್ಕೆ ಶ್ರೀಪದ್ಮನಾಭನನ್ನು, ಮತ್ತು ಈಶಾನ್ಯದಲ್ಲಿ ದಾಮೋದರನನ್ನು ಸ್ಮರಿಸಿ ಪೂಜಿಸಬೇಕು.
- ನಾಲ್ಕನೆಯ ಆವರಣದಲ್ಲಿ ಪೂರ್ವಕ್ಕೆ ಪ್ರದ್ಯುಮ್ನನನ್ನು, ಆಗ್ನೇಯದಲ್ಲಿ ಪಂಕಜಲೋಚನನ್ನು, ದಕ್ಷಿಣಕ್ಕೆ ಶ್ರೀಅಧೋಕ್ಷಜನನ್ನು, ನೈರುತ್ಯದಲ್ಲಿ ನರಸಿಂಹನನ್ನು, ಪಶ್ಚಿಮಕ್ಕೆ ಅಚ್ಯುತನನ್ನು, ವಾಯುವ್ಯದಲ್ಲಿ ಜನಾರ್ಧನನನ್ನು, ಉತ್ತರಕ್ಕೆ ಉಪೇಂದ್ರನನ್ನು ಮತ್ತು ಈಶಾನ್ಯದಲ್ಲಿ ಕೃಷ್ಣನನ್ನು ಸ್ಮರಿಸಿ ಪೂಜಿಸಬೇಕು.
- ಐದನೆಯ ಆವರಣದಲ್ಲಿ ಪೂರ್ವಕ್ಕೆ ಮತ್ಸ್ಯ, ಕೂರ್ಮ, ಆಗ್ನೇಯಕ್ಕೆ ವರಾಹನನ್ನು, ದಕ್ಷಿಣಕ್ಕೆ ನರಸಿಂಹನನ್ನು, ನೈರುತ್ಯದಲ್ಲಿ ಭಾರ್ಗವನನ್ನು, ಪಶ್ಚಿಮದಲ್ಲಿ ಶ್ರೀರಾಮಕೃಷ್ಣರು, ವಾಯುವ್ಯದಲ್ಲಿ ಬುದ್ಧನನ್ನು, ಉತ್ತರದಲ್ಲಿ ಕಲ್ಕಿಯು ಮತ್ತು ಈಶಾನ್ಯದಲ್ಲಿ ವಿಶ್ವರೂಪನ ನೆನೆದು ಪೂಜಿಸಬೇಕು.
- ಆರನೆಯ ಆವರಣದಲ್ಲಿ ಪೂರ್ವಕ್ಕೆ ಅನಂತನು, ದಕ್ಷಿಣಕ್ಕೆ ಬ್ರಹ್ಮನು, ಪಶ್ಚಿಮಕ್ಕೆ ವಾಯುವು, ಉತ್ತರಕ್ಕೆ ಶರ್ವನು ಮತ್ತು ಮಧ್ಯದಲ್ಲಿ ಆಸೀನನಾಗಿರುವ ದೇವರ ಎದುರಿನಲ್ಲಿ ಗರುಡನಿರುವ ಎಂದು ನೆನೆದು ನಂತರ ಆಗ್ನೇಯಕ್ಕೆ ವಾರುಣಿ, ನೈರುತ್ಯಕ್ಕೆ ಸರಸ್ವತಿ, ವಾಯುವ್ಯಕ್ಕೆ ಭಾರತಿ, ಈಶಾನ್ಯಕ್ಕೆ ಗಿರಿಜೆಯು ಇರುವರೆಂದು ಸ್ಮರಿಸಿ ಪೂಜಿಸಬೇಕು.

1 ಏಳನೆಯ ಆವರಣದ ಪೂರ್ವಕ್ಕೆ ಸುರೇಂದ್ರನನ್ನು, ಆಗ್ನೇಯದಲ್ಲಿ ಶಕ್ತಹಸ್ತನ್ನ, ದಕ್ಷಿಣದಲ್ಲಿ ಶ್ಯಾಮಲಸಹಿತನಾದ ಯಮನನ್ನು, ವಾಯುವ್ಯದಲ್ಲಿ ವರುಣನನ್ನು, ಪೂರ್ವದಲ್ಲಿ ರೋಹಿಣಿಸಹಿತನಾದ ಸೋಮನನ್ನು, ಈಶಾನ್ಯದಲ್ಲಿ ಶ್ರೀಉಮೆಯ ಸಹಿತನಾದ ರುದ್ರನನ್ನು, ಪೀಠದ ಕೆಳಗೆ ನಾಗರಿಗೆ ಅಧಿಪತಿಯಾದ ಅನಂತನನ್ನು, ಪೀಠದ ಮುಂಭಾಗದ ಮೇಲೆ ಬ್ರಹ್ಮನನ್ನು ನಂತರ ಶ್ರೀಲಕ್ಷ್ಮಿರಮಣನ್ನು ನೆನೆದು ಸ್ತುತಿಸಿ ಪೂಜಿಸಬೇಕು.

**ದ್ವಾರಪಾಲಕರ ಪೂಜೆ :** ಸ್ವಾಮಿಯ ಸೇವೆಯನ್ನು ಸದಾ ಆತನ ಸಮೀಪದ ದ್ವಾರದಲ್ಲಿದ್ದು ಮಾಡುತ್ತ ತಮ್ಮ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳುತ್ತಿರುವ ಶ್ರೀ ಜಯ–ವಿಜಯರಂತೆ ನಮ್ಮ ಜನ್ಮವನ್ನೂ ಸಹ ಸಾರ್ಥಕಗೊಳಿಸು ಎಂದು ಬೇಡಿಕೊಳ್ಳುವುದು.

**ಧೂಪ ಸಮರ್ಪಣೆ :** ಸುರಘ್ರಾಣ ಯೋಗ್ಯತೆಯಿರುವ ಧೂಪವನ್ನು ಜಗದಲ್ಲೆಲ್ಲಾ ದೇವರ ಭಕ್ತಿಯ ಪರಿಮಳವು ಪಸರಿಸಲಿ ಎಂದು ಪ್ರಾರ್ಥಿಸಿ ಸಲ್ಲಿಸಬೇಕು.

**ದೀಪ ಸಮರ್ಪಣೆ :** ಜಗತ್ತಿನ ತಮಸ್ಸನ್ನು ಕಳೆಯುವುದರ ಮೂಲಕ ಎಲ್ಲರ ಮನದಲ್ಲಿನ ಕತ್ತಲನ್ನು ನೀಗಿಸಿ ಜ್ಞಾನವೆಂಬ ಬೆಳಕನ್ನು ದಯಪಾಲಿಸು ಎಂದು ಬೇಡಿಕೊಳ್ಳಬೇಕು.

**ನೈವೇದ್ಯ ಸಮರ್ಪಣೆ :** ದೇವರು ಅನುಗ್ರಹಿಸಿದ ಯಥಾಶಕ್ತಿಯಂತೆ ಸಿದ್ಧಪಡಿಸಿಕೊಂಡ ನೈವೇದ್ಯಗಳನ್ನು ನವರತ್ನ ಖಚಿತ ಪಾತ್ರೆಗಳಲ್ಲಿ ತುಪ್ಪದಿಂದ ತಯಾರಿಸಿದ ಸವಿಯಾದ ಭೋಜ್ಯಗಳಿವು ಎಂದು ಚಿಂತಿಸುತ್ತಾ ತುಲಸೀನೀರಿನಿಂದ ಅವುಗಳ ಮೇಲೆ ಪ್ರೋಕ್ಷಿಸಿ ಪರಿಷೇಚನೆಯನ್ನು ವಿಧಿಪೂರ್ವಕವಾಗಿ ಮಾಡಿ ದೇವರೆ ಒಪ್ಪಿಸಿಕೋ ಎಂದು ಸುದರ್ಶನ ಮತ್ತು ಗರುಡ ಮುದ್ರೆಯನ್ನು ತೋರಿಸಿ ಮಾನಸಿಕವಾಗಿ ದೇವರ ಮುಂದೆ ಒಂದು ಪರದೆಯನ್ನು ಕಲ್ಪಿಸಿಕೊಂಡು ದೇವನು ಭೋಜನದಲ್ಲಿ ತಲ್ಲೀನನಾಗಿರುವನೆಂದು ಭಾವಿಸಿ ಮೂಲಮಂತ್ರವನ್ನು ನೂರೆಂಟು ಬಾರಿ ಜಪಿಸಬೇಕು. ನಂತರ, ಆಚಮನಕ್ಕೆ ನೀರನ್ನು ಒದಗಿಸಿದಂತೆ ಜಲವನ್ನು ಸಮರ್ಪಿಸಬೇಕು.

**ಸುಫಲ :** ತೆಂಗಿನಕಾಯಿ, ಕಿತ್ತಳೆ, ಬಾಳೆ, ದ್ರಾಕ್ಷಿ, ದಾಳಿಂಬೆ, ಖರ್ಜೂರ, ಮಾವು, ಹಲಸು ಮುಂತಾದ ಫಲವನ್ನು ಶಕ್ತ್ಯಾನುಸಾರ ಭಕ್ತಿಯಿಂದ ಸಮರ್ಪಿಸಬೇಕು.



**ಪುಷ್ಪ, ತಾಂಬೂಲ ಮತ್ತು ದಕ್ಷಿಣೆ :** ಮೂಲಮಂತ್ರವನ್ನುಚ್ಚರಿಸುತ್ತಾ ಎರಡು ಬಿಡಿ ಹೂವುಗಳೊಂದಿಗೆ ಏಲಕ್ಕಿ, ಲವಂಗ, ಕರ್ಪೂರ ಮಿಶ್ರಿತ ಅಡಿಕೆ ಮತ್ತು ಸುಣ್ಣದೊಂದಿಗೆ ತಾಂಬೂಲವನ್ನು ಸ್ವೀಕರಿಸು ದೇವ ಎಂದು ಪ್ರಾರ್ಥಿಸಿ ಸ್ವರ್ಣದಕ್ಷಿಣೆಯನ್ನು ಅನಂತ ಪುಣ್ಯದ ಫಲಾಪೇಕ್ಷೆಯೊಂದಿಗೆ ಸಮರ್ಪಿಸಬೇಕು.

**ಪುನರ್ಧೂಪ :** ಅಗಣಿತ ಜ್ಞಾನದ ಕಿರಣಗಳನ್ನು ಎಲ್ಲೆಡೆ ಪಸರಿಸುವನೆಂಬ ಬಯಕೆಯೊಡನೆ ಧೂಪದಾರತಿಯನ್ನು ಬೆಳಗಿ ಅದರಿಂದ ಹೊಮ್ಮುವ ಧೂಮವು ಎಲ್ಲೆಲ್ಲೂ ಹರಡಿ ಎಲ್ಲರಿಗೂ ಜ್ಞಾನವು ಲಭಿಸಲಿ ಎಂದು ಬೇಡಿಕೊಳ್ಳಬೇಕು.

**ಮಂಗಳಾರತಿ :** ಗಂಟೆ ಮತ್ತು ಜಾಗಟೆಗಳೊಡಗೂಡಿ ದೇವರ ಪಾದಕ್ಕೆ ಮೂರು ಬಾರಿ, ಮಧ್ಯಕ್ಕೆ ಮೂರು ಬಾರಿ, ವದನಕ್ಕೆ ಮೂರು ಬಾರಿ ಮತ್ತು ಸರ್ವಾಂಗಕ್ಕೆ ಮೂರು ಬಾರಿ ಚಕ್ರದ ಆಕಾರದಲ್ಲಿ ಬಲಪ್ರದಕ್ಷಿಣೆಯಾಗಿ ಸಾವಕಾಶವಾಗಿ ಮಂಗಳಾರತಿಯನ್ನು ಮಾಡಬೇಕು. ಕರ್ಪೂರದಾರತಿ ಮಾಡುವ ಉದ್ದೇಶ; ಕರ್ಪೂರವು ತನ್ನನ್ನು ಸೋಕಿದ ಬೆಂಕಿಯಿಂದ ಹೇಗೆ ಒಂದಿಷ್ಟೂ ಅವಶೇಷವಿಲ್ಲದೇ ಸಂಪೂರ್ಣ ಉರಿದು ಬೆಳಕು ಮತ್ತು ಪರಿಮಳವನ್ನು ಎಲ್ಲೆಡೆ ಹರಿಸುವುದೋ ಹಾಗೇ ಮಾನವರು ತಮ್ಮಲ್ಲಿರುವ ಅಹಂ ಅನ್ನು ದೇವರ ಅನುಗ್ರಹವೆಂಬ ಜ್ವಾಲೆಯಿಂದ ಸಂಪೂರ್ಣ ಉರಿಸಿ ಸುಜ್ಞಾನವೆಂಬ ಬೆಳಕನ್ನು ಎಲ್ಲೆಡೆ ಎಲ್ಲರಿಗೂ ಹಂಚಬೇಕು.

**ಅಷ್ಟಪುಷ್ಪ ಸಮರ್ಪಣೆ :** ಅಷ್ಟ ಮಾನಸಪುಷ್ಪಗಳೆನಿಸಿದ ಅಹಿಂಸೆ, ದಮ, ದಯೆ, ಕ್ಷಮೆ, ಜ್ಞಾನ, ತಪಸ್ಸು, ಧ್ಯಾನ ಮತ್ತು ಸತ್ಯಗಳನ್ನು ನೆನೆಯುತ್ತಾ ಎರಡೂ ಕೈಗಳ ಬೊಗಸೆಯಲ್ಲಿ ಬಿಡಿ ಹೂವುಗಳನ್ನು ಭಕ್ತಿಯಿಂದ ಹಿಡಿದು ಮೂಲಮಂತ್ರವನ್ನು ಜಪಿಸುತ್ತಾ ದೇವರಿಗೆ ಸಮರ್ಪಿಸಬೇಕು.

**ಮಂತ್ರ ಪುಷ್ಪ :** ಯಾರಿಗೂ ಸಲ್ಲದ ಮಹತ್ತರವಾದ ಸೇವೆಯನ್ನು ನಿನಗೆ ಮುಡಿಪಾಗಿಡುವೆನೆಂದು ಭಾವಿಸಿ ಮೂಲಮಂತ್ರವನ್ನು ಜಪಿಸುತ್ತಾ ಭಗವಂತನಿಗೆ ಅರ್ಪಿಸಬೇಕು.

**ಶಂಖ ಭ್ರಮಣ :** ಮೂಲಮಂತ್ರವನ್ನು ಜಪಿಸುತ್ತಾ ಪ್ರದಕ್ಷಿಣೆಯಾಕಾರದಿ ಶಂಖದಲ್ಲಿ ನೀರನ್ನು ತುಂಬಿ ದೇವಾಗ್ನಿಯನ್ನು ನೀವಾಳಿಸಿ ಅದರಲ್ಲಿರುವ ನೀರನ್ನು ಪ್ರೋಕ್ಷಣಾಜಲವೆಂದು ಮತ್ತೊಂದು ಪಾತ್ರೆಗೆ ಸುರಿಯಬೇಕು.

**ಪ್ರದಕ್ಷಿಣೆ ಮತ್ತು ನಮಸ್ಕಾರ :** ನಮಸ್ಕಾರ ಮುದ್ರೆಯೊಡನೆ ನಾವು ಜನ್ಮ ಜನ್ಮಾಂತರಗಳಿಂದ ಮಾಡಿಕೊಂಡು ಬಂದಿರುವ ಪಾಪಗಳನ್ನು ತೊಡೆದುಹಾಕಲು ಎಂದು ಮನದಲ್ಲಿ ಸಂಕಲ್ಪಿಸಿಕೊಂಡು ಪ್ರದಕ್ಷಿಣೆಯನ್ನು ಹಾಕಬೇಕು.

**ರಮಾ ಪೂಜೆ ಮತ್ತು ನೈವೇದ್ಯ :** ಅಂಭ್ರಣೀಸೂಕ್ತವನ್ನು ಪಠಿಸುತ್ತಾ ಅಭಿಷೇಕದ ಜಲವನ್ನು ಎರೆಯುತ್ತಾ ಗಂಧ ಮತ್ತು ಪುಷ್ಪದ ಜೊತೆಗೆ ನೈವೇದ್ಯವನ್ನು ಸಮರ್ಪಿಸಬೇಕು.

**ಶ್ರೀಮುಖ್ಯಪ್ರಾಣ ಪೂಜೆ ಮತ್ತು ನೈವೇದ್ಯ :** ಬಳಿತ್ಥಾಸೂಕ್ತವನ್ನು ಸ್ತುತಿಸುತ್ತಾ ಪ್ರಾಣದೇವರಿಗೆ ಅಭಿಷೇಕದ ಜಲವನ್ನು ಎರೆಯುತ್ತಾ ಗಂಧ ಮತ್ತು ಪುಷ್ಪದ ಜೊತೆಗೆ ನೈವೇದ್ಯವನ್ನು ಸಮರ್ಪಿಸಬೇಕು.

**ಗರುಡ ಶೇಷರ ಪೂಜೆ :** ತೀರ್ಥ, ಗಂಧ ಮತ್ತು ನೈವೇದ್ಯವನ್ನು ಬ್ರಹ್ಮಾದಿ, ಸನಕಾದಿ ಮತ್ತು ಶುಕಾದಿಗಳನ್ನು ಸ್ಮರಿಸುತ್ತಾ ಅವರಿಗೆ ಅರ್ಪಿಸುತ್ತಿರುವೆವು ಎಂಬ ಭಾವನೆಯಲ್ಲಿ ಗರುಡ ಶೇಷರನ್ನು ಪೂಜಿಸಬೇಕು.

**ತತ್ವನ್ಯಾಸ ಮತ್ತು ಮಾತೃಕಾನ್ಯಾಸ :** ತೀರ್ಥ ಪ್ರಸಾದಗಳನ್ನು ಒಪ್ಪಿಸುತ್ತಾ ತ್ಯಾದಿ ಮುದ್ರೆಯನ್ನು ತೋರುತ್ತಾ ತತ್ವನ್ಯಾಸ ಮತ್ತು ಮಾತೃಕಾನ್ಯಾಸಗಳನ್ನು ಸ್ಮರಿಸಬೇಕು.

**ಪುನಃ ಪ್ರಾರ್ಥನೆ :** ದೇವರಿಂದು ಮಾಡಿಸಿದ ಈ ಪೂಜೆಯು ನಿನ್ನ ಪ್ರಸಾದವೆಂದೂ ಮತ್ತೆ ಲೌಕಿಕ, ವೈದಿಕ ವಿಧಿ ನಿಷೇಧಗಳ ಅರಿಯದವರಾದ ನಮ್ಮಂಥ ಪಾಪಿಗಳನ್ನು ಘನಕರುಣಿಯಾದ ನೀನು ನಮ್ಮನ್ನು ರಕ್ಷಿಸಿ ಆ ಪ್ರಸಾದವು ಅನವರತ ನಮಗೆ ದೊರಕುತ್ತಿರಲಿ ಮತ್ತು ಮಾಡಿದ್ದೆಲ್ಲಾ ಕರ್ಮವು ಹರಿಪೂಜೆಗೆಂದು ಭಾವವು ಬರುವಂತೆ ಕರುಣಿಸು ಎಂದು ಬೇಡಿಕೊಳ್ಳುವುದು.

**ಪ್ರತ್ಯಾವಾಹನೆ :** ಕೈಗಳಲ್ಲಿ ತುಲಸೀಯನ್ನಿಟ್ಟುಕೊಂಡು ಪ್ರತಿಮೆಯಲ್ಲಿ ಆವಾಹನೆಯಾಗಿರುವ ದೇವರನ್ನು ಮತ್ತೆ ಹಿಂದಿರುಗಿ ಹೃದಯದಲಿ ನೆಲೆಸು ಎಂದು ಬೇಡಿಕೊಳ್ಳುವುದು.

**ಕೃಷ್ಣಾರ್ಪಣ :** ತಪಸ್ಸೆಂಬ ಈ ಪೂಜಾಕಾರ್ಯದಲ್ಲಿ ನಾವು ಮೈ, ಮನ, ಮಾತಿನ, ಇಂದ್ರಿಯ, ಬುದ್ಧಿ ಮತ್ತು ಆತ್ಮಗಳೊಂದಿಗೆ ಮಾಡಿದ ಸ್ವಭಾವಕರ್ಮದಲ್ಲಿ ನಾಮದುಚ್ಚಾರಣೆ ಮತ್ತು ಕರ್ಮದಲ್ಲಿ ಲೋಪದೋಷಗಳು ಏನಾದರೂ



ಸಂಭವಿಸಿದ್ದರೆ ಆ ಮಹಾಲೋಪಗಳೆಲ್ಲವನ್ನು ನಿನ್ನ ದಯೆಯಿಂದ ಪರಿಪೂರ್ಣವಾಗಿಸಿ ನನ್ನನ್ನು ಉದ್ಧರಿಸು ಎಂದು ಬೇಡಿಕೊಳ್ಳುವುದು.

**ಸಮಾಪನ :** ಮನ್ಯು ಸೂಕ್ತವನ್ನು ನೆನೆಯುತ್ತಾ ಎಲ್ಲಾ ಹೊತ್ತಿಗೆಗಳನ್ನು ಮುಚ್ಚಿ ಪೂಜಾ ಕೈಂಕರ್ಯವನ್ನು ಸಮಾಪ್ತಿ ಮಾಡುವುದು.

**ವೈಶ್ವದೇವ, ಬಲಿಹರಣ ಮತ್ತು ಗೋಗ್ರಾಸ :** ಅಗ್ನಿಯನ್ನು ನೆನೆದು ವೈಶ್ವದೇವರಿಗೆ ಬಲಿಹರಣವನ್ನು ಮುಗಿಸಿ ತುಲಸೀ ಗೋಗ್ರಾಸದೊಂದಿಗೆ ಗುರುಹಿರಿಯರಿಗೆ, ವಿಪ್ರರಿಗೆ ಮತ್ತು ನೆರೆದ ಎಲ್ಲಾ ಭಕ್ತರಿಗೆ ತೀರ್ಥ, ಗಂಧಾಕ್ಷತೆ ಮತ್ತು ಪ್ರಸಾದವನ್ನು ಹಂಚಬೇಕು.

## ಗೃಹಪ್ರವೇಶ

ಮಣ್ಣು (ಇಟ್ಟಿಗೆ, ಕಲ್ಲು, ಮರ, ಲೋಹ ಮತ್ತು ಸಿಮೆಂಟ್) ನೀರು, ಬೆಂಕಿ ಮತ್ತು ಆಲೋಚನೆಯಿಂದ ಆವಿರ್ಭವಿಸಿದ ಒಂದು ಕಟ್ಟಡವು "ಮನೆ" ಎನಿಸಿಕೊಳ್ಳಬೇಕಾದರೆ ಅಲ್ಲಿ ಮನಗಳನ್ನು ಹೊಂದಿರುವ ಜೀವಿಗಳ ವಾಸ ಮುಖ್ಯ. ಕೇವಲ ಜೀವಿಗಳ ವಾಸಿಸುವಿಕೆಯು ಕಟ್ಟಡವನ್ನು ಮನೆಯನ್ನಾಗಿಸುವುದಿಲ್ಲ. ಕಟ್ಟಡದಲ್ಲಿ ವಾಸಿಸುವ ಜೀವಿಗಳ ಮನಗಳು ಸಂಗಮವಾಗಬೇಕು ಹಾಗೂ ಸಂಬಂಧಗಳು ಬೆಳೆಯಬೇಕು. ಜೀವಿಗಳ ಮನಗಳು ಸಂಗಮವಾಗಬೇಕಾದರೆ ಅವರ ಮನಸ್ಸಿನಲ್ಲಿ ಸುರಕ್ಷತೆ, ಶಾಂತಿ ಮತ್ತು ನೆಮ್ಮದಿಯ ಭಾವ ಅರಳಬೇಕು. ಹಾಗಾದಲ್ಲಿ ಮಾತ್ರ ಜೀವಿಗಳ ಜೀವನದಲ್ಲಿ ಅಭ್ಯುದಯ ಕಾಣಲು ಸಾಧ್ಯ. ಹೀಗೆ ಜೀವಿಗಳ ಏಳಿಗೆಯನ್ನು ಬಯಸಿ ಆ ಭೌತಿಕ ಕಟ್ಟಡವನ್ನು ಸೂಕ್ತ ಕಾರ್ಯಾಚರಣೆಗಳಿಂದ ಸಿದ್ಧಗೊಳಿಸಬೇಕಾಗುತ್ತದೆ. ಹಾಗೇ ಸಜ್ಜು ಮಾಡುವ ಕ್ರಿಯೆಗಳೇ ಗೃಹಪ್ರವೇಶ ಶಾಸ್ತ್ರ.

ಗೃಹಪ್ರವೇಶ ಶಾಸ್ತ್ರವನ್ನು ಗೃಹದ ರೀತಿಯ ಆಧಾರದ ಮೇಲೆ ಮೂರು ವಿಭಾಗಗಳನ್ನಾಗಿಸಿರುವರು ನಮ್ಮ ಪ್ರಾಚೀನರು.

1. ಮೊದಲನೆಯದು ಅಪೂರ್ವ ಗೃಹಪ್ರವೇಶ ಎಂದರೆ ಭೂಮಿಯನ್ನು ಖರೀದಿಸಿ ಆ ಜಾಗದಲ್ಲಿ ವಾಸಿಸಲು ಕಟ್ಟಡವನ್ನು ನಿರ್ಮಿಸಿ ವಾಸಿಸಲು ಅನುವು ಮಾಡುವುದು ಎಂದರ್ಥ.

- ಎರಡನೆಯದು ಸಪೂರ್ವ ಗೃಹಪ್ರವೇಶ ಎಂದರೆ ಪ್ರಸ್ತುತ ವಾಸವಿರುವ ಮನೆಯನ್ನು ಕಾರಣಾಂತರಗಳಿಂದ ಬದಲಾಯಿಸಬೇಕಾಗಿ ಬಂದಾಗ ಮತ್ತೊಂದು ಕಟ್ಟಡಕ್ಕೆ ವರ್ಗವಾಗುವ ಮೊದಲು ನಡೆಸುವ ಕಾರ್ಯ.
- ಮೂರನೆಯದು ದ್ವಂದ್ವ ಗೃಹಪ್ರವೇಶ ಎಂದರೆ ವಾಸಿಸುತ್ತಿರುವ ಮನೆಯನ್ನು ನವೀಕರಿಸಿ ವಾಸಿಸಲು ಸಜ್ಜುಗೊಳಿಸಿದಾಗ ನಡೆಸುವ ವಿಧಿ.

ಗೃಹಪ್ರವೇಶ ಕಾರ್ಯದಲ್ಲಿ ನಡೆಸುವ ಪ್ರಮುಖವಾದ ಶಾಸ್ತ್ರಗಳೆಂದರೆ ವಾಸ್ತುಪೂಜೆ, ವಾಸ್ತುಶಾಂತಿ ಮತ್ತು ಹೋಮ. ವಾಸ್ತುಪೂಜೆಯನ್ನು ಶಿಲ್ಪದೋಷ ಮತ್ತು ವಾಸ್ತುದೋಷಗಳ ನಿವಾರಣೆಗೋಸ್ಕರ ಆಚರಿಸಲಾಗುತ್ತದೆ. ವಾಸ್ತುಶಾಂತಿಯನ್ನು ಮನೆಯಲ್ಲಿ ನೆಲೆಸುವವರ ಮನದಲ್ಲಿ ಶಾಂತಿಯು ನೆಲೆಸಲಿ ಎಂಬ ಭಾವನೆಯಲ್ಲಿ ನಡೆಸಲಾಗುತ್ತದೆ. ಇನ್ನು ಹೋಮವನ್ನು ಮನೆಯಲ್ಲಿ ನೆಲೆಸಿರಬಹುದಾದ ಋಣಾತ್ಮಕ ಶಕ್ತಿಗಳನ್ನು ನಿಗ್ರಹಿಸಲು ಮತ್ತು ಪರಿಸರದ ಶುದ್ಧತೆಯನ್ನು ಇಮ್ಮಡಿಗೊಳಿಸಲು ಕೈಗೊಳ್ಳಲಾಗುತ್ತದೆ.

**ಗೃಹಪ್ರವೇಶಕ್ಕೆ ಸೂಕ್ತವಾದ ಶುಭ ಮಾಸಗಳೆಂದರೆ:**

- ಮಾಘ–ಐಶ್ವರ್ಯ ವೃದ್ಧಿಗೆ, ಫಾಲ್ಗುಣ –ಸುಸಂತಾನ ಪ್ರಾಪ್ತಿಗೆ, ವೈಶಾಖ –ಸರ್ವತೋಮುಖವಾದ ಏಳಿಗೆಗೆಂದು ಮತ್ತು ಜ್ಯೇಷ್ಠ – ಪುತ್ರಸಂತಾನ ಪ್ರಾಪ್ತಿಗೆಂದು. ಇನ್ನು ಶ್ರಾವಣ, ಕಾರ್ತೀಕ ಮತ್ತು ಮಾರ್ಗಶಿರದಲ್ಲಿ ಗೃಹಪ್ರವೇಶವಾದರೆ ಸಾಮಾನ್ಯ ಫಲಪ್ರಾಪ್ತಿಯಾಗುವುದು.

**ಅಪೂರ್ವ ಗೃಹ ಪ್ರವೇಶಕ್ಕೆ ಮುನ್ನ ಮತ್ತು ಗೃಹ ಪ್ರವೇಶದಲ್ಲಿ ಅನುಸರಿಸುವ ವಿಧಿಗಳು**

**ಭೂಮಿ ಪೂಜೆ ಅಥವಾ ಗುದ್ದಲಿಪೂಜೆ :**

- ನಿಗದಿಪಡಿಸಿದ ಶುಭದಿನ ಹಾಗೂ ಶುಭ ಘಳಿಗೆಯ ಅನುಸಾರ. ಕಟ್ಟಡವನ್ನು ಕಟ್ಟಲು ಆರಂಭಿಸುವ ಮುನ್ನ ನಿವೇಶನದ ಸ್ಥಳವನ್ನು ಶುಚಿಗೊಳಿಸಬೇಕು.



- ರಂಗೋಲಿ ಪುಡಿಯಿಂದ ಗೆರೆಯನ್ನು ಎಳೆಯುತ್ತಾ ಸಂಪೂರ್ಣ ನಿವೇಶನವನ್ನು ಚಿತ್ರದಲ್ಲಿ ಉಲ್ಲೇಖಿಸಿರುವಂತೆ ವಿಭಾಗಿಸಿ ಬ್ರಹ್ಮ ಸ್ಥಾನವನ್ನು ಗುರುತಿಸಬೇಕು.




- ನಿವೇಶನದ ದೇವ ಮೂಲೆಯಲ್ಲಿ ಮನೆ ಕಟ್ಟಲು ಬಳಸುವ ಸಾಧನಗಳಾದ ಸನಿಕೆ, ಗುದ್ದಲಿ, ಕರಣೆ, ಹಾರೆ, ಮೂಲೆಕಟ್ಟು, ಬಾಣಲಿ ಮತ್ತಿತರ ವಸ್ತುಗಳನ್ನು ಓರಣವಾಗಿ ಜೋಡಿಸಿ ಒಂದು ಸೈಜುಗಲ್ಲನ್ನು ಇರಿಸಬೇಕು.
- ಅವುಗಳ ಮುಂದೆ ಒಂದು ತಟ್ಟೆಯಲ್ಲಿ ಅರಿಶಿನ, ಕುಂಕುಮ, ಅಕ್ಷತೆ ಬಟ್ಟಲು, ಬಿಳಿಯ ಬಿಡಿ ಹೂವುಗಳು ಮತ್ತು ಒಂದು ಬಿಳಿಯ ಹಾರವನ್ನು ಇಡಬೇಕು.
- ಇನ್ನೊಂದು ತಟ್ಟೆಯಲ್ಲಿ ಪೂಜಾ ಪರಿಕರಗಳಾದ ವೀಳೆಯದೆಲೆ – 2, ಅಡಿಕೆ –2, ಗಂಧದ ಕಡ್ಡಿ–4, ಬಾಳೆಹಣ್ಣು–2, ತೆಂಗಿನಕಾಯಿ–2, ಕರ್ಪೂರ ಸ್ವಲ್ಪ, ಗಂಟೆ, ಆರತಿ ತಟ್ಟೆ, ಬೆಂಕಿಪೊಟ್ಟಣ ಮತ್ತು ಒಂದು ಕೊಡದಲ್ಲಿ ಶುದ್ಧ ನೀರು.
- ಮತ್ತೊಂದು ತಟ್ಟೆಯಲ್ಲಿ ಹಣ್ಣು ಮತ್ತು ಸಿಹಿ ತಿನಿಸು.
- ಮತ್ತೊಂದು ತಟ್ಟೆಯಲ್ಲಿ ಪಂಚಗವ್ಯ (ಹಾಲು, ಮೊಸರು, ತುಪ್ಪ, ಹಸುವಿನ ಸಗಣಿ ಮತ್ತು ಗಂಜಲದ ಮಿಶ್ರಣ).
- ಒಂದು ತಟ್ಟೆಯಲ್ಲಿ ನೆರೆದ ಆಹ್ವಾನಿತರಿಗೆ ವಿತರಿಸಲು ಯಥಾಶಕ್ತಿ ತಾಂಬೂಲ ಮತ್ತು ಪ್ರಸಾದವನ್ನು ಸಿದ್ಧಗೊಳಿಸಬೇಕು.

- ಪೂಜೆಯನ್ನು ನೆರವೇರಿಸಲು ಒಬ್ಬ ಪುರೋಹಿತರನ್ನು ಗೊತ್ತುಪಡಿಸಬೇಕು.

ನಿವೇಶನದ ಒಡೆಯರಾದ ದಂಪತಿಗಳು ಅಥವಾ ಆ ಸ್ಥಾನದಲ್ಲಿರುವ ಮಹನೀಯರು ಶುಚಿರ್ಭೂತರಾಗಿ ಸಾಂಪ್ರದಾಯಿಕ ವಸ್ತ್ರಗಳಾದ ಪಂಚೆ, ಅಂಗಿ ಮತ್ತು ಶಲ್ಯವನ್ನು ಪತಿಯು ಮತ್ತು ರೇಷ್ಮೆಯ ಸೀರೆಯನ್ನು ಪತ್ನಿಯು ಧರಿಸಿ ಪರಸ್ಪರರು ಬಿಳಿಯ ಹೂವಿನ ಹಾರಗಳನ್ನು ಹಾಕಿಕೊಂಡಿರಬೇಕು.

**ವಿಧಾನ :**

- ನಿವೇಶನದಲ್ಲೆಲ್ಲಾ ಹಸುವಿನ ಗಂಜಲವನ್ನು ಪ್ರೋಕ್ಷಿಸಬೇಕು.
- ಕಟ್ಟಡ ಕಟ್ಟುವ ಕಾರ್ಯವು ನಿರ್ವಿಘ್ನವಾಗಿ ನೆರವೇರಿ ಇಲ್ಲಿ ನೆಲೆಸುವ ಜೀವಿಗಳಿಗೆ ಸಕಲ ರೀತಿಯಲ್ಲಿ ಸುಖ, ಶಾಂತಿ. ಆರೋಗ್ಯ, ಸಂಪತ್ತು, ನೆಮ್ಮದಿ ಹಾಗೂ ಅಭಿವೃದ್ಧಿಯನ್ನು ದಯಪಾಲಿಸುವಂತೆ ಮನದಲ್ಲಿ ಸಂಕಲ್ಪಿಸುತ್ತಾ ದೇವಮೂಲೆಯಲ್ಲಿ ಇರಿಸಿರುವ ಪರಿಕರಗಳಿಂದ ಪೂಜಾ ಕೈಂಕರ್ಯವನ್ನು ಆರಂಭಿಸಬೇಕು.
- ನಿವೇಶನದ ದೇವಮೂಲೆ, ಇತರ ಎಲ್ಲಾ ಮೂಲೆಗಳಿಗೂ ಮತ್ತು ಬ್ರಹ್ಮಸ್ಥಾನಕ್ಕೂ ಅರಿಶಿನ ಕುಂಕುಮ ಮತ್ತು ಹೂವನ್ನಿಟ್ಟು ಗಂಧದಕಡ್ಡಿಗಳನ್ನು ಹಚ್ಚಿ ತಾಂಬೂಲವನ್ನು ನೈವೇದ್ಯ ಮಾಡಿ ತೆಂಗಿನಕಾಯಿಯನ್ನು ಒಡೆದು ನಂತರ ಕರ್ಪೂರದ ಆರತಿಯನ್ನು ಬೆಳಗಬೇಕು.
- ದಂಪತಿಗಳು ಮೊದಲು ತಾವು ಆರತಿಯನ್ನು ತೆಗೆದುಕೊಂಡು ನಂತರ ಅಲ್ಲಿ ನೆರೆದಿರುವ ಎಲ್ಲಾ ಆಹ್ವಾನಿತರಿಗೆ ಆರತಿಯನ್ನು ಕೊಡಬೇಕು.
- ನಿವೇಶನದ ಸುತ್ತಲೂ ದಂಪತಿಗಳಿಬ್ಬರು ಯಥಾಶಕ್ತಿ ಮೂರು ಅಥವಾ ನೂರೆಂಟುಸಲ ಪ್ರದಕ್ಷಿಣೆಯನ್ನು ಹಾಕಬೇಕು.
- ದಂಪತಿಗಳಿಂದ ಆರಂಭಿಸಿ ಅಲ್ಲಿ ನೆರೆದಿರುವ ಹಿರಿಯರು ಮತ್ತು ಆಹ್ವಾನಿತರು ದೇವಮೂಲೆಯಲ್ಲಿ ಅಡಿಪಾಯವನ್ನು ಸಿದ್ಧಗೊಳಿಸಲು ಹಾರೆಯ ಸಹಾಯದಿಂದ ಭೂಮಿಯನ್ನು ಮೀಟಿ ಸ್ವಲ್ಪ ಮಣ್ಣನ್ನು ತೆಗೆಯಬೇಕು.



- ಮುಂದೆ, ಪ್ರಸಾದ, ಸಿಹಿ ತಿನಿಸು ಮತ್ತು ತಾಂಬೂಲದ ವಿನಿಯೋಗ ಮಾಡುವುದು.

**ಮನೆಯ ಹೆಬ್ಬಾಗಿಲಿನ ಚೌಕಟ್ಟು ಇರಿಸುವಾಗ ವಾಸ್ತು ಪೂಜೆ :**

- ಕಟ್ಟಡ ಕಟ್ಟುವ ಕಾರ್ಮಿಕರ ಸಹಾಯದಿಂದ ಮನೆಯ ಹೆಬ್ಬಾಗಿಲಿನ ಚೌಕಟ್ಟನ್ನು ಇಡುವ ಮೊದಲು ಹೆಬ್ಬಾಗಿಲಿನ ಹೊಸ್ತಿಲು ಬರುವ ನೆಲದ ಮಧ್ಯದಲ್ಲಿ ಒಂದು ಸಣ್ಣಗುಂಡಿಯನ್ನು ತೋಡಿ ಅದರೊಳಗೆ ಪಂಚಲೋಹ ಮತ್ತು ನವರತ್ನಗಳನ್ನು ಇರಿಸಬೇಕು.
- ಹೆಬ್ಬಾಗಿಲಿನ ಚೌಕಟ್ಟನ್ನು ಇರಿಸಿ ಭದ್ರವಾಗಿ ಕಟ್ಟಿದ ಮೇಲೆ ಮನೆಯೊಡತಿಯು ಹಾಲಿನಿಂದ ಹೊಸ್ತಿಲನ್ನು ಶುಭ್ರಗೊಳಿಸಿ, ಹೊಸ್ತಿಲಿನಬಲ, ಎಡ ಮತ್ತು ಮಧ್ಯದಲ್ಲಿ ಅರಿಶಿನ ಕುಂಕುಮವನ್ನು ಎರಡೆರಡು ಸಲ ಹಚ್ಚಿ ಹೂವನ್ನಿಡಬೇಕು.
- ಗಂಧದಕಡ್ಡಿಗಳನ್ನು ಹಚ್ಚಿ ತಾಂಬೂಲವನ್ನು ನೈವೇದ್ಯ ಮಾಡಿ ತೆಂಗಿನಕಾಯಿಯನ್ನು ಒಡೆದು ಕರ್ಪೂರದ ಆರತಿ ಬೆಳಗಬೇಕು.
- ಮೊದಲು ತಾನು ಆರತಿ ತೆಗೆದುಕೊಂಡು ನಂತರ ಅಲ್ಲಿನ ನೆರೆದ ಎಲ್ಲರಿಗೂ ಆರತಿಯನ್ನು ಕೊಡಬೇಕು. ಮುಂದೆ, ಯಥಾಶಕ್ತಿ ನೆರೆದವರಿಗೆ ಸಿಹಿ ಮತ್ತು ತಾಂಬೂಲವನ್ನು ವಿತರಿಸಬೇಕು.

**ಮನೆಯ ಮೇಲ್ಛಾವಣಿಯನ್ನು ಹೊದಿಸಿದಾಗ ಪೂಜೆ :**

- ನೆರಳಿನ ಮತ್ತು ಭದ್ರತೆಯ ಪ್ರತೀಕವಾದ ಮೇಲ್ಛಾವಣಿಯು ಕಟ್ಟಡವನ್ನು ಆವರಿಸಿದಾಗ ಮನೆಯೊಡೆಯರಿಗೆ ನೆಮ್ಮದಿಯ ಭಾವ ಅರಳುತ್ತದೆ.
- ಅಂತಹ ಮಜಲನ್ನು ಕಟ್ಟಡ ಕಟ್ಟುವ ಕಾರ್ಯವು ತಲುಪಿದ ಘಳಿಗೆಯನ್ನು ಕೊಂಡಾಡಲು ನಿವೇಶನದ ದೇವಮೂಲೆಯಲ್ಲಿ ವಾಸ್ತು ಪುರುಷನಿಗೆ ಮತ್ತು ಮನೆದೇವರಿಗೆ ಪೂಜೆ ಸಲ್ಲಿಸಿ ಅಂದಿನ ಕೆಲಸದಲ್ಲಿ ಶ್ರದ್ಧೆಯಿಂದ ಶ್ರಮವಹಿಸಿ ದುಡಿದ ಕಾರ್ಮಿಕರನ್ನು ಗೌರವಿಸುವ ಸಲುವಾಗಿ ಅನ್ನದಾನವನ್ನು ನೆರವೇರಿಸಬೇಕು.

**ಅಪೂರ್ವ ಗೃಹ ಪ್ರವೇಶ :**

ಕಟ್ಟಡ ಕಟ್ಟುವ ಕಾರ್ಯವು ಶೇಕಡಾ 90ರಷ್ಟು ಮುಗಿದು ಮನೆಯ ಅಲಂಕಾರವಷ್ಟೇ ಬಾಕಿ ಉಳಿದಿರುವ ಸನ್ನಿವೇಶದಲ್ಲಿ ಗೃಹ ಪ್ರವೇಶ ಶಾಸ್ತ್ರವನ್ನು ನೆರವೇರಿಸಲಾಗುವುದು.

- ರಾಕ್ಷೋಘ್ನ ಹೋಮವನ್ನು ಗೃಹ ಪ್ರವೇಶದ ಹಿಂದಿನ ದಿನ ಪುರೋಹಿತರ ನೆರವಿನಿಂದ ಮತ್ತು ಆಹ್ವಾನಿತರ ಸಮ್ಮುಖದಲ್ಲಿ ಪೂರೈಸಬೇಕು.
- ಗಂಗೆ ಪೂಜೆಯನ್ನು ಮಾರನೆಯ ದಿನ ಬೆಳಿಗ್ಗೆ ನಿಗದಿತ ಸಮಯದಲ್ಲಿ ಮುತ್ತೈದೆಯರೊಡಗೂಡಿ ಮಾಡಬೇಕು.
- ಕಲಶ ಸ್ಥಾಪನೆ ಮತ್ತು ಪುಣ್ಯಾಃವನ್ನು ಪುರೋಹಿತರ ಸಹಾಯದಿಂದ ನೆರವೇರಿಸಬೇಕು.
- ಹಾಲು ಉಕ್ಕಿಸುವ ಶಾಸ್ತ್ರವನ್ನು ದಂಪತಿಗಳು ಮಾಡಬೇಕು.
- ನಾಂದಿಪೂಜೆ, ಗೋವನ್ನು ಮನೆ ಹೊಕ್ಕಿಸುವುದು, ನವಗ್ರಹಪೂಜೆ, ವಾಸ್ತುಪೂಜೆ, ವಾಸ್ತು ಶಾಂತಿ, ದಿಗ್ಬಂದನ, ವಾಸ್ಕಾಲಿಗೆ ಮೊಳೆನೆಡುವುದು, ಸಗ್ರಹಹೋಮ, ವಿಶೇಷಹೋಮ, ಪೂರ್ಣಾಹುತಿ, ಕುಂಬಳಕಾಯಿಯ ಬಲಿಪೂಜೆ, ದಂಪತಿಗಳು ಮನೆಯನ್ನು ದರ್ಪಣದಲ್ಲಿ ವೀಕ್ಷಿಸುವಿಕೆ, ಗಣಪತಿಹೋಮ, ವಿಶೇಷ ಪೂಜೆಗಳು (ಲಕ್ಷ್ಮಿ ಅಥವಾ ಸತ್ಯನಾರಾಯಣ ಪೂಜೆ), ಮಂಗಳಾಚರಣೆ ಮತ್ತು ಸಂತರ್ಪಣೆ.

**ಸಪೂರ್ವ ಮತ್ತು ದ್ವಂದ್ವ ಗೃಹಪ್ರವೇಶಗಳಿಗೆ ಹಾಲು ಉಕ್ಕಿಸುವ ಶಾಸ್ತ್ರ:**

**ಸಿದ್ಧತೆ:**

- ಮನೆಯ ಮುಂಬಾಗಿಲನ್ನು ಸಿಂಗರಿಸಲು ಮಾವಿನ ತಳಿರು ಮತ್ತು ಸ್ವಲ್ಪ ಕಟ್ಟಿದ ಬಿಳಿಯ ಹೂವು.
- ಮುಂಬಾಗಿಲನ್ನು ಶುಚಿ ಮಾಡಲು ಸ್ವಲ್ಪ ಹಸೀ ಹಾಲು, ಮಂಗಳ ದ್ರವ್ಯಗಳಾದ ಅರಿಶಿನ ಕುಂಕುಮ, ಅಕ್ಷತೆ ಮತ್ತು ಬಿಡಿ ಹೂವುಗಳು.
- ಒಂದು ತಟ್ಟೆಯಲ್ಲಿ ಹೂವಿನ ಹಾರ, ಬಾಳೆಯಹಣ್ಣು, ತೆಂಗಿನಕಾಯಿ, ಗಂಧದಕಡ್ಡಿಗಳು, ಕರ್ಪೂರ, ತುಪ್ಪದ ಬತ್ತಿಗಳು ಮತ್ತು ಬೆಂಕಿ ಪೊಟ್ಟಣ.
- ನಿತ್ಯ ಪೂಜೆ ಮಾಡುತ್ತಿದ್ದ ದೇವರ ವಿಗ್ರಹಗಳು, ಕಳಸ, ದೀಪಸ್ತಂಭಗಳು, ದೀಪದ ಬತ್ತಿಗಳು ಮತ್ತು ಇತರ ಪೂಜಾಸಾಮಗ್ರಿಗಳು.
- ಹೊಸ ಮನೆಯ ಪೂಜಾ ಕೋಣೆಯಲ್ಲಿರಿಸಲು ಮನೆದೇವರ ಹಾಗೂ ಗಣಪತಿಯ ಚಿತ್ರಪಟ.
- ಮುಂಬಾಗಿಲನ್ನು, ದೇವರ ಕೋಣೆಯಲ್ಲಿ ದೇವರನ್ನು ಮತ್ತು ಅಡುಗೆ ಮನೆಯ ಒಲೆಯನ್ನು ಪೂಜಿಸುವಾಗ ನೈವೇದ್ಯಕ್ಕೆಂದು ಮೂರು ತಾಂಬೂಲಗಳನ್ನು ಸಿದ್ಧಪಡಿಸಿಕೊಳ್ಳಬೇಕು.



- ಪ್ರತೀ ತಾಂಬೂಲದಲ್ಲಿ ವೀಳೆಯದೆಲೆ –2, ಅಡಿಕೆ – 2, ಬಾಳೆಹಣ್ಣು–2 ಇರಬೇಕು.
- ಜೊತೆಗೆ, ಕಾರ್ಯಕ್ರಮಕ್ಕೆ ಆಹ್ವಾನಿಸಿರುವ ಸದಸ್ಯರ ಸಂಖ್ಯೆಗೆ ಅನುಗುಣವಾಗಿ ಮಿಕ್ಕ ತಾಂಬೂಲವನ್ನು ಸಿದ್ಧಪಡಿಸಿಕೊಳ್ಳಬೇಕು.
- ಪ್ರತೀ ತಾಂಬೂಲದಲ್ಲಿ ಕನಿಷ್ಟ ಎರಡು ವೀಳ್ಯೆದೆಲೆ, ಎರಡು ಅಡಿಕೆ, ಒಂದು ಬಾಳೆಹಣ್ಣು ಇರಿಸಬೇಕು. ಉಳ್ಳವರು ಫಲತಾಂಬೂಲವನ್ನು ಸಿದ್ಧಪಡಿಸಿಕೊಳ್ಳಬಹುದು.
- ಹಾಲನ್ನು ಕಾಯಿಸಿ ಉಕ್ಕಿಸಲು ಶುಭ್ರಗೊಳಿಸಿದ ಒಲೆ ಮತ್ತು ಒಂದು ಹೊಸ ಪಾತ್ರೆ ಹಾಗೂ ಅರ್ಧ ಲೀಟರ್ ಹಾಲು.
- ಹಾಲು ಉಕ್ಕಿದ ನಂತರ ಉಳಿಯುವ ಹಾಲಿನಿಂದ ಪ್ರಸಾದವನ್ನು ತಯಾರಿಸಲು ಸಕ್ಕರೆ ಸ್ವಲ್ಪ.
- ಹಾಲುಕ್ಕಿಸುವ ದಿನದ ಹಿಂದಿನ ದಿನವೇ ಮನೆಯನ್ನೆಲ್ಲಾ ಶುಭ್ರಗೊಳಿಸಬೇಕು.
- ದಂಪತಿಗಳಲ್ಲಿ ಪತಿಯು ಬಿಳಿಯ ಪಂಚೆ ಬಿಳಿಯ ಅಂಗಿ ಮತ್ತು ಶಲ್ಯ ಹಾಗೂ ಪತ್ನಿಯು ರೇಷ್ಮೆ ಸೀರೆಯನ್ನು ಧರಿಸಿರಬೇಕು.

**ವಿಧಾನ:**

**ಮನೆಯ ಹೊಸ್ತಿಲಿನ ಪೂಜೆ (ವಾಸ್ತುಪೂಜೆ):**

- ಮನೆಯ ಇತರ ಎಲ್ಲಾ ಸಾಮಗ್ರಿಗಳನ್ನು ಹೊಸ ಮನೆಗೆ ಸಾಗಿಸುವ ಮೊದಲು ಒಂದು ಶುಭ ದಿನವನ್ನು ನಿಗದಿಪಡಿಸಿ ದಂಪತಿಗಳು ಕುಟುಂಬದ ಸದಸ್ಯರು ಹಾಗೂ ಇತರ ಆಹ್ವಾನಿತರೊಂದಿಗೆ ಹೊಸ ಮನೆಯನ್ನು ತಲುಪಬೇಕು.
- ಎಲ್ಲಾ ಪೂಜಾ ಸಲಕರಣೆಗಳನ್ನು ದೇವರ ಕೋಣೆಯಲ್ಲಿ ಒಪ್ಪ ಓರಣವಾಗಿ ಇರಿಸಬೇಕು.
- ಅಡುಗೆಯ ಮನೆಯಲ್ಲಿ ಒಲೆಯನ್ನು ಶುಚಿಗೊಳಿಸಿರಬೇಕು.
- ಮನೆಯ ಮುಂಬಾಗಿಲಿಗೆ ಮಾವಿನ ತಳಿರಿನಿಂದ ತೋರಣವನ್ನು ಹೊಸದಾಗಿ ಕಟ್ಟಬೇಕು.
- ನಂತರ ಮನೆಯ ಮುಂಬಾಗಿಲಿನ ಹೊಸ್ತಿಲನ್ನು ಹಾಲಿನಿಂದ ಶುಭ್ರಗೊಳಿಸಬೇಕು.

- ಕ್ರಮವಾಗಿ ಹೊಸಿಲಿನ ಎಡಭಾಗ, ಬಲಭಾಗ ಮತ್ತು ಮಧ್ಯದಲ್ಲಿ ಅರಿಶಿನ ಕುಂಕುಮ ಹಚ್ಚಿ ಹೂವನ್ನಿಡಬೇಕು.
- ಬಾಗಿಲಿನ ಚೌಕಟ್ಟಿನ ಮೇಲ್ಭಾಗದಲ್ಲೂ ಸಹ ಅರಿಶಿನ ಕುಂಕುಮ ಹಚ್ಚಿ ಹೂವಿನ ಚಿಕ್ಕ ಹಾರವನ್ನು ಹಾಕಬೇಕು.
- ಬಾಗಿಲಿನ ಚೌಕಟ್ಟಿನ ಮೇಲ್ಭಾಗವು ರಾಹು ಎಂದು ಬಾಗಿಲಿನ ಚೌಕಟ್ಟಿನ ಕೆಳಭಾಗವು ಕೇತು ಎಂಬ ಭಾವನೆಯಿಂದ ಕೂಡಿದೆ.
- ಹೊಸ್ತಿಲಿನ ಮುಂದೆ ನೈವೇದ್ಯಕ್ಕೆಂದು ಎರಡು ವೀಳೆಯದೆಲೆ, ಎರಡು ಅಡಿಕೆ, ಎರಡು ಬೆಲ್ಲದ ಉಂಡೆಗಳು ಮತ್ತು ಎರಡು ಬಾಳೆಯಹಣ್ಣುಗಳನ್ನು ಇಡಬೇಕು.
- ಮುಂಬಾಗಿಲಿನೆದುರು ನಿಂತು ಗಂಧದ ಕಡ್ಡಿಗಳನ್ನು ಹಚ್ಚಿ ಬೆಳಗಿ ವೀಳೆಯದೆಲೆಗಳು ಮತ್ತು ಬಾಳೆಹಣ್ಣುಗಳನ್ನು ಚಿವುಟಿ ನೈವೇದ್ಯವನ್ನು ಮಾಡಬೇಕು.
- ಒಂದು ತೆಂಗಿನಕಾಯಿಯನ್ನು ಒಡೆದು ಎರಡು ಹೋಳುಗಳನ್ನು ಹೊಸ್ತಿಲಿನ ಎಡ ಮತ್ತು ಬಲಗಡೆ ಇಟ್ಟು ಅವುಗಳಲ್ಲಿ ಒಂದೊಂದು ಬಿಡಿ ಹೂವುಗಳನ್ನು ಇಡಬೇಕು.
- ತುಪ್ಪದ ಮತ್ತು ಕರ್ಪೂರದ ಆರತಿಯನ್ನು ಬೆಳಗಬೇಕು.
- ದಂಪತಿಗಳು ಮೊದಲು ಆರತಿಯನ್ನು ತಾವುಗಳು ತೆಗೆದುಕೊಂಡು ನಂತರ ಕಾರ್ಯಕ್ರಮಕ್ಕೆ ನೆರೆದಿರುವ ಎಲ್ಲರಿಗೂ ಕೊಡಬೇಕು.
- ನಂತರ, ದಂಪತಿಗಳು ಪೂಜಾ ಸಾಮಗ್ರಿಗಳೊಂದಿಗೆ ಒಟ್ಟಿಗೆ ತಮ್ಮ ಬಲಗಾಲುಗಳನ್ನು ಮನೆಯೊಳಕ್ಕೆ ಇಟ್ಟು ನಡೆದು ದೇವರ ಕೋಣೆಯನ್ನು ತಲುಪಬೇಕು.

ನಂತರ ಎಲ್ಲಾ ಆಹ್ವಾನಿತರು ಮನೆಯೊಳಕ್ಕೆ ಬರಬೇಕು.

**ದೇವರ ಕೋಣೆಯಲ್ಲಿ ಪೂಜೆ:**

- ಎರಡು ದೀಪಸ್ತಂಭಗಳಲ್ಲಿ ಎರಡೆರಡು ಜ್ಯೋತಿಗಳನ್ನು ಬೆಳಗಿಸಬೇಕು.
- ದಂಪತಿಗಳಿಬ್ಬರೂ ಅರಿಶಿನ, ಕುಂಕುಮ ಮತ್ತು ಹೂವನ್ನು ದೇವರ ವಿಗ್ರಹಗಳಿಗೆ, ಚಿತ್ರಪಟಗಳಿಗೆ ಮತ್ತು ಕಳಸಕ್ಕೆ ಇಡಬೇಕು.



- ಗಂಧದ ಕಡ್ಡಿಗಳನ್ನು ಹಚ್ಚಿ ಬೆಳಗಿ ವೀಳೆಯದೆಲೆಗಳು ಮತ್ತು ಬಾಳೆಹಣ್ಣುಗಳನ್ನು ಚಿವುಟಿ ನೈವೇದ್ಯವನ್ನು ಮಾಡಬೇಕು.
- ಒಂದು ತೆಂಗಿನಕಾಯಿಯನ್ನು ಒಡೆದು ಎರಡು ಹೋಳುಗಳನ್ನು ದೇವರ ಎದುರಿಗೆ ಇಟ್ಟು ಅವುಗಳಲ್ಲಿ ಒಂದೊಂದು ಬಿಡಿ ಹೂವನ್ನು ಇಡಬೇಕು.
- ತುಪ್ಪದ ಬತ್ತಿ ಅಥವಾ ಕರ್ಪೂರದ ಆರತಿಯನ್ನು ಬೆಳಗಬೇಕು.
- ದಂಪತಿಗಳು ಮೊದಲು ಆರತಿಯನ್ನು ತಾವುಗಳು ತೆಗೆದುಕೊಂಡು ನಂತರ ಕಾರ್ಯಕ್ರಮಕ್ಕೆ ನೆರೆದಿರುವ ಎಲ್ಲರಿಗೂ ಕೊಡಬೇಕು.

ಒಲೆಯ ಪೂಜೆ ಹಾಗೂ ಹಾಲುಕ್ಕಿಸುವ ಶಾಸ್ತ್ರಕ್ಕೆಂದು ದಂಪತಿಗಳಿಬ್ಬರೂ ಅಡುಗೆಯ ಕೋಣೆಗೆ ನೆರೆದವರೊಡನೆ ತೆರಳಬೇಕು.

**ಒಲೆಯ ಪೂಜೆ ಮತ್ತು ಹಾಲು ಉಕ್ಕಿಸುವ ಶಾಸ್ತ್ರ :**

- ಒಲೆಯ ನಾಲ್ಕು ಮೂಲೆಗಳಿಗೆ ಅರಿಶಿನ ಕುಂಕುಮವನ್ನು ಹಚ್ಚಿ ಹೂವನ್ನಿಡಬೇಕು.
- ಒಲೆಯ ಮುಂದೆ ನೈವೇದ್ಯಕ್ಕೆಂದು ಎರಡು ವೀಳೆಯದೆಲೆ, ಎರಡು ಅಡಿಕೆ, ಎರಡು ಬೆಲ್ಲದ ಉಂಡೆಗಳು ಮತ್ತು ಎರಡು ಬಾಳೆಯಹಣ್ಣುಗಳನ್ನು ಇಡಬೇಕು.
- ಗಂಧದಕಡ್ಡಿಗಳಿಂದ ಒಲೆಯನ್ನು ಬೆಳಗಿ ವೀಳೆಯದೆಲೆ ಹಾಗೂ ಬಾಳೆಹಣ್ಣುಗಳನ್ನು ಚಿವುಟಿ ನೈವೇದ್ಯ ಮಾಡಬೇಕು.
- ತೆಂಗಿನಕಾಯಿಯನ್ನು ಒಡೆದು ಎರಡು ಹೋಳುಗಳನ್ನು ಒಲೆಯ ಎದುರಿಗೆ ಎಡ ಮತ್ತು ಬಲ ಬದಿಗಳಲ್ಲಿ ಇರಿಸಬೇಕು ಮತ್ತು ಅವುಗಳೊಳಗೆ ಒಂದೊಂದು ಬಿಡಿ ಹೂವನ್ನಿಡಬೇಕು.
- ಕರ್ಪೂರದ ಆರತಿಯನ್ನು ಬೆಳಗಿ, ದಂಪತಿಗಳು ತಾವು ಮೊದಲು ಆರತಿಯನ್ನು ಪಡೆದು ನಂತರ ನೆರೆದವರಿಗೂ ಕೊಟ್ಟು ಅದೇ ಕರ್ಪೂರದ ಜ್ಯೋತಿಯಿಂದ ಒಲೆಯನ್ನು ಹಚ್ಚಬೇಕು.
- ಉರಿಯುತ್ತಿರುವ ಒಲೆಯ ಮೇಲೆ ಹಾಲನ್ನು ತುಂಬಿದ ಹೊಸದಾದ ಪಾತ್ರೆಯನ್ನಿಡಬೇಕು.
- ಹಾಲು ಚೆನ್ನಾಗಿ ಬಿಸಿಯಾಗಿ ಉಕ್ಕುವುದನ್ನು ಗಮನಿಸುತ್ತಿರಬೇಕು. ಹಾಲು ಪಾತ್ರೆಯಿಂದ ಉಕ್ಕಿ ಹೊರಚೆಲ್ಲಿದ ಮೇಲೆ ಒಲೆಯನ್ನು

ಆರಿಸಬೇಕು. ದೇವಮೂಲೆಯ ಕಡೆಗೆ ಹಾಲು ಉಕ್ಕಿ ಪಾತ್ರೆಯಿಂದ ಹೊರ ಬಂದರೆ ಶುಭವೆಂಬ ನಂಬಿಕೆ ಇದೆ.

- ಹಾಲಿನ ಪಾತ್ರೆಯನ್ನು ಒಲೆಯ ಮೇಲಿನಿಂದ ಕೆಳಗಿಳಿಸಿ ಸ್ವಲ್ಪ ತಣ್ಣಗಾದ ನಂತರ ಅದಕ್ಕೆ ಸಕ್ಕರೆಯನ್ನು ಬೆರೆಸಿ ಎಲ್ಲರಿಗೂ ಪ್ರಸಾದವೆಂಬ ಭಾವನೆಯಿಂದ ಹಂಚಬೇಕು.
- ದಂಪತಿಗಳು ಹಿರಿಯರಿಂದ ಆರಂಭಿಸಿ ಯಥಾಶಕ್ತಿ ಐದರಿಂದ ಎಷ್ಟಾದರೂ ಬೆಸ ಸಂಖ್ಯೆಯ ಮುತ್ತೈದೆಯರಿಗೆ ತಾಂಬೂಲವನ್ನು ನೀಡಿ ಅವರ ಪಾದಗಳಿಗೆರಗಿ ನಮಸ್ಕರಿಸಿ ಅವರಿಂದ ಅಕ್ಷತೆಯ ಸಮೇತವಾದ ಆಶೀರ್ವಾದವನ್ನು ಪಡೆಯಬೇಕು.

ಮುಂದೆ ಎಲ್ಲರೊಡನೆ ಸಿದ್ಧಪಡಿಸಿದ ಹಬ್ಬದಡುಗೆಯ ರುಚಿಯನ್ನು ಸಹಭೋಜನದೊಡನೆ ಸವಿಯುವುದು.

***ಸೂಚನೆ:***

- ಗೃಹಪ್ರವೇಶ ಕಾರ್ಯವನ್ನು ನೆರವೇರಿಸುವ ದಿವಸ ದಂಪತಿಗಳು ಉಪವಾಸವಿದ್ದು ಶಾಸ್ತ್ರಗಳನ್ನು ನೆರವೇರಿಸಿದರೆ ಶುಭ.
- ಹೊಸ ಮನೆಯಲ್ಲಿ ಹಾಲುಕ್ಕಿಸಿದ ದಿನದಿಂದ ಕನಿಷ್ಠ ಮೂರು ರಾತ್ರಿಗಳು ದಂಪತಿಗಳು ಆ ಮನೆಯಲ್ಲಿ ವಾಸಿಸಬೇಕು ಮತ್ತು ಅಷ್ಟೂ ದಿನಗಳು ದೇವರ ಮುಂದೆ ಹಚ್ಚಿರುವ ದೀಪಗಳು ನಂದಬಾರದು.
- ಗೃಹಪ್ರವೇಶ ಮಾಡುತ್ತಿರುವ ದಂಪತಿಗಳಲ್ಲಿ ಪತ್ನಿಯು ಗರ್ಭಿಣಿಯಾಗಿದ್ದರೆ, ಗೃಹಪ್ರವೇಶ ಶಾಸ್ತ್ರವನ್ನು ಹೆರಿಗೆ ಆದಮೇಲೆ ಮಾಡುವುದು ಒಳ್ಳೆಯದು. ಸಮಯಾಸಂದರ್ಭಗಳ ಅನುಸಾರ ಗೃಹಪ್ರವೇಶದ ದಿನವನ್ನು ಮುಂದೂಡಲಾಗದಿದ್ದರೆ, ಪತಿಯ ಪೋಷಕರು ಅಥವಾ ಆ ಸ್ಥಾನದಲ್ಲಿರುವ ಹಿರಿಯರು ಆ ಕಾರ್ಯವನ್ನು ನೆರವೇರಿಸಬಹುದು.



# ದೇವಾಂಗ ಪಂಗಡದ ಕಿರು ಪರಿಚಯ

## ದೇವಾಂಗ ಪುರಾಣ:

ಮಹಾಪುರಾಣಗಳಲ್ಲಿ ಒಂದಾದ ಬ್ರಹ್ಮಾಂಡ ಪುರಾಣದಲ್ಲಿ ಉಲ್ಲೇಖಿಸಿರುವಂತೆ, ಮಹಾನ್ ಸಂತರು, ಶಿವಭಕ್ತರೂ ಆದ ದೇವಲ ಮಹರ್ಷಿಯ ದೇಹದಿಂದ ಉಗಮವಾದ ಸಂತತಿಯನ್ನು ದೇವಾಂಗದವರು ಎನ್ನುವರು. ದೇವಲ ಮಹರ್ಷಿಯ ಅಂಗದ ಭಾಗವೇ ಆದುದರಿಂದ ದೇವಲ ಅಂಗದವರು ಎನ್ನುತ್ತಾ ಮುಂದೆ ದೇವಾಂಗದವರು ಎಂದು ಗುರುತಿಸುವುದು ವಾಡಿಕೆಯಾಯಿತು.

ನಂಬಿಕೆಯಂತೆ, ಕೃತಯುಗದ ಆರಂಭದಲ್ಲಿ ದೇವತೆಗಳು ತಮ್ಮ ಮಾನವನ್ನು ಒಡವೆಗಳಿಂದ ಮುಚ್ಚಿಕೊಂಡು ಜೀವಿಸುತ್ತಿದ್ದ ಕಾಲವದು. ಆಗ್ಗಿಂದಾಗ್ಗೆ ದಾನವರು ದೇವತೆಗಳ ಮೇಲೆ ಲಗ್ಗೆ ಇಟ್ಟು ಅವರ ಮೈಮೇಲಿದ್ದ ಒಡವೆಗಳನ್ನು ಕಿತ್ತೊಗೆದು ನಗ್ನರನ್ನಾಗಿಸಿ ಗೇಲಿ ಮಾಡುತ್ತಿದ್ದದ್ದು ಸಾಮಾನ್ಯವಾಗಿತ್ತು. ಈ ಪ್ರಕ್ರಿಯೆಯು ಅನವರತ ನಡೆಯುತ್ತಿದ್ದು; ನೊಂದ ದೇವತೆಗಳು ಪರಿಹಾರಕ್ಕಾಗಿ ಗಜಚರ್ಮಾಂಬರನಾದ ಶಿವನ ಮೊರೆಹೊಕ್ಕರು. ಆಗ ಶಿವನು ದೇವತೆಗಳ ಮನವಿಯ ಪರಿಹಾರಾರ್ಥವಾಗಿ ಮಹರ್ಷಿಗಳಲ್ಲೊಬ್ಬರಾದ ದೇವಲ ಮಹರ್ಷಿಯನ್ನು ಬರಮಾಡಿಕೊಂಡು ವಸ್ತ್ರದ ಅವಿಷ್ಕಾರಕ್ಕೆ ಶ್ರೀಕಾರ ಹಾಕಲು ಆಜ್ಞಾಪಿಸಿದನು. ಶಿವನ ಆಜ್ಞೆಯಂತೆ ವಸ್ತ್ರಕ್ಕೆ ಬೇಕಾದ ಕಚ್ಚಾವಸ್ತುವಿನ ಹುಡುಕಾಟ ನಡೆಸುತ್ತಿರುವ ವಿಚಾರ ಅರಿತ ದಾನವರು ಮಹಿಷಾಸುರನಿಗೆ ವರದಿ ಒಪ್ಪಿಸಿದರು. ಆಗ ಮಹಿಷಾಸುರನು ದೇವಲ ಮಹರ್ಷಿಯ ವಸ್ತ್ರ ತಯಾರಿಕೆಯ ಕಾರ್ಯವನ್ನು ಭಂಗಗೊಳಿಸಲು, ದೇವೇಂದ್ರನ ಇಂದ್ರಧನುಸ್ಸನ್ನು ಯಶಸ್ವಿಯಾಗಿ ಅಪಹರಿಸಿದ್ದು; ಅದರಲ್ಲಿದ್ದ ಸಪ್ತವರ್ಣಗಳನ್ನು ಅರಗಿಸಿಕೊಂಡಿದ್ದ ತನ್ನ ಸಪ್ತದಂಡನಾಯಕರನ್ನು ನೇಮಿಸಿದನು. ಆ ಸಪ್ತದಂಡನಾಯಕರು, ದೇವಲ ಮಹರ್ಷಿಯನ್ನು ಮುಗಿಸಲು ಆತನ ಮೇಲೆ ಹಲ್ಲೆ ನಡೆಸಿದರೂ, ಆತನನ್ನು ಕೊಲ್ಲಲಾಗದೆ ಕೇವಲ ಮೂರ್ಛೆಗೊಳಿಸುವಲ್ಲಿ ಸಫಲರಾದರು. ಇದನ್ನು ಅರಿತ ಮಹಿಷಾಸುರನು ಅವಮಾನ ಸಹಿಸಲಾಗದೇ ಕ್ಷುದ್ರನಾಗಿ ತಾನೆ ಮುಂದಾಳಾಗಿ ನಿಂತು ದೇವಲೋಕಕ್ಕೆ ಲಗ್ಗೆ ಇಟ್ಟು ಇಡೀ ಜಗತ್ತನ್ನು ಕತ್ತಲಿನಲ್ಲಿ ಮುಳುಗಿಸಿದನು. ಇದನ್ನೆಲ್ಲಾ ಗಮನಿಸುತ್ತಿದ್ದ ನಾರದ ಮುನಿಗಳು ಜಗವನ್ನಾವರಿಸಿದ ಅಂಧಕಾರಕ್ಕೆ ಅಂತಿಮ ಹಾಡಲು ಶಿವನಲ್ಲಿ ಪ್ರಾರ್ಥಿಸಿದರು. ಆಗ

ಶಿವನು ನಾರದರನ್ನುದ್ದೇಶಿಸಿ, ತ್ರಿಮೂರ್ತಿಗಳಿಂದಲೂ ಸಾವುಂಟಾಗಬಾರದು ಎಂಬ ವರವನ್ನು ಪಡೆದಿರುವ ಮಹಿಷಾಸುರನನ್ನು ಕೊಲ್ಲಬೇಕೆಂದರೆ ಇರುವ ಒಂದೇ ಮಾರ್ಗ ಶಕ್ತಿ ದೇವತೆ ಎಂದು ಮನವರಿಕೆ ಮಾಡಿಕೊಟ್ಟು ಬ್ರಹ್ಮ ಮತ್ತು ವಿಷ್ಣುವನ್ನು ಬರಮಾಡಿಕೊಂಡು ಸಮಾಲೋಚನೆ ನಡೆಸಿದ ನಂತರ ತ್ರಿಮೂರ್ತಿಗಳು ಆದಿಶಕ್ತಿಯನ್ನು ಪ್ರಾರ್ಥಿಸುವರು. ಆಗ ಶಕ್ತಿ ದೇವತೆಯು ಚಾಮುಂಡೇಶ್ವರಿಯ ಅವತಾರದಲ್ಲಿ ದಶಭುಜಗಳನ್ನು ಹೊಂದಿ, ದಶಶಸ್ತ್ರಗಳಿಂದ ಅಲಂಕೃತಳಾಗಿ ಸಿಂಹಾರೂಢಳಾಗಿ ಪ್ರಕಟಗೊಂಡು ಕಣ್ಣು ಕೋರೈಸುವಂಥಹ ಪ್ರಖರ ಬೆಳಕನ್ನು ಎಲ್ಲೆಲ್ಲೂ ಚೆಲ್ಲಿದಳು. ಆ ಬೆಳಕನ್ನು ಗಮನಿಸಿದ ಮಹಿಷಾಸುರನು ದಿಗ್ಭ್ರಾಂತನಾಗಿ ಏನಾಗುತ್ತಿದೆ ಎಂದು ಸಾವರಿಸಿ ಕೊಳ್ಳುವಷ್ಟರಲ್ಲೇ ಹಠಾತ್ತನೆ ಆತನ ಮೇಲೆ ಎರಗಿದ ಚಾಮುಂಡೇಶ್ವರಿಯು ಮಹಿಷಾಸುರನ ಮರ್ಧನವನ್ನು ಯಶಸ್ವಿಯಾಗಿ ಪೂರೈಸಿದಳು. ಮಹಿಷಾಸುರನ ಮರಣವಾದ ಮೇಲೆ ಎಚ್ಚರಗೊಂಡ ದೇವಲ ಮಹರ್ಷಿಯು ಚಾಮುಂಡೇಶ್ವರಿ ಯನ್ನು ಕಂಡು ಅತ್ಯಂತ ಭಕ್ತಿಯಿಂದ ಕೊಂಡಾಡುತ್ತಾ ಸ್ತುತಿಸಿದರು. ಮುಂದೆ ಮಹಿಷಾಸುರನ ಮೈಯಲ್ಲಿನ ರಕ್ತವು ಭೂಮಿಯ ಮೇಲೆಲ್ಲಾ ಹರಡಿ ಹೆಪ್ಪುಗಟ್ಟುತ್ತಾ ಕ್ರಮೇಣ ರೇಷ್ಮೆ ಎಳೆಗಳಂತೆ ಪರಿವರ್ತನೆಗೊಂಡು ಸಪ್ತ ವರ್ಣಗಳಿಂದ ಹೊಳೆಯತೊಡಗಿತು. ಆ ಎಳೆಗಳನ್ನು ನೋಡುತ್ತಿದ್ದ ಹಾಗೇ ದೇವಲ ಮಹರ್ಷಿಗೆ ತಾನು ಹುಡುಕುತ್ತಿದ್ದ ವಸ್ತ್ರಕ್ಕೆ ಬೇಕಾದ ಕಚ್ಚಾವಸ್ತುವು ಇದೇ ಎಂದು ಗೋಚರವಾಗಿ ವಸ್ತ್ರವಿನ್ಯಾಸಕ್ಕೆ ಬುನಾದಿ ಹಾಕಲು ಸ್ಫುರಣವಾಯಿತು. ಪ್ರಥಮ ಬಾರಿಗೆ ಸಿದ್ಧವಾದ ವಸ್ತ್ರವನ್ನು ಶಿವನಿಗೆ ಅರ್ಪಿಸಿ ಆತನ ಆಶೀರ್ವಾದವನ್ನು ಪಡೆದು ದೇವತೆಗಳಿಗೆಲ್ಲಾ ವಸ್ತ್ರಗಳನ್ನು ಸಿದ್ಧಪಡಿಸಲು ಮುಂದಾದರು. ಸಕಲ ದೇವತೆಗಳಿಗೆ ತನ್ನೊಬ್ಬನಿಂದಲೇ ವಸ್ತ್ರಗಳನ್ನು ಒದಗಿಸಲು ಅಸಾಧ್ಯವೆಂದು ಅರಿತು ತನ್ನ ದೇಹದ ಅಂಗಗಳಿಂದ ಮಾನವರನ್ನು ಸೃಷ್ಟಿಸಿ ಅವರಿಗೆ ವಸ್ತ್ರದ ತಯಾರಿಕೆಯ ಕಲೆಯನ್ನು ಧಾರೆ ಎರೆದರು.

ದೇವಲ ಮಹರ್ಷಿಯು ಸಧ್ಯದ ವೈವಸ್ವತ ಮನ್ವಂತರದ ಚತುರ್ಯುಗಗಳಲ್ಲಿ ಏಳು ಅವತಾರಗಳನ್ನು ಎತ್ತಿದರೆಂದು ಪ್ರತೀತಿ ಇದೆ. ಅವುಗಳ್ಯಾವುವೆಂದರೆ, ಕೃತಯುಗದಲ್ಲಿ ದೇವಲ, ತ್ರೇತಾಯುಗದಲ್ಲಿ ದೇವಾಂಗ, ದ್ವಾಪರಯುಗದಲ್ಲಿ ವಿದ್ಯಾಧರ, ಪುಷ್ಪದಂತ ಮತ್ತು ಬೇತಾಳ ಹಾಗೂ ಕಲಿಯುಗದಲ್ಲಿ ವರುಚಿ, ಮತ್ತು ದೇವದಾಸ. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ವರ್ಣದವರು ಧರಿಸುವ ಯಜ್ಞೋಪವೀತವನ್ನು ಮೊದಲಿಗೆ ಆವಿಷ್ಕರಿಸಿ ಬಳಸಿದ್ದು ದೇವಲ ಮಹರ್ಷಿ ಎಂಬ ನಂಬಿಕೆ ಇದೆ.



**ದೇವಾಂಗ ಮೂಲ:**

ದೇವಾಂಗ ಜನಾಂಗದವರು ಬ್ರಾಹ್ಮಣ ವರ್ಣದ ಮೂಲವನ್ನು ಹೊಂದಿದ್ದು ಇವರು ಪ್ರಾಕೃತ ಬ್ರಾಹ್ಮಣರು (ಹುಟ್ಟಿನಿಂದ ಬ್ರಾಹ್ಮಣರು ಎಂದರ್ಥ) ಎನಿಸಿಕೊಳ್ಳುತ್ತಾರೆ. ಇವರ ಕುಲ ಕಸುಬು ಬಹುತೇಕ ರೇಷ್ಮೆ ಮತ್ತು ಹತ್ತಿ ಬಟ್ಟೆಗಳ ನೇಕಾರಿಕೆ. ಭಾರತದ ಉತ್ತರ ಪ್ರದೇಶದ ಉಜ್ಜಯಿನಿಯ ಚಕ್ರವರ್ತಿ ಭೋಜರಾಜ ದೇವಾಂಗ ಪಂಗಡಕ್ಕೆ ಸೇರಿದವನು. ಅಲ್ಲದೇ ಇನ್ನೂ ಅನೇಕ ರಾಜ ಮಹಾರಾಜರು ಈ ಪಂಗಡಕ್ಕೆ ಸೇರಿದವರಾಗಿದ್ದಾರೆ. ಕರ್ನಾಟಕದ ಹಂಪಿಯಲ್ಲಿ ಕಂಡು ಬರುವ ಶಿಲಾಶಾಸನಗಳ ಪ್ರಕಾರ ವಿಜಯನಗರದ ಕಾಲದಲ್ಲಿಯೂ ಸಹ ನೇಕಾರಿಕೆ ಇವರ ಕುಲಕಸುಬಾಗಿದ್ದರೂ, ದೇವಾಂಗ ಯೋಧರಿದ್ದರೆಂದು ಉಲ್ಲೇಖವಾಗಿದೆ. ಪ್ರಾಚೀನ ಕಾಲದಿಂದಲೂ ತಾಯಿ ಚೌಡೇಶ್ವರಿಯು ಈ ಜನಾಂಗದ ಮುಖ್ಯ ದೇವತೆ. ದೇವಾಂಗದವರನ್ನು ಶೈವ ದೇವಾಂಗ ಮತ್ತು ವೈಷ್ಣವ ದೇವಾಂಗದವರು ಎಂದು ಮುಖ್ಯವಾಗಿ ಎರಡು ಪಂಗಡಗಳಾಗಿ ವಿಂಗಡಿಸಲಾಗಿದೆ.

**ಭೌಗೋಳಿಕ ಹಂಚಿಕೆ:**

ದೇವಾಂಗ ಪಂಗಡಕ್ಕೆ ಸೇರಿದ ಜನಾಂಗವು ಪ್ರಪಂಚದಾದ್ಯಂತ ಚದುರಿಹೋಗಿದ್ದು ದೇಶದಲ್ಲಿ ಮುಖ್ಯವಾಗಿ ಇವರ ಇರುವಿಕೆಯು ಅಂದಿನ ಮೈಸೂರು (ಈಗಿನ ಕರ್ನಾಟಕ), ಆಂಧ್ರಪ್ರದೇಶ, ತಮಿಳುನಾಡು, ಕೇರಳ, ಮಹಾರಾಷ್ಟ್ರ, ಗುಜರಾತ್, ಮಧ್ಯಪ್ರದೇಶ, ಹಿಮಾಚಲ ಪ್ರದೇಶ, ಉತ್ತರಪ್ರದೇಶ ಮತ್ತು ಅಸ್ಸಾಂ ರಾಜ್ಯಗಳಲ್ಲಿ ಕಂಡು ಬರುತ್ತದೆ. ಇನ್ನು ಕರ್ನಾಟಕದಲ್ಲಿ ಪ್ರಧಾನವಾಗಿ ಕಂಡು ಬರುವ ಪ್ರದೇಶಗಳೆಂದರೆ ದೊಡ್ಡಬಳ್ಳಾಪುರ, ಕೊಳ್ಳೇಗಾಲ, ಬೆಂಗಳೂರು, ಮೈಸೂರು ಮತ್ತು ಮಂಗಳೂರು.

ಇವರ ವಲಸೆಗೆ ಬಹುಮುಖ್ಯ ಕಾರಣವೆಂದರೆ, ರಕ್ತಗತವಾಗಿ ಬಂದಿರುವ ಅಪ್ರತಿಮ ಕರಕುಶಲತೆಯ ಆಧಾರದ ಮೇಲೆ ತಮ್ಮ ಸರ್ವಸ್ವವನ್ನು ಮುಡಿಪಾಗಿಟ್ಟು ಸಮಾಜಕ್ಕೆ ಅತ್ಯುನ್ನತ ಗುಣಮಟ್ಟದ ವಸ್ತ್ರಗಳನ್ನು ಸಿದ್ಧಪಡಿಸಿ ದೊರಕಿಸಿ ಕೊಡುವ ನಿಟ್ಟಿನಲ್ಲಿ ಪ್ರತಿಯಾಗಿ ಅಪೇಕ್ಷಿಸುವ ಗೌರವ, ಸಂಭಾವನೆ ಮತ್ತು ಸಾಮಾಜಿಕ ಭದ್ರತೆಗೆ ಚ್ಯುತಿ ಉಂಟಾಗುವಿಕೆ. ಇಂತಹ ಪರಿಸ್ಥಿತಿಯನ್ನು ವಿಜಯನಗರದ ಅರಸರ ಕಾಲದಲ್ಲೂ ಮತ್ತು ಮೈಸೂರು ಸಂಸ್ಥಾನದ ಅರಸರ ಆಳ್ವಿಕೆಯಲ್ಲೂ ಎದುರಿಸಿದ್ದ ಅಂದಿನ ದೇವಾಂಗ ಜನರು ವಲಸೆ ಹೋಗಿ ದೇಶಾದ್ಯಂತ ಹರಡಿಕೊಂಡಿದ್ದರು.

**ದೇವರ ದಾಸೀಮಯ್ಯ:**

ಹತ್ತರಿಂದ ಹನ್ನೊಂದನೇ ಶತಮಾನದಲ್ಲಿ ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕಿನ ಮುದನೂರಿನಲ್ಲಿ ಕಾಮಯ್ಯ ಮತ್ತು ಶಂಕರಮ್ಮ ದಂಪತಿಗಳ ಕುಲಪುತ್ರನಾಗಿ ಜೀವಿಸಿದ್ದ ದೇವರ ದಾಸೀಮಯ್ಯನವರು ದೇವಾಂಗ ಜನಾಂಗದ ಕುಲಗುರುಗಳು. ಇವರು ಜೀವನೋಪಾಯಕ್ಕೆ ನೇಕಾರ ವೃತ್ತಿಯನ್ನು ಪಾಲಿಸಿಕೊಂಡಿದ್ದರೂ, ಮುಕ್ತಿ ಮಾರ್ಗವನ್ನು ಪಡೆಯಲು ಸನ್ಯಾಸತ್ವವೇ ಪ್ರಮುಖವಲ್ಲ, ಗೃಹಸ್ಥಾಶ್ರಮದಲ್ಲಿ ಇದ್ದುಕೊಂಡೇ ಜೀವನ ಸಾಕ್ಷಾತ್ಕಾರವನ್ನು ಒಲಿಸಿಕೊಂಡು ಮೋಕ್ಷವನ್ನು ಸಂಪಾದಿಸಬಹುದು ಎಂಬುದನ್ನು ನಿರೂಪಿಸಿದ್ದವರು. ಅಂದಿನ ಕಾಲದಲ್ಲಿದ್ದ ಮಹಾನ್ ವಿದ್ವಾಂಸರನ್ನು ತಮ್ಮ ಭಕ್ತಿಯ ವಾದದಿಂದ ಜಯಿಸಿ ಸರ್ವರಿಗೂ ಶಿಕ್ಷಕರ ಸಮಾನರಾಗಿದ್ದರು. ತಮ್ಮ ನಿಷ್ಕಲ್ಮಶ ಭಕ್ತಿಯಿಂದ ಶಿವನ ದರ್ಶನಭಾಗ್ಯವನ್ನು ಗಳಿಸಿದ್ದ ಇವರು ಸರಳ, ಸಜ್ಜನಿಕೆಯ ಸ್ವಭಾವದವರಾಗಿದ್ದು ಎಲ್ಲರೆಡೆ ಭಕ್ತಿಯ ಸಿಂಚನದ ಧಾರೆಯನ್ನು ಓತಪ್ರೋತವಾಗಿ ಎರೆದಿದ್ದರು. ಶತ–ಶತಮಾನಗಳಿಂದ ದಕ್ಷಿಣ ಭಾರತದಲ್ಲಿ ಕಂಡು ಕೇಳಿರುವ ಪ್ರಸಿದ್ಧ ವಚನಕಾರರಿಗಿಂತ ಮೊದಲೇ ವೇದೋಪನಿಷತ್ತುಗಳಲ್ಲಿ ಅಡಗಿರುವ ನಿಗೂಢ ತತ್ವಾದರ್ಶಗಳನ್ನು ಆಧರಿಸಿ ದೇವರ ದಾಸೀಮಯ್ಯನವರು ಸರಳವಾದ ವಚನಗಳನ್ನು ಕನ್ನಡದಲ್ಲಿ ಸೃಷ್ಟಿಸಿ ಜನಸಾಮಾನ್ಯರಿಗೆ ತಲುಪಿಸಿ ವಚನಗಳ ಪರಂಪರೆಗೆ ತಳಹದಿಯನ್ನು ಹಾಕಿದ್ದರು. ಇವರು ತಮ್ಮ ನೆಚ್ಚಿನ ದೇವರಾದ ರಾಮನಾಥ ಎಂಬ ಅಂಕಿತದೊಡನೆ ವಚನಗಳನ್ನು ರಚಿಸಿದ್ದು ದುರಾದೃಷ್ಟವಶಾತ್ ಇಲ್ಲಿಯವರೆಗೂ ಇವುಗಳ ಬಗ್ಗೆ ಹೆಚ್ಚು ಪ್ರಚಾರಗಳಾಗಲೀ ಪುಸ್ತಕಗಳಾಗಲೀ ಪ್ರಚಲಿತದಲ್ಲಿ ಇಲ್ಲ. ಇನ್ನು ಇವರ ಪತ್ನಿಯಾದ ಸಾಧ್ವೀಮಣಿ ದುಗ್ಗಳೆಯವರು ಸತಿ ಶಿರೋಮಣಿಯಾಗಿ ಮಹಾಪತಿವ್ರತೆಯಾಗಿದ್ದು ತಮ್ಮ ಗಂಡನ ಜೊತೆಯಲ್ಲಿ ಈಕೆಯು ಕೂಡ ಭಕ್ತಿಯೊಡನೆ ಸಂಸಾರ ಸಾಗರವನ್ನು ಈಜಿ ಜಯಿಸಿದ್ದರು.

॥ ಸರ್ವೇ ಜನ ಸುಖೀನೋಭವಂತು ॥



**ಆಧಾರ:**


- ಸಂಸ್ಕಾರಗಳು – ಶ್ರೀಧರಾನಂದ
- ಮನು ಸ್ಮೃತಿ – ಶೇಷ ನವರತ್ನ
- ಹಿಂದೂ ಸಂಸ್ಕಾರಗಳು – ಪ್ರೊ. ಎಂ.ಎ. ಹೆಗಡೆ
- ನಮ್ಮ ಧರ್ಮ ವಿಧಿ ಮತ್ತು ಷೋಡಶ ಸಂಸ್ಕಾರಗಳು – ಎಂ. ವಾಸುದೇವಮೂರ್ತಿ
- ಭಾರತೀಯ ಷೋಡಶ ಸಂಸ್ಕಾರಗಳು–ವೈಜ್ಞಾನಿಕ ದೃಷ್ಟಿಕೋನ – ಡಾ॥ ಮರುಳಸಿದ್ಧ ಪಂಡಿತಾರಾಧ್ಯ ಶಿವಾಚಾರ್ಯ.
- ಶ್ರೀಯುತ ಬನ್ನಂಜೆ ಗೋವಿಂದಾಚಾರ್ಯರ ಪ್ರವಚನಗಳು.
- ಅಂತರ್ಜಾಲದಲ್ಲಿ ದೊರೆತ ಮಾಹಿತಿ.
- ಪ್ರತ್ಯಕ್ಷವಾಗಿಯೋ ಅಥವಾ ಪರೋಕ್ಷವಾಗಿಯೋ ಮಹನೀಯರು ಹಂಚಿಕೊಂಡ ತಮ್ಮ ಜ್ಞಾನಕಾಣಿಕೆ.


v v v

